# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ತನು, ವಿ. ಗೋಪಾಲ್
ಶ್ರೀಹರಿ, ಜಿಎಂಬೊ, ಗೋಪಿ ಹಿರೇಬೆಟ್ಟು
**ಮುಖಪುಟ :** ಛಳಿಗಾಲದ ಬದುಕು
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಫ್ರಾನ್ಸ್‌ನ ರಾಜಧಾನಿ ಪ್ಯಾರಿಸ್ ನಗರದಲ್ಲಿ ಸಿರಿಯಾ–ಇರಾಕ್ ಒಳಗೊಂಡ ಇಸ್ಲಾಮಿಕ್ ರಾಷ್ಟ್ರ ಸ್ಥಾಪನೆಗೆ ಹೊರಟಿರುವ (ಐ.ಎಸ್.ಐ.ಎಸ್.) ಉಗ್ರರು ೨೦೧೫ರ ನವೆಂಬರ್ ೧೩ರ ರಾತ್ರೆ ಆರು ಕಡೆ ನಡೆಸಿದ ಗುಂಡಿನ ದಾಳಿಯಲ್ಲಿ ೧೨೯ ಮಂದಿ ಹತರಾಗಿದ್ದು, ನೂರಾರು ಮಂದಿ ಗಾಯಗೊಂಡಿದ್ದಾರೆ. ಈ ಹೀನಕೃತ್ಯವನ್ನು ತೀವ್ರವಾಗಿ ಖಂಡಿಸುತ್ತ 'ಹೊಸತು' ಮೃತರಿಗೆ ತನ್ನ ನಮನ ಸಲ್ಲಿಸುತ್ತದೆ. ಪ್ಯಾರಿಸ್‌ನಲ್ಲಿ ಉಗ್ರರು ನಡೆಸಿರುವ ದಾಳಿಯಲ್ಲಿ ಇದು ಮೂರನೆಯದು. ಈ ವರ್ಷ ಜನವರಿ ತಿಂಗಳಲ್ಲಿ ಪ್ರವಾದಿ ಮಹಮ್ಮದರ ವ್ಯಂಗ್ಯಚಿತ್ರ ಪ್ರಕಟಿಸಿದ್ದ 'ಚಾರ್ಲ್ ಹೆಬ್ಡೊ' ಎಂಬ ವಿಡಂಬನಾ ಪತ್ರಿಕಾ ಕಚೇರಿ ಮೇಲೆ ದಾಳಿ ನಡೆಸಿ ಹನ್ನೆರಡು ಮಂದಿ ಪತ್ರಕರ್ತರನ್ನು ಹತ್ಯೆಗೈಯ್ಯಲಾಗಿತ್ತು. ಅದೇ ತಿಂಗಳು ಯಹೂದ್ಯರ ಸೂಪರ್ ಮಾರ್ಕೆಟ್ ಮೇಲೆ ದಾಳಿ ನಡೆಸಿ ನಾಲ್ಕು ಮಂದಿಯನ್ನು ಕೊಲೆ ಗೈದಿದ್ದರು. ಭಾರತದ ವಾಣಿಜ್ಯ ನಗರಿ ಮುಂಬೈನಲ್ಲಿ ಉಗ್ರರು ನಡೆಸಿದ್ದ ಸರಣಿ ಬಾಂಬ್ ಸ್ಫೋಟದಂತೆಯೇ ಪ್ಯಾರಿಸ್‌ನಲ್ಲಿ ನಡೆದ ಗುಂಡಿನ ದಾಳಿಯೂ ಏಕಕಾಲದಲ್ಲಿ ಸಂಭವಿಸಿತು. ಇದು ಇಸ್ಲಾಮಿಕ್ ಉಗ್ರರು ಐರೋಪ್ಯ ರಾಷ್ಟ್ರವೊಂದರಲ್ಲಿ ನಡೆಸಿರುವ ದಾಳಿಗಳಲ್ಲಿ ಅತಿ ದೊಡ್ಡದು. ದಿನಕಳೆದಂತೆ ಐಎಸ್ ಉಗ್ರರ ಉಪಟಳ ಹೆಚ್ಚುತ್ತಿದೆ. ನ್ಯೂಯಾರ್ಕ್ ನಗರದ ಅವಳಿ ಕಟ್ಟಡಗಳ ಮೇಲೆ ಈ ಶತಮಾನದ ಪ್ರಾರಂಭದಲ್ಲಿ ನಡೆದ ದಾಳಿಯ ನಂತರ ಅಮೆರಿಕ ಸಾರಿದ ಭಯೋತ್ಪಾದಕರ ವಿರುದ್ಧದ ಸಮರ ಭಯೋತ್ಪಾದನೆಯನ್ನು ಹತ್ತಿಕ್ಕುವ ಬದಲು ಅದನ್ನು ಮತ್ತಷ್ಟು ಹೆಚ್ಚಿಸಿದೆ. ಪಶ್ಚಿಮ ಏಶಿಯದಲ್ಲಿ ಮೇಲುಗೈ ಸಾಧಿಸಲು ಅರಬ್ ರಾಷ್ಟ್ರಗಳ ಮೇಲೆ ಹರಿಹಾಯ್ದು ಅಮೆರಿಕ ನಡೆಸಿದ ದೌರ್ಜನ್ಯಗಳ ಪ್ರತಿಫಲ ಜಗತ್ತಿನಲ್ಲಿ ಭಯೋತ್ಪಾದನೆಯ ಹೆಚ್ಚಳ. ಇರಾಕಿನ ಸದ್ದಾಮ್ ಹುಸೇನ್, ಲಿಬಿಯಾದ ಗದಾಫಿ ಮುಗಿಸಿದ ಮೇಲೆ ಸಿರಿಯಾದ ಅಧ್ಯಕ್ಷ ಅಸ್ಸಾದ್‌ರನ್ನು ಪದಚ್ಯುತಗೊಳಿಸಲು ಹೊರಟಿದ್ದೇ ಇಸ್ಲಾಮಿಕ್ ರಾಜ್ಯಸ್ಥಾಪನೆಯ ಉಗ್ರರು ಹುಟ್ಟಿಕೊಳ್ಳಲು ಕಾರಣ. ಹಾಗಾಗಿ ಪ್ಯಾರಿಸ್ ದಾಳಿಗೆ ಐಎಸ್ ಉಗ್ರರು ಎಷ್ಟು ಹೊಣೆಗಾರರೋ ಅಷ್ಟೇ ಹೊಣೆ ಅಮೆರಿಕದ್ದು ಕೂಡ.

* * *

ಕರ್ನಾಟಕದಲ್ಲಿ ಪದ್ಮಶ್ರೀ ಪ್ರಶಸ್ತಿಯನ್ನು ಹಿಂದಿರುಗಿಸಿದ ಸಾಹಿತಿಗಳಲ್ಲಿ ಎರಡನೆಯವರು ಸಾಹಿತಿ ದೇವನೂರ ಮಹಾದೇವ. ಇಬ್ಬರೂ ಬೇರೆ ಬೇರೆ ಕಾರಣಕ್ಕೆ ಸರಕಾರ ನೀಡಿದ್ದ ಪ್ರಶಸ್ತಿಯನ್ನು ಹಿಂದಿರುಗಿಸಿದ್ದರೂ ಮೂಲ ಉದ್ದೇಶ ಒಂದೇ – ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ದಾಳಿಯ ವಿರುದ್ಧ ಪ್ರತಿಭಟನೆ. ೧೯೭೫ರಲ್ಲಿ ಕನ್ನಡದ ಖ್ಯಾತ ಲೇಖಕ ದಿವಂಗತ ಕೆ. ಶಿವರಾಮ ಕಾರಂತರು ಇಂದಿರಾ ಗಾಂಧಿ ಹೇರಿದ್ದ ತುರ್ತು ಪರಿಸ್ಥಿತಿಯ ವಿರುದ್ಧವಾಗಿ ತಮ್ಮ ಪದ್ಮಭೂಷಣ ಪ್ರಶಸ್ತಿಯನ್ನು ಸರಕಾರಕ್ಕೆ ವಾಪಸು ಮಾಡಿದ್ದರು. ಈಗ ದೇವನೂರ ಮಹಾದೇವ ಮೋದಿ ನೇತೃತ್ವದ ಭಾಜಪ ಸರಕಾರದ ಆಡಳಿತದ ಒಂದೂವರೆ ವರ್ಷದಲ್ಲಿ ದೇಶದಲ್ಲಿ ವರ್ಧಿಸುತ್ತಿರುವ ಅಸಹಿಷ್ಣುತೆ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯಹರಣದ ವಿರುದ್ಧವಾಗಿ ದನಿ ಎತ್ತಿದ್ದಾರೆ. ಈಚೆಗೆ ಪದ್ಮಪ್ರಶಸ್ತಿ ಹಿಂದಿರುಗಿಸಿದವರಲ್ಲಿ ಕೂಡ ದೇವನೂರ ಎರಡನೆಯವರು. ಇವರಿಗೆ ಮೊದಲು ದೇಶದ ಪ್ರಖ್ಯಾತ ವಿಜ್ಞಾನಿ ಪಿ. ಎಂ. ಭಾರ್ಗವ ತಮ್ಮ ಪದ್ಮ ಪ್ರಶಸ್ತಿಯನ್ನು ಹಿಂದಿರುಗಿಸಿದ್ದರು. ದೇವನೂರ ಮಹಾದೇವ ಕೇಂದ್ರ ಸಾಹಿತ್ಯ ಅಕಾಡೆಮಿ ತಮಗೆ ನೀಡಿದ್ದ ಸಾಹಿತ್ಯ ಪುರಸ್ಕಾರವನ್ನೂ ಹಿಂದಿರುಗಿಸಿದ್ದಾರೆ.

ದೇಶದಲ್ಲಿ ವಿಷವೃಕ್ಷದಂತೆ ಹರಡುತ್ತಿರುವ ಅಸಹಿಷ್ಣುತೆ ವಿರುದ್ಧವಾಗಿ ಪ್ರತಿಭಟನೆ ತೀವ್ರಗೊಳ್ಳುತ್ತಿದೆ. ಈಚೆಗೆ ಒಂದುನೂರು ಮಂದಿ ಇತಿಹಾಸಜ್ಞರು, ವಿಜ್ಞಾನಿಗಳು, ಪ್ರಪಂಚದ ಪ್ರಮುಖ ವಿಶ್ವವಿದ್ಯಾನಿಲಯಗಳ ಮುಖ್ಯಸ್ಥರೂ ರಾಷ್ಟ್ರಪತಿ ಪ್ರಣಬ್ ಮುಖರ್ಜಿಯವರಿಗೆ ಸಲ್ಲಿಸಿರುವ ಮನವಿಪತ್ರದಲ್ಲಿ ದೇಶದ ಸಂವಿಧಾನವನ್ನು ಎತ್ತಿಹಿಡಿದು ಅಭಿವ್ಯಕ್ತಿಸ್ವಾತಂತ್ರ್ಯವನ್ನು ಕಾಪಾಡಬೇಕೆಂದೂ, ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆಗೆ ಕಡಿವಾಣ ಹಾಕಬೇಕೆಂದೂ ಒತ್ತಾಯಪಡಿಸಿದ್ದಾರೆ. ಈ ಮನವಿಪತ್ರಕ್ಕೆ ಸಹಿ ಹಾಕಿರುವವರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಹೋಮಿಭಾಭಾ, ಎಮೆರಿ ವಿಶ್ವವಿದ್ಯಾನಿಲಯದ ಗ್ಯಾನೇಂದ್ರ ಪಾಂಡೆ,

(೬ನೇ ಪುಟಕ್ಕೆ)



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೭ ಸಂಚಿಕೆ–೫ ಡಿಸೆಂಬರ್ ೨೦೧೫

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ಆರ್. ಉಡುಪ

■ **ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

■ ***ಹೊಸತು ಕಚೇರಿಯ ವಿಳಾಸ***



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


## ಸ್ಥಿರತೆಯ ಇನ್ನೊಂದು ಮುಖ

**ಸಾ**ಮಾನ್ಯವಾಗಿ ಯಾವುದೇ ರಾಜ್ಯ ಹಾಗೂ ದೇಶದ ಆಡಳಿತ ವ್ಯವಸ್ಥೆಯಲ್ಲಿ ಸ್ಥಿರತೆ ಅಪೇಕ್ಷಣೀಯವಾದ ಅಂಶ. ಇದರರ್ಥ ಪರೋಕ್ಷವಾಗಿ ಆಡಳಿತ ಪಕ್ಷದ ಬಹುಮತವನ್ನು ನಿರೀಕ್ಷಿಸುವುದು. ಭಾರತ ತುರ್ತುಪರಿಸ್ಥಿತಿಯ ನಂತರ ಬಹುಪಕ್ಷೀಯ ಆಡಳಿತ ನಡೆದಾಗಲೆಲ್ಲ ಸ್ಥಿರತೆಯ ಕೊರತೆಯನ್ನು ಎದುರಿಸಿದೆ. ಹೀಗಾಗಿ ಆಡಳಿತದಲ್ಲಿ ಗೊಂದಲ, ಜನತೆಯ ಮೇಲೆ ಮತ್ತೆ ಮತ್ತೆ ಚುನಾವಣೆಗಳ ಹೇರಿಕೆಯಾದದ್ದು ವಾಸ್ತವ ಸಂಗತಿ. ಭಾರತದಂಥ ವಿಶಾಲವಾದ ಒಕ್ಕೂಟ ವ್ಯವಸ್ಥೆಯಲ್ಲಿ ವಿವಿಧ ಪ್ರದೇಶಗಳ ರಾಜಕೀಯ ಪಕ್ಷಗಳು ಒಂದು ಸಂಯುಕ್ತರಂಗವಾಗಿ ಆಡಳಿತ ನಡೆಸುವುದು ದೇಶದ ಐಕ್ಯತೆ ದೃಷ್ಟಿಯಿಂದಲೂ ಒಳ್ಳೆಯದೆ. ಆದರೆ ನಿರ್ದಿಷ್ಟ ಸಂದರ್ಭಗಳಲ್ಲಿ ಜನತೆಯ ಹಿತಾಸಕ್ತಿಗೆ ಪೂರಕವಾದ ಕಾರ್ಯಕ್ರಮಗಳನ್ನು ಜಾರಿಗೊಳಿಸುವಾಗ ಈ ಸಂಯುಕ್ತರಂಗದಲ್ಲಿರುವ ವಿವಿಧ ಪಕ್ಷಗಳ ಹಿತಾಸಕ್ತಿಗಳು ಸಂಘರ್ಷಕ್ಕೆ ಕಾರಣವಾಗುತ್ತವೆ. ಉನ್ನತ ಜನಪ್ರತಿನಿಧಿ ವೇದಿಕೆಗಳಲ್ಲಿ ಮಹಿಳಾ ಮೀಸಲಾತಿ ವಿಷಯ ಇದಕ್ಕೊಂದು ಸ್ಪಷ್ಟ ಉದಾಹರಣೆ. ಇಂಥ ಹಲವಾರು ಉದಾಹರಣೆಗಳು ಸಂಯುಕ್ತರಂಗ ಅಥವಾ ಒಕ್ಕೂಟ ರಾಜಕಾರಣದಲ್ಲಿ ಕಾಣಿಸುತ್ತವೆ. ಇಂಥ ಸಂದರ್ಭದಲ್ಲಿ ಸಹಜವಾಗಿ ಏಕಪಕ್ಷದ ಆಡಳಿತ ವ್ಯವಸ್ಥೆಯಲ್ಲಿ ಸ್ಥಿರತೆಯನ್ನು ತಂದುಕೊಡುತ್ತದೆ ಎಂಬುದು ಒಂದು ವಾದ. ಆದರೆ ಹೀಗೆ ಬಹುಮತ ಪಡೆದ ಒಂದೇ ಪಕ್ಷದ ಆಡಳಿತವನ್ನು ಗಮನಿಸಿದಾಗಲೆಲ್ಲ ಒಂದು ಆತಂಕ ಸ್ಪಷ್ಟವಾಗಿ ಗೋಚರಿಸುತ್ತದೆ. ಅದು ಬಹುಮತ ಪಡೆದ ರಾಜಕೀಯ ಪಕ್ಷ ಅಥವಾ ಅದರ ನಾಯಕತ್ವ ಸರ್ವಾಧಿಕಾರಿ ಮನೋಭಾವವನ್ನು ಹೊಂದುವ ಅಪಾಯ. ಎಪ್ಪತ್ತರ ದಶಕದ ಆರಂಭಕ್ಕೆ ಕಾಂಗ್ರೆಸ್ ಪಕ್ಷದ ಆಂತರಿಕ ಭಿನ್ನಾಭಿಪ್ರಾಯಗಳಿಂದಾಗಿ ರಾಜಕೀಯ ಸಂಘರ್ಷ, ಪೈಪೋಟಿ ಆರಂಭವಾದಾಗ ಅಂದು ಬಹುಮತ ಪಡೆದಿದ್ದ ಶ್ರೀಮತಿ ಇಂದಿರಾಗಾಂಧಿ ನಾಯಕತ್ವದ ಆಡಳಿತ ತುರ್ತುಪರಿಸ್ಥಿತಿಯನ್ನು ದೇಶದ ಮೇಲೆ ಹೇರಿ ತನ್ನ ಸರ್ವಾಧಿಕಾರಿ ಮನೋವೃತ್ತಿಯನ್ನು ಪ್ರದರ್ಶಿಸಿತು. ಅದರ ಪರಿಣಾಮ ಕಾಂಗ್ರೆಸ್ ವಿರೋಧಿ ರಾಜಕೀಯ ಹೋರಾಟ ಒಂದು ಸಂಯುಕ್ತರಂಗ ಅಥವಾ ರಾಜಕೀಯ ಪಕ್ಷಗಳ ಒಕ್ಕೂಟದ ಯಶಸ್ಸಿಗೆ ಕಾರಣವಾಯಿತು. ಸರ್ವಾಧಿಕಾರಕ್ಕೆ ಒಂದು ಪರ್ಯಾಯ ರಾಜಕಾರಣವನ್ನು ಆರಂಭಿಸಿತ್ತು. ಎಪ್ಪತ್ತರ ದಶಕದ ಆರಂಭದಲ್ಲಿ ನಡೆದ ಈ ಸರ್ವಾಧಿಕಾರದ ವಿರುದ್ಧದ ಹೋರಾಟ ಅದೇ ದಶಕದ ಕೊನೆಯಲ್ಲಿ ಅಧಿಕಾರಕ್ಕೂ ಬಂದು ಕೇವಲ ಎರಡು ವರ್ಷಗಳಲ್ಲಿ ಅಧಿಕಾರವನ್ನು ಕಳೆದುಕೊಂಡದ್ದೂ ಆಯಿತು. ತುರ್ತು ಪರಿಸ್ಥಿತಿಯ ನಂತರ ಸರ್ವಾಧಿಕಾರದ ವಿರುದ್ಧ ಹೋರಾಡಿ ಅಧಿಕಾರಕ್ಕೆ ಬಂದ ಜನತಾಪಕ್ಷ ಆಂತರಿಕ ಭಿನ್ನಾಭಿಪ್ರಾಯಗಳಿಂದ ಅಧಿಕಾರ ಕಳೆದುಕೊಂಡು ರಾಜಕೀಯ ಅಸ್ಥಿರತೆಗೆ ಕಾರಣವಾಗಿತ್ತು.

ಎಪ್ಪತ್ತರ ದಶಕಗಳಿಂದ ಬಹುಮತ ಪಡೆದ ಏಕಪಕ್ಷೀಯ ಆಡಳಿತ ನಡೆದ ಸಂದರ್ಭದಲ್ಲೆಲ್ಲ ನಮ್ಮ ದೇಶ ಜನವಿರೋಧಿ ನೀತಿಗಳನ್ನೇ ಕಂಡಿದೆ. ಇಂಥ ಜನವಿರೋಧಿ ನೀತಿಗಳ ಹೇರಿಕೆಗೆ ಆಡಳಿತ ಪಕ್ಷಕ್ಕೆ ದೊರೆತ ಬಹುಮತವೇ ಕಾರಣ. ರಾಜಕೀಯ ಸ್ಥಿರತೆಯ ಹೆಸರಿನಲ್ಲಿ ಸರ್ವಾಧಿಕಾರ ನುಸುಳಿದೆ. ಒಂದೇ ಪಕ್ಷಕ್ಕೆ ಬಹುಮತ ದೊರೆತ ಸಂದರ್ಭದಲ್ಲಿ ಆ ಪಕ್ಷಕ್ಕೆ, ಅದರ ನಾಯಕತ್ವಕ್ಕೆ ದೇಶದ ಐಕ್ಯತೆ, ನಿಜವಾದ ಅಭಿವೃದ್ಧಿಯ ಪರಿಕಲ್ಪನೆ, ಸಾಮಾಜಿಕನ್ಯಾಯ, ಸಂವಿಧಾನಬದ್ಧತೆ, ದೇಶದ ಒಕ್ಕೂಟ ವ್ಯವಸ್ಥೆಯ ಬಗೆಗೆ ಕಾಳಜಿ, ಆಡಳಿತದಲ್ಲಿ ಪ್ರಜಾಸತ್ತಾತ್ಮಕತೆ ಹಾಗೂ ಪಾರದರ್ಶಕತೆ ಇವೆಲ್ಲವುಗಳ ಕುರಿತು ಸ್ಪಷ್ಟ ಕಲ್ಪನೆ ಹಾಗೂ ಒಲವು ಇರಬೇಕಾಗುತ್ತದೆ. ಆದರೆ ಚುನಾವಣೆಗಳಲ್ಲಿ ದೊರೆತ ಬಹುಮತ ಆಡಳಿತ ಪಕ್ಷಕ್ಕಾಗಲೀ, ಅದರ ನಾಯಕತ್ವಕ್ಕಾಗಲೀ ಅಹಮಿಕೆಯನ್ನು ತಂದರೆ ಅದು ಪ್ರಜೆಗಳಿಂದ ಆಯ್ಕೆಯಾಗಿದ್ದರೂ ಪ್ರಜಾಸತ್ತೆಯ ಕಗ್ಗೊಲೆಗೆ ಕಾರಣವಾಗುತ್ತದೆ. ಅಂಥ ಅಹಮಿಕೆ ಸದ್ಯದ ನಮ್ಮ ದೇಶದ ರಾಜಕಾರಣದಲ್ಲಿ ಕಾಣಿಸುತ್ತಿದೆ. ಹಿಂದೆ ಇಂದಿರಾಗಾಂಧಿಯವರ ಕಾಲದಲ್ಲಿ 'ಇಂಡಿಯಾ ಅಂದರೆ ಇಂದಿರಾ' ಎಂಬ ಘೋಷಣೆ ಕೇಳಿಸುತ್ತಿತ್ತು. ಇಂದು ನಮ್ಮ ಪ್ರಧಾನಿ ನರೇಂದ್ರ ಮೋದಿಯವರು ಅಂಥದೇ ಘೋಷಣೆ ಕೇಳಿಸಿಕೊಳ್ಳಲು ಉತ್ಸುಕರಾಗಿದ್ದಾರೆ. ಅದಕ್ಕಾಗಿ ಎಲ್ಲ ರೀತಿಯ ತಯಾರಿಗಳನ್ನೂ ನಡೆಸಿದ್ದಾರೆ. ಇಂಥ ಪ್ರಯತ್ನವನ್ನು ಅವರು ತಮ್ಮ ಪಕ್ಷದ ಒಳಗೂ ನಡೆಸಿದ್ದಾರೆ. ಸರ್ವಾಧಿಕಾರಿಯೊಬ್ಬನನ್ನು ಹುಟ್ಟುಹಾಕುವ ಪ್ರಯತ್ನ ಪ್ರಜ್ಞಾಪೂರ್ವಕವಾಗಿಯೇ ನಡೆಯುತ್ತಿದೆ. ಅದರ ಮೊದಲ ಪ್ರಯತ್ನವೇ 'ಕಾಂಗ್ರೆಸ್ ರಹಿತ ಭಾರತ' ಎಂಬ ಘೋಷಣೆ. ಕಾಂಗ್ರೆಸ್ ಪಕ್ಷದ ಅಸ್ತಿತ್ವ ಅದರ ನೀತಿ, ಸಂಘಟನಾಶಕ್ತಿಯನ್ನು ಆಧರಿಸಿದೆ. ಅದು ಉಳಿಯಬೇಕೇ, ಉಳಿಯಬಾರದೇ ಎಂಬ ಪ್ರಶ್ನೆ ಮುಖ್ಯವಲ್ಲ. ಆದರೆ ಒಂದು ಬಹುಮತ ಪಡೆದ ಆಡಳಿತ ಪಕ್ಷ ಪ್ರಮುಖ ವಿರೋಧ ಪಕ್ಷವನ್ನೇ ನಿರ್ನಾಮ ಮಾಡುವ ಘೋಷಣೆ ಕೊಡುವುದರ

ಮೂಲಕ ನಮ್ಮ ಬಹುಪಕ್ಷೀಯ ವ್ಯವಸ್ಥೆಯನ್ನೇ ನಿರ್ನಾಮ ಮಾಡುವ ಉದ್ದೇಶವನ್ನು ಹೊಂದಿದೆ ಎನ್ನುವುದು ಅಪಾಯಕಾರಿ ಧೋರಣೆ. ವಾಸ್ತವದಲ್ಲಿ ಗಾಂಧೀಜಿ ಹತ್ಯೆಯ ನಂತರ ರಾಷ್ಟ್ರೀಯ ಸ್ವಯಂಸೇವಕ ಸಂಘದ ರಾಜಕೀಯ ವೇದಿಕೆಯಾಗಿದ್ದ ಜನಸಂಘ ಜನತೆಯಿಂದಲೂ, ರಾಜಕೀಯ ಪಕ್ಷಗಳಿಂದಲೂ ಅಸ್ಪೃಶ್ಯತೆಗೆ ಒಳಗಾಗಿತ್ತು. ದುರಂತವೆಂದರೆ ಗಾಂಧೀಜಿಯ ಅನುಯಾಯಿ ಜಯಪ್ರಕಾಶ ನಾರಾಯಣ ಅವರೇ ತುರ್ತು ಪರಿಸ್ಥಿತಿ ವಿರೋಧಿ ಹೋರಾಟದ ಸಂದರ್ಭದಲ್ಲಿ ಜನಸಂಘಕ್ಕೆ ಮಾನ್ಯತೆ ಕೊಟ್ಟು ಶಾಪ ವಿಮೋಚನೆ ಮಾಡಿದರು. ಇಂದಿರಾ ಗಾಂಧಿ ಎಂಬ ಸರ್ವಾಧಿಕಾರಿ ವ್ಯಕ್ತಿಯ ವಿರುದ್ಧ ಹೋರಾಡುತ್ತೇನೆಂದು ಜೆ.ಪಿ.ಯವರು ಸರ್ವಾಧಿಕಾರಿ, ಫ್ಯಾಸಿಸ್ಟ್ ಪಕ್ಷವನ್ನು ಅಪ್ಪಿಕೊಂಡರು. ಜಯಪ್ರಕಾಶ ನಾರಾಯಣರ ಬಗ್ಗೆ ಗೌರವವನ್ನಿಟ್ಟುಕೊಂಡೂ ಇದು ಅವರ ಅವಿವೇಕದ ನಡೆ ಎಂದು ಹೇಳದೇ ಬೇರೆ ದಾರಿಯಿಲ್ಲ. ಜನಸಂಘ ಜನತಾಪಕ್ಷವಾದದ್ದು, ಜನತಾಪಕ್ಷ ಭಾರತೀಯ ಜನತಾಪಕ್ಷವಾದ್ದು, ಎನ್.ಡಿ.ಎ. ಭಾಗವಾಗಿದ್ದರೂ ಬಹುಮತ ಪಡೆದು ಇಂದು ಸರ್ವಾಧಿಕಾರದ ಮಾರ್ಗ ಹಿಡಿದದ್ದು ಕೇವಲ ಮೂರೂವರೆ ದಶಕದ ಬೆಳವಣಿಗೆ. ೨೦೧೪ರ ಲೋಕಸಭಾ ಚುನಾವಣೆಯ ನಂತರ ಅಧಿಕಾರಕ್ಕೇರಿದ ಬಿ.ಜೆ.ಪಿ. ತನಗೆ ಬಹುಮತವಿದ್ದರೂ ಎನ್.ಡಿ.ಎ. ಕೂಟದ ಪಕ್ಷಗಳನ್ನು ಜೊತೆಗೂಡಿಸಿಕೊಂಡೇ ಅಧಿಕಾರ ನಡೆಸಿದೆ. ಆದರೆ ಎಲ್ಲ ನಿರ್ಣಯಗಳೂ ಬಿ.ಜೆ.ಪಿ. ಮತ್ತು ಪ್ರಧಾನಿ ಮೋದಿಯವರಿಂದಲೇ ತೀರ್ಮಾನಿಸಲ್ಪಡುತ್ತಿವೆ. ಬಿ.ಜೆ.ಪಿಯಲ್ಲಿಯೂ ಆಂತರಿಕ ಪ್ರಜಾಸತ್ತೆ ಇಲ್ಲದೆ ಇರುವುದು ಬಹಿರಂಗವಾಗಿದೆ. ಬಿಹಾರ ಚುನಾವಣೆಯ ನಂತರ ಮೋದಿ ಹಾಗೂ ಅಮಿತ್ ಷಾ ವಿರುದ್ಧ ಬಿ.ಜೆ.ಪಿ.ಯ ಪ್ರಮುಖರೇ ಧ್ವನಿ ಎತ್ತಿದ್ದಾರೆ. ಅದೇನೇ ಇದ್ದರೂ ಬಿಹಾರ ಚುನಾವಣೆಯಲ್ಲಿ ನಿತೀಶ್‌ಕುಮಾರ ಬಣದ ಗೆಲುವಿಗಿಂತಲೂ ಮೋದಿ ಬಣದ ಸೋಲು ಮುಖ್ಯವಾಗುತ್ತದೆ. ಬಿ.ಜೆ.ಪಿ.ಯು ಅಧಿಕಾರಕ್ಕೆ ಬಂದ ದಿನದಿಂದಲೂ ದೇಶದಲ್ಲಿ ತೀವ್ರವಾಗಿದ್ದ ಕೋಮುವಾದಿಗಳ ಉಪಟಳ, ದಾಳಿ, ಅಸಹಿಷ್ಣುತೆ, ಜನವಿರೋಧಿ ಆರ್ಥಿಕ ನೀತಿಗಳ ಜಾರಿ, ಕಾರ್ಪೊರೇಟ್ ಕಂಪನಿಗಳ ಪರ ವಾಲಿಕೆ ಇವೆಲ್ಲವುಗಳಿಗೆ ತಮ್ಮ ಒಪ್ಪಿಗೆ ಇಲ್ಲ ಎಂಬುದನ್ನು ನಿರ್ಣಾಯಕ ಸಂದರ್ಭದಲ್ಲಿ ಬಿಹಾರದ ಜನತೆ ಹೇಳಿದ್ದಾರೆ. ಮುಂದಿನ ದಿನಗಳಲ್ಲಿ ನಿತೀಶ್‌ಕುಮಾರ, ಲಾಲೂಪ್ರಸಾದ್ ಸಂಬಂಧ ಹೇಗಿರುತ್ತದೆ. ನಿತೀಶ್ ಯಶಸ್ವಿ ನಾಯಕರಾಗುತ್ತಾರಾ, ಮೋದಿಗೆ ಪರ್ಯಾಯ ನಾಯಕರಾಗುತ್ತಾರಾ ಇಂಥ ಚರ್ಚೆಗಳೆಲ್ಲ ಈಗ ಅಪ್ರಸ್ತುತ. ಸರ್ವಾಧಿಕಾರಿಯೊಬ್ಬನ ನಡೆಯನ್ನು ನಿತೀಶ್‌ಕುಮಾರ ತಮ್ಮ ರಾಜಕೀಯ ತಂತ್ರಗಾರಿಕೆಯ ಮೂಲಕ, ಬಿಹಾರ ಜನತೆ ಮತಪೆಟ್ಟಿಗೆಯ ಮೂಲಕ ತಡೆಯೊಡ್ಡಿದ್ದಾರೆ. ಎಪ್ಪತ್ತರ ದಶಕದಲ್ಲಿ ಜಯಪ್ರಕಾಶ ನಾರಾಯಣ ಅವರು ಮಾಡಿದ ತಪ್ಪನ್ನೇ ಕಳೆದ ದಶಕದಲ್ಲಿ ನಿತೀಶ್‌ಕುಮಾರ ಮಾಡಿದ್ದರು. ಈಗ ತಿದ್ದಿಕೊಂಡಿದ್ದಾರೆ. ಬಿಹಾರದಲ್ಲಿ ಬಿ.ಜೆ.ಪಿ. ಬಲಗೊಳ್ಳಲು ನಿತೀಶ್‌ಕುಮಾರ ಅವರೇ ಕಾರಣರಾಗಿದ್ದರು. ಇಂದು ನಿರ್ಣಾಯಕ ಸಂದರ್ಭದಲ್ಲಿ ಬಿ.ಜೆ.ಪಿ.ಯ ಸರ್ವಾಧಿಕಾರಿ ಧೋರಣೆ ತಡೆಯಲು ಅವರೇ ಕಾರಣರಾಗಿದ್ದಾರೆ. ದೇಶದ ರಾಜಕೀಯ ರಂಗಕ್ಕೊಂದು ಪರ್ಯಾಯ ಮಾದರಿಯನ್ನು ತೋರಿಸಿದ್ದಾರೆ. ಅವರಿಗೂ ಬಿಹಾರದ ಜನತೆಗೂ ಅಭಿನಂದನೆ ಸಲ್ಲಬೇಕು.

ಸಿದ್ಧನಗೌಡ ಪಾಟೀಲ

## ಟಿಪ್ಪು ಸುಲ್ತಾನನ ಹೆಸರಿನಲ್ಲಿ ಅಸಹ್ಯಕರ ರಾಜಕಾರಣ

**ತ**ನ್ನ ಕಾಲದ ಎಲ್ಲರಂತೆ ಟಿಪ್ಪು ಕೂಡ ಮೈಸೂರು ಸಂಸ್ಥಾನವನ್ನು ಆಳಿದ ದೊರೆಗಳಲ್ಲೊಬ್ಬ. ಹದಿನೆಂಟನೆಯ ಶತಮಾನದ ಸಂದರ್ಭದಲ್ಲಿ ಭಾರತದ ಇತರ ಎಲ್ಲ ರಾಜಮಹಾರಾಜರುಗಳಂತೆಯೇ ವಿಸ್ತರಣಾಕಾಂಕ್ಷಿ. ಹಾಗಾಗಿ ನೆರೆರಾಜ್ಯಗಳ ಮೇಲೆ, ಆಡಳಿತದ ವಿರುದ್ಧ ಬಂಡೆದ್ದವರ ಮೇಲೆ ದಂಡೆತ್ತಿ ಹೋಗುವುದು ಅಂದಿನ ಯುಗಧರ್ಮವಾಗಿತ್ತು. ಯುದ್ಧಕಾಲದಲ್ಲಿ ಆಕ್ರಮಣಕ್ಕೀಡಾದವರ ಮೇಲೆ ದೌರ್ಜನ್ಯ ನಡೆಸುವುದು, ಸಂಪತ್ತನ್ನು ಲೂಟಿಮಾಡುವುದು, ಜನಸಾಮಾನ್ಯರನ್ನು ಭಯಭೀತರನ್ನಾಗಿಸುವುದು, ಹಿಂಸಿಸುವುದು ಎಲ್ಲವೂ ಈಗಿನ ಕಾಲದಂತೆಯೇ ಸಾಮಾನ್ಯ. ಟಿಪ್ಪು ಸುಲ್ತಾನ ಇದಾವುದಕ್ಕೂ ಹೊರತಾಗಿರಲಿಲ್ಲ. ಅವನೊಬ್ಬ ಮುಸಲ್ಮಾನ ದೊರೆ. ಭಾರತದ ಮೇಲೆ ಆಳ್ವಿಕೆ ನಡೆಸಿದ ಎಲ್ಲ ಮುಸಲ್ಮಾನ ಅರಸರಂತೆ ಬಹುಸಂಖ್ಯಾತರಾಗಿದ್ದ ಹಿಂದೂಗಳ ಸಹಕಾರ ಪಡೆದುಕೊಂಡೇ ಆಡಳಿತ ನಡೆಸಿದ್ದು. ಪರಧರ್ಮ ಸಹಿಷ್ಣುತೆ ಅವರಿಗೆ ಅನಿವಾರ್ಯವಾಗಿತ್ತು. ತಮ್ಮ ಧರ್ಮದ ಶ್ರೇಷ್ಠತೆಯ ಕುರಿತು ದುರಭಿಮಾನವಿದ್ದಾಗ್ಯೂ ಮುಸಲ್ಮಾನ ಆಡಳಿತಗಾರರು ಪ್ರಜೆಗಳ ಮೇಲೆ ತಮ್ಮ ಧರ್ಮ ಹೇರುವುದು ಸಲ್ಲದ್ದಾಗಿತ್ತು. ದೇಶಾದ್ಯಂತ ಹಿಂದೂ ದೇವಾಲಯಗಳು, ಮಠಮಾನ್ಯಗಳು ಉಳಿದುಕೊಂಡು ಬಂದಿರುವುದೇ ಅದಕ್ಕೆ ಸಾಕ್ಷಿ. ಟಿಪ್ಪು ಕೂಡ ಇದಕ್ಕೆ ಬದ್ಧ. ಇವೆಲ್ಲ ಇತಿಹಾಸಕ್ಕೆ ಸಂಬಂಧಪಟ್ಟ ವಿಷಯ.

ಟಿಪ್ಪುವಿನ ಎಲ್ಲ ಹಿರಿಯಾಸೆಗಳಿಗೆ ಅಡ್ಡಿಯಾಗಿದ್ದು ಆ ಕಾಲದಲ್ಲಿ ಭಾರತ ಪ್ರವೇಶಿಸಿ ಸಾಮ್ರಾಜ್ಯ




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸ್ಥಾಪನೆಯಲ್ಲಿ ತೊಡಗಿದ್ದ, ವ್ಯಾಪಾರಕ್ಕಾಗಿ ಬಂದ ಈಸ್ಟ್ ಇಂಡಿಯಾ ಕಂಪೆನಿಯ ಆಂಗ್ಲರು. ರಾಜ್ಯಗಳನ್ನು ಒಂದೊಂದಾಗಿ ಕಬಳಿಸುತ್ತ ಬಂದ ಆಂಗ್ಲರ ದುರಾಕ್ರಮಣದ ವಿರುದ್ಧ ಮೈಸೂರು ರಾಜ್ಯವನ್ನು ಉಳಿಸಿಕೊಳ್ಳಲು ಕಡೆಯ ತನಕ ಕಾದಾಡಿದ ವೀರ ಯೋಧ ಟಿಪ್ಪು. ಸೋಲನ್ನನುಭವಿಸಿದಾಗ ತನ್ನ ಮಕ್ಕಳನ್ನೇ ಒತ್ತೆಯಾಗಿಟ್ಟು ಬ್ರಿಟಿಷ್ ವಸಾಹತುಶಾಹಿಗಳ ವಿರುದ್ಧ ಹೋರಾಡಿ ಮಡಿದವನು. ವಿದೇಶೀಯರ ವಿರುದ್ಧ ಜೀವ ತೊರೆದು ಕಾದಾಡಿದ ವೀರರಾದ ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣರಂತೆಯೇ ಶೂರ. ಸ್ವಾತಂತ್ರ್ಯ ಉಳಿಸಿಕೊಳ್ಳಲು ಹೋರಾಡಿದವ. ಭಾರತದ ಚರಿತ್ರೆಯಲ್ಲಿ ಟಿಪ್ಪುವಿನ ಪಾತ್ರ, ಮೈಸೂರು ರಾಜ್ಯದಲ್ಲಿ ಆತನ ಆಡಳಿತ ವೈಖರಿಯ ವಿಶ್ಲೇಷಣೆ ಇತಿಹಾಸಕಾರರಿಗೆ ಬಿಟ್ಟದ್ದು.

ಇಂಥ ಯೋಧ ಟಿಪ್ಪುವನ್ನು ಇಂದು ರಾಜಕೀಯ ಲಾಭ ಪಡೆಯಲು ಉಪಯೋಗಿಸಿಕೊಳ್ಳಲು ಹೊರಟಿರುವ ಕಾಂಗ್ರೆಸ್ ಹಾಗೂ ಹಿಂದುತ್ವವಾದಿ ಭಾರತೀಯ ಜನತಾ ಪಕ್ಷ ಮತ್ತು ಸಂಘಪರಿವಾರದವರ ಪ್ರಯತ್ನ ಅಸಹನೀಯ ಹಾಗೂ ಖಂಡನೀಯ. ಕರ್ನಾಟಕದಲ್ಲಿ ಈಚೆಗೆ ಸಂಭವಿಸಿದ ಟಿಪ್ಪು ವಿರೋಧ–ಪರ ಎಲ್ಲ ದುರ್ಘಟನೆಗಳಿಗೆ, ಸಾವು ನೋವುಗಳಿಗೆ ಸರಕಾರ ಹಾಗೂ ವಿಪಕ್ಷ ಭಾಜಪ, ಸಂಘಪರಿವಾರಗಳೇ ಹೊಣೆ. ಇಷ್ಟು ವರ್ಷ ಇಲ್ಲದಿದ್ದುದು ಈಗ ದಿಢೀರ್ ಎಂದು ಜ್ಞಾನೋದಯವಾಗಿ ಸರಕಾರದ ವತಿಯಿಂದ ಟಿಪ್ಪು ಸುಲ್ತಾನನ ಜನ್ಮದಿನಾಚರಣೆ ನಡೆಸಲು ಹೊರಟಿದ್ದು ಸಂಕುಚಿತ ವೋಟ್ ಬ್ಯಾಂಕ್ ರಾಜಕಾರಣ, ಅಲ್ಪಸಂಖ್ಯಾತರ ಓಲೈಕೆ ಬಿಟ್ಟರೆ ಬೇರೇನೂ ಇಲ್ಲ. ಸರ್ಕಾರದ ಈ ನಿರ್ಧಾರಕ್ಕೆ ಹಿಂದೂ ಸಂಘಟನೆಗಳಿಂದ ತೀವ್ರವಾದ ವಿರೋಧ ಇರುವುದು ರಹಸ್ಯವೇನಲ್ಲ, ಅನಿರೀಕ್ಷಿತವೂ ಅಲ್ಲ. ಆದರೂ ಅನಗತ್ಯವಾದ ವಿವಾದ ಸೃಷ್ಟಿಯಾಗಿರುವುದೀಗ ಅಸಹ್ಯಕರ. ಟಿಪ್ಪು ಜನ್ಮದಿನಾಚರಣೆಯ ಸಂದರ್ಭವನ್ನು ಉಪಯೋಗಿಸಿಕೊಂಡು ಭಾಜಪ, ವಿಶ್ವ ಹಿಂದೂ ಪರಿಷತ್ತು, ಭಜರಂಗದಳ ಮುಂತಾದ ಸಂಘಟನೆಗಳು ಸಾಕಷ್ಟು ದಾಂಧಲೆ ನಡೆಸಿವೆ ರಾಜ್ಯದ ವಿವಿಧ ಭಾಗಗಳಲ್ಲಿ. ಇದು ಅಸಹನೆಯ ಪರಾಕಾಷ್ಠೆ, ಖಂಡನಾರ್ಹ. ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆಯ ಸಂಕೇತ. ಸಂಭವಿಸಿದ ದುರ್ಘಟನೆಗಳ ಕುರಿತು ಸರಕಾರ ತನಿಖೆಗೆ ಆದೇಶಿಸಿ ಕೈತೊಳೆದುಕೊಂಡಿದೆ. ಆದರೆ ಇದರಿಂದ ಸರಕಾರ ದುರ್ಘಟನೆಗಳ ಹೊಣೆಗಾರಿಕೆಯಿಂದ ಮುಕ್ತವಾಗುವುದಿಲ್ಲ.

ಈ ಘಟನೆಗಳಿಗೆ ಸಂಬಂಧಪಟ್ಟಂತೆ ಉಂಟಾಗಿರುವ ಇನ್ನೊಂದು ಅನವಶ್ಯಕ ವಿವಾದ ಸಾಹಿತಿ, ನಾಟಕಕಾರ ಗಿರೀಶ್ ಕಾರ್ನಾಡ್ ಕುರಿತದ್ದು. ಸರಕಾರ ಏರ್ಪಡಿಸಿದ್ದ ಟಿಪ್ಪು ಜಯಂತಿಯ ಸಮಾರಂಭದಲ್ಲಿ ಭಾಗವಹಿಸಿದ್ದ ಕಾರ್ನಾಡರು ಮಾತನಾಡುತ್ತ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ 'ಟಿಪ್ಪು ಹೆಸರು ಇಡಬಹುದಾಗಿತ್ತು' ಎಂದು ಹೇಳಿದ ಮಾತು ವಿವಾದ ಸೃಷ್ಟಿಸಿದ್ದು, ಇಂಥದ್ದಕ್ಕೇ ಕಾಯುತ್ತಿರುವ ಸಂಕುಚಿತ ಮನೋಭಾವದ ದುರಭಿಮಾನಿಗಳು ಕಾರ್ನಾಡರ ತೇಜೋವಧೆಗಾಗಿ ನಡೆಸಿದ ಗಲಭೆ, ಪ್ರತಿಕೃತಿ ದಹನ ಮುಂತಾದವು ಅಕ್ಷಮ್ಯ. ಗಿರೀಶ್ ಕಾರ್ನಾಡರು ತಾವಾಡಿದ ಮಾತುಗಳಿಗೆ ನೊಂದು ಸಾರ್ವಜನಿಕವಾಗಿ ಕ್ಷಮಾಪಣೆ ಕೇಳಿದ ನಂತರವೂ ಅವರ ವ್ಯಕ್ತಿತ್ವದ ಬಗೆಗೆ ನಿಂದನೆ ಮುಂದುವರಿಯುತ್ತಿರುವುದು, ಅವರನ್ನು ಕುರಿತು ಅವಹೇಳನಕಾರಿ ಪದಪ್ರಯೋಗ ಮಾಡುತ್ತಿರುವುದು ಸಲ್ಲದ್ದು. ವಿಶ್ವ ಹಿಂದೂ ಪರಿಷತ್ತಿನಂಥ ಹಿಂದೂ ಪರಸಂಘಟನೆಗಳು ಸಾಹಿತಿ ಕಾರ್ನಾಡರ ಅಭಿಪ್ರಾಯಗಳನ್ನು ವಿರೋಧಿಸುತ್ತ ಬಂದಿವೆ. ಈ ಅಸಹನೆಯನ್ನು ಅಸಹ್ಯಕರ ರೀತಿಯಲ್ಲಿ ವ್ಯಕ್ತಗೊಳಿಸಲು ಈ ಅವಕಾಶವನ್ನು ಉಪಯೋಗಿಸಿಕೊಂಡಿವೆ. ಇಂಥ ಪ್ರತಿರೋಧಗಳು ನಾಗರಿಕ ಸಮಾಜದ ಲಕ್ಷಣವಲ್ಲ.

ಕರ್ನಾಟಕದಲ್ಲಿ ಸಂಭವಿಸಿರುವ ಈ ಘಟನೆಗಳೆಲ್ಲ ತಲೆತಗ್ಗಿಸುವಂಥವು. ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆಯ ದಿನಗಳಲ್ಲಿ ಇಂಥ ದುರ್ಘಟನೆಗಳು ಉರಿಯುವ ಬೆಂಕಿಗೆ ತುಪ್ಪ ಸುರಿದಂತೆ.

(ಈ ತಿಂಗಳು : ೩ನೇ ಪುಟದಿಂದ)

ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಯಾಸ್ಮಿನ್‌ಖಾನ್ ಮೊದಲಾದವರಿದ್ದಾರೆ. ಇದೇ ವಿಚಾರದಲ್ಲಿ ಅಂತರರಾಷ್ಟ್ರೀಯ ಖ್ಯಾತ ಇತಿಹಾಸಕಾರ್ತಿ ರೋಮಿಲಾ ಥಾಪರ್ ನೇತೃತ್ವದಲ್ಲಿ ಇತಿಹಾಸಕಾರರು, ವಿಜ್ಞಾನಿಗಳು ಖುದ್ದಾಗಿ ರಾಷ್ಟ್ರಪತಿಗಳನ್ನು ಭೇಟಿಯಾಗಿ ಮನವಿ ಸಲ್ಲಿಸಿದ್ದಾರೆ. ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಕೂಡ ಮೂರು ಬಾರಿ ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆ ಕುರಿತು ಆತಂಕ ವ್ಯಕ್ತಪಡಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅಂತೂ ಭಾಜಪದ ಮತೀಯ ರಾಜಕಾರಣ, ಹಿಂದುತ್ವ ನೀತಿಯ ವಿರುದ್ಧ ಪ್ರತಿಭಟನೆ ಹೆಚ್ಚುತ್ತಿರುವುದು ಗಮನಾರ್ಹ.

✶ ✶ ✶

ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆಯ ವಿರುದ್ಧ ವಾಗಿ ಕ್ರಿಯಾಶೀಲರಾಗಿರುವುದು ಇತಿಹಾಸಕಾರರು, ವಿಜ್ಞಾನಿಗಳು, ಅಕಾಡೆಮಿಕ್ಸ್‌ಗಳಷ್ಟೇ ಅಲ್ಲ, ಸಿನಿಮಾ ಜಗತ್ತಿನ ಪ್ರಮುಖರೂ ಕೂಡ ಭಾಗಿಗಳಾಗಿದ್ದಾರೆ. ತಮ್ಮ ನಂಬಿಕೆಗಳನ್ನು ಎತ್ತಿಹಿಡಿಯುತ್ತಿರುವ, ಅಭಿಪ್ರಾಯಗಳನ್ನು ವ್ಯಕ್ತಗೊಳಿಸುತ್ತಿರುವ ವ್ಯಕ್ತಿಗಳನ್ನು ಕೊಲೆಗೈಯ್ಯುತ್ತಿದ್ದಾಗ್ಯೂ ಅದನ್ನು ಖಂಡಿಸುವ ಗೋಜಿಗೂ ಹೋಗದಿರುವ ಹಾಗೂ ಇಂಥ ದುಷ್ಕೃತ್ಯಗಳನ್ನು ನಡೆಸುತ್ತಿರುವ ತಂಡಗಳ ವಿರುದ್ಧ ಕ್ರಮ ಕೈಗೊಳ್ಳದಿರುವ ಸರಕಾರದ ನೀತಿಯನ್ನು ಖಂಡಿಸಿ ಚಿತ್ರ ನಿರ್ಮಾಪಕರು, ನಿರ್ದೇಶಕರು, ನಟರು, ಕಲಾವಿದರು ಪ್ರತಿಭಟನೆ ವ್ಯಕ್ತಗೊಳಿಸಿದ್ದಾರೆ. ಹಾಗೆಯೇ ಅವರು ಪೂನಾದ ಫಿಲಂ ಇನ್‌ಸ್ಟಿಟ್ಯೂಟಿನ ವಿದ್ಯಾರ್ಥಿಗಳ ಹೋರಾಟದ ಬಗೆಗೆ ಸರಕಾರ ತಳೆದಿರುವ ಅಸಡ್ಡೆ ಮನೋಭಾವದ ಬಗ್ಗೆಯೂ ತಮ್ಮ ಅತೃಪ್ತಿಯನ್ನು ತೋಡಿಕೊಂಡಿದ್ದಾರೆ ಮತ್ತು ವಿದ್ಯಾರ್ಥಿಗಳ ಬೇಡಿಕೆಗಳಿಗೆ ಪೂರ್ಣ ಬೆಂಬಲ ತೋರಿದ್ದಾರೆ. ೧೩೯ ದಿನಗಳು ಅವಿರತ ಹೋರಾಟ ನಡೆಸಿದ್ದ ಪುಣೆಯ ಫಿಲಂ ಇನ್‌ಸ್ಟಿಟ್ಯೂಟಿನ ವಿದ್ಯಾರ್ಥಿಗಳು ತಮ್ಮ ಮುಷ್ಕರ ಹೋರಾಟವನ್ನು ಅಂತ್ಯಗೊಳಿಸಿದ್ದಾರೆ. ತಮ್ಮ ಬೇಡಿಕೆಗಳ ಬಗ್ಗೆ ಸರಕಾರದ ನಿರ್ಲಕ್ಷ್ಯವನ್ನು ಖಂಡಿಸಿ ವಿದ್ಯಾರ್ಥಿಗಳು ಬೇರೆ ಪ್ರಜಾಪ್ರಭುತ್ವ ವಿಧಾನಗಳಲ್ಲಿ ತಮ್ಮ ಹೋರಾಟವನ್ನು ಮುಂದುವರಿಸುವುದಾಗಿ ಹೇಳಿದ್ದಾರೆ. ಭಾಜಪದ ಸದಸ್ಯ ಎಂಬ ಏಕೈಕ ಆಧಾರದ ಮೇಲೆ ಇನ್‌ಸ್ಟಿಟ್ಯೂಟಿನ ಅಧಿಪತಿಯಾಗಿ ನೇಮಕಗೊಂಡಿರುವ ಗಜೇಂದ್ರ ಚೌಹಾನ್‌ಗೆ ಸಹಕಾರ ನೀಡದಿರಲು ವಿದ್ಯಾರ್ಥಿಗಳು ತೀರ್ಮಾನಿಸಿದ್ದಾರೆ.

ಚಿತ್ರರಂಗದಲ್ಲಿ ತಯಾರಾಗಿರುವ ಹಲವು ಕಿರುಚಿತ್ರಗಳ ಮೇಲೆ ಹಿಂದುತ್ವವಾದಿಗಳ ಅಸಹನೆ, ವಿರೋಧ ವಿಪರೀತದ ಮಟ್ಟಕ್ಕೆ ಹೋಗುತ್ತಿದೆ. ಹಲವು ಅಂಥ ಚಿತ್ರಗಳು ಡಬ್ಬಗಳಲ್ಲೇ ಉಳಿದಿವೆ. ಅವುಗಳ ಪ್ರದರ್ಶನಕ್ಕೆ ಉಗ್ರ ಹಿಂದುತ್ವವಾದಿಗಳು ಅಡ್ಡಿಪಡಿಸುತ್ತಿದ್ದಾರೆ. ಇದರ ಮೇಲೆ ಆರೆಸ್ಸೆಸ್‌ನವರೇ ತುಂಬಿ ಕೊಂಡಿರುವ ಸೆನ್ಸಾರ್ ಮಂಡಳಿ ಕೂಡ ನಿರ್ಮಾಪಕರಿಗೆ ಕಿರುಕುಳ ನೀಡುತ್ತಿದೆ. ಇಂಥ ಅಸಹಿಷ್ಣುತೆಯನ್ನು ಪ್ರತಿಭಟಿಸಿ ಹಲವು ನಿರ್ಮಾಪಕರು, ನಟರು ಸರಕಾರ ನೀಡಿದ್ದ ಪ್ರಶಸ್ತಿಗಳನ್ನು ಹಿಂದಿರುಗಿಸಿದ್ದಾರೆ. ಇತ್ತೀಚೆಗೆ ಬೆಳೆಯುತ್ತಿರುವ ಅಸಹಿಷ್ಣುತೆ ಕುರಿತು ಕಳವಳ ವ್ಯಕ್ತಪಡಿಸಿದ ಹಿಂದಿ ಸಿನಿಮಾದ ಹೆಸರಾಂತ ನಟ ಶಾರುಕ್‌ಖಾನ್‌ನನ್ನು ಭಾಜಪದ ಹಲವು ಪ್ರಮುಖ ನಾಯಕರು ಯದ್ವಾತದ್ವಾ ತರಾಟೆಗೆ ತೆಗೆದುಕೊಂಡಿದ್ದಾರೆ. ಚಿತ್ರರಂಗದಲ್ಲಿ ಇರುವ ಖಾನ್‌ಗಳನ್ನು ಪಾಕಿಸ್ತಾನಕ್ಕೆ ಕಳಿಸಬೇಕು ಎಂದು ಭಾಜಪ ಸಂಸತ್ ಸದಸ್ಯರೊಬ್ಬರು ಹೇಳಿಕೆ ನೀಡಿದ್ದನ್ನು ಗಮನಿಸಬಹುದು. ಕನ್ನಡ ಚಿತ್ರರಂಗದ ನಿರ್ಮಾಪಕರನ್ನು ಸತಾಯಿಸಲು ಹೊಸದಾಗಿ 'ಹನುಮಸೇನೆ'ಯೊಂದು ಹುಟ್ಟಿಕೊಂಡಿದೆ. ಈ ತಂಡ ಕಿರುಚಿತ್ರ ನಿರ್ಮಾಪಕರೊಬ್ಬರಿಗೆ ಕೊಲೆ ಬೆದರಿಕೆ ಹಾಕಿದೆ. ಇಂಥ ಬೆದರಿಕೆಗಳೆಲ್ಲ ಟ್ವಿಟರ್, ಫೇಸ್‌ಬುಕ್‌ಗಳಲ್ಲಿ ನಡೆಯುವ ವ್ಯವಹಾರ. ಹಾಗಾಗಿ ಹೆಚ್ಚು ಪ್ರಚಾರ ದೊರಕುತ್ತಿಲ್ಲ. ಮುತಾಲಿಕ್ ನಾಯಕತ್ವದ ಶ್ರೀರಾಮಸೇನೆ ನಡೆಸುತ್ತಿರುವ ದಾಂಧಲೆಯನ್ನು ನಾವೆಲ್ಲ ನೋಡುತ್ತಿದ್ದೇವೆ. ಈಗ ಹನುಮಸೇನೆ ಜೊತೆಗೆ ಸೇರಿಕೊಳ್ಳುತ್ತಿದೆ. ಇನ್ನೂ ಏನೇನು ಸೇನೆಗಳು ಹುಟ್ಟಿಕೊಳ್ಳುತ್ತವೋ ನೋಡಬೇಕು. ಎಲ್ಲವೂ ಮೋದಿ ಸರಕಾರದ ಪ್ರಸಾದ ತಾನೆ.

✶ ✶ ✶

ಅಂತೂ ಕರ್ನಾಟಕದ ಮುಖ್ಯಮಂತ್ರಿ ಸಿದ್ಧರಾಮಯ್ಯ ತಮ್ಮ ಮಂತ್ರಿಮಂಡಲವನ್ನು ವಿಸ್ತರಿಸಿದ್ದಾರೆ. ನಾಲ್ಕು ಸಚಿವರ ನೇಮಕದಿಂದ ಈಗ ಸಂಪುಟ ಭರ್ತಿಯಾಗಿದೆ. ಇದರ ಮೇಲೆ ಕೊಸರು ಹತ್ತು ಶಾಸಕರನ್ನು ಸಚಿವ ಸ್ಥಾನವಿಲ್ಲದೇ ಹೋದರೂ ಕಾರ್ಯದರ್ಶಿಗಳಾಗಿ ನೇಮಿಸಿಕೊಂಡಿದ್ದಾರೆ. ಕಡೆಗೂ ಅತ್ತೂ ಕರೆದು ಉಪ ಮುಖ್ಯಮಂತ್ರಿ ಸ್ಥಾನ ಸಿಗದೇ ಹೋದರೂ ಸಚಿವಸ್ಥಾನಕ್ಕೆ ಪರಮೇಶ್ವರ ತೃಪ್ತಿಗೊಂಡಿದ್ದಾರೆ. ಸಚಿವ

ಸಂಪುಟದಲ್ಲಿ ಎರಡನೆಯದು ಎನಿಸಿಕೊಂಡಿರುವ ಗೃಹಖಾತೆಯನ್ನೇ ಪಟ್ಟುಹಿಡಿದು ಪಡೆದುಕೊಂಡಿದ್ದಾರೆ. ಗೃಹಸಚಿವರಾಗಿ ಅಧಿಕಾರ ವಹಿಸಿಕೊಂಡ ಘಳಿಗೆ ಪರಮೇಶ್ವರ ಇವರಿಗೆ ಸರಿಯಿರಲಿಲ್ಲವೇನೋ. ಮಡಿಕೇರಿಯಲ್ಲಿ ಭಾಜಪದ ಪ್ರತಿಭಟನೆಯ ಕಾರಣ ಪೊಲೀಸರ ದೌರ್ಜನ್ಯಕ್ಕೆ ಬಲಿಯಾದವರ ಪ್ರಕರಣ ಸಂಭವಿಸಿತು. ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆ ಕುರಿತು ಕೇವಲವಾಗಿ ಮಾತಾಡಿ ಪೇಚಿನಲ್ಲಿ ಸಿಕ್ಕಿಕೊಂಡರು. ಸಂಪುಟ ವಿಸ್ತರಣೆಯಿಂದಾಗಿ ಸದ್ಯಕ್ಕೆ ದಲಿತ ಮುಖ್ಯಮಂತ್ರಿಯ ವಿವಾದಕ್ಕೆ ಅಲ್ಪವಿರಾಮ ದೊರಕಿದೆ. ಮುಖ್ಯಮಂತ್ರಿ ಸಿದ್ಧರಾಮಯ್ಯ ಹಗುರವಾಗಿ ಮಾತಾಡುವುದನ್ನು ನಿಲ್ಲಿಸಿ ಸರಕಾರಿ ಕೆಲಸದಲ್ಲಿ ಹೆಚ್ಚಾಗಿ ತೊಡಗಿಕೊಳ್ಳುವುದು ಸೂಕ್ತ. ಗೋಮಾಂಸ, ಹಂದಿಮಾಂಸ ಭಕ್ಷಣೆ ವಿಚಾರದಲ್ಲಿ ತಮ್ಮ ಸ್ಥಾನಕ್ಕೆ ತಕ್ಕುದಲ್ಲದ ಮಾತುಗಳನ್ನಾಡಿ ಅನಗತ್ಯ ವಿವಾದಕ್ಕೆ ಸಿಕ್ಕಿಕೊಂಡಿದ್ದಾರೆ. ಅವರ ಇಂಥ ಲಘುವಾಕ್ಯಗಳು ಭಾಜಪದವರಿಗೆ ದಾಂಧಲೆ ಮಾಡಲು ಅವಕಾಶ ಕಲ್ಪಿಸಿದೆ. ಇಂಥ ವಿವಾದಗಳನ್ನು ಹುಟ್ಟುಹಾಕುವ ಬದಲು ಅವರು ಬೆಂಗಳೂರಿನ ಕಸದ ರಾಶಿ ಕುರಿತು ಆಲೋಚಿಸುವುದು ಒಳ್ಳೆಯದು. ಹತ್ತಾರು ದಿನಗಳಿಂದ ಬೆಂಗಳೂರಿನ ರಸ್ತೆಗಳಲ್ಲಿ ಬಿದ್ದಿರುವ ಕಸದ ರಾಶಿಯಿಂದ ದುರ್ನಾತ ಬಡಿಯುತ್ತಿದೆ. ಇದರ ಮೇಲೆ ಮಳೆ ಸುರಿಯುತ್ತಿದ್ದು ವಾತಾವರಣವನ್ನು ಇನ್ನಷ್ಟು ಕಲುಷಿತಗೊಳಿಸುತ್ತಿದೆ. ಬೆಂಗಳೂರಿನ ಉಸ್ತುವಾರಿ ಸಚಿವರುಗಳನ್ನು ಬದಲಾಯಿಸಿದರೂ ಏನೂ ಪ್ರಯೋಜನವಾಗುತ್ತಿಲ್ಲ. ನಗರದ ಮೇಯರ್ ಸಾಹೇಬರು, ಕಮೀಶನರು, ಇಂಜಿನಿಯರುಗಳು ಏನು ಮಾಡುತ್ತಿದ್ದಾರೋ ಯಾರಿಗೂ ಗೊತ್ತಾಗುತ್ತಿಲ್ಲ.

✶ ✶ ✶

ಬಿಹಾರದ ಚುನಾವಣೆಗಳಲ್ಲಿ ಮುಖ್ಯಮಂತ್ರಿ ನೀತೀಶ್ ಕುಮಾರ್ ನಾಯಕತ್ವದ ಜನತಾದಳ ಯುನೈಟೆಡ್, ಲಾಲು ಪ್ರಸಾದ್ ನೇತೃತ್ವದ ರಾಷ್ಟ್ರೀಯ ಜನತಾದಳ ಹಾಗೂ ಕಾಂಗ್ರೆಸ್ಸಿನ ಮಹಾಮೈತ್ರಿಕೂಟದ ವಿಜಯ ಮತ್ತು ಭಾಜಪ ನಾಯಕತ್ವದ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಮೈತ್ರಿಕೂಟದ ಧೂಳೀಪಟ ಈಗ ನಾನಾಬಗೆಯ ವ್ಯಾಖ್ಯಾನಗಳಿಗೆ ಗ್ರಾಸ. ಚುನಾವಣೆಯಲ್ಲಿ ಭಾರಿ ಸೋಲು ಅನುಭವಿಸಿದ ನಂತರ ರಾಜಕೀಯ ಪಕ್ಷಗಳಲ್ಲಿ ಜರಗುವ ಆತ್ಮಾವಲೋಕನ ಅಥವಾ ಶವಪರೀಕ್ಷೆ (ಪೋಸ್ಟ್‌ಮಾರ್ಟಮ್) ಪಕ್ಷಗಳಲ್ಲಿರುವ ಎಲ್ಲ ಹೊಲಸನ್ನು ಹೊರಗೆಡಹಿ ದುರ್ನಾತ ಸೃಷ್ಟಿಸುತ್ತವೆ. ಭಾಜಪ ಅದಕ್ಕೇನೂ ಹೊರತಾದುದಲ್ಲ. ಪಕ್ಷದೊಳಗೆ ಜಟಾಪಟಿ ಜೋರಾಗಿ ನಡೆಯುತ್ತಿದೆ. ಮೋದಿ–ಅಮಿತ್‌ಷಾ ಜೋಡಿಯೇ ಸೋಲಿಗೆ ಹೊಣೆ ಎನ್ನುವ ಕೂಗು ಪಕ್ಷದಲ್ಲಿ ಬಲವಾಗುತ್ತಿದೆ. ಪಕ್ಷದ ಹಿರಿಯ ಮುಖಂಡರುಗಳಾದ ಲಾಲಕೃಷ್ಣ ಅದ್ವಾನಿ, ಮುರಳಿ ಮನೋಹರ ಜೋಷಿ, ಯಶವಂತ ಸಿನ್ಹಾ ಮೊದಲಾದವರು ಬಹಿರಂಗವಾಗಿಯೇ ಪಕ್ಷದ ನಾಯಕತ್ವದ ವಿರುದ್ಧ ದೂರಿದ್ದಾರೆ. ಆದರೆ ಇದರಿಂದ ಅಮಿತ್‌ಷಾ ಆಗಲಿ ನರೇಂದ್ರ ಮೋದಿಯಾಗಲಿ ತಲೆಕೆಡಿಸಿಕೊಂಡಿಲ್ಲ. ಮೋದಿ ಎಂದಿನಂತೆ ವಿದೇಶಯಾತ್ರೆ ಕೈಗೊಂಡು ಲಂಡನ್, ಟರ್ಕಿ ದೇಶಗಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾರೆ. ಅಮಿತ್‌ಷಾ ತಮ್ಮ ಪಾಡಿಗೆ ತಾವು ಏನೂ ಆಗಿಲ್ಲವೇನೋ ಎನ್ನುವಂತೆ ನಡೆದುಕೊಳ್ಳುತ್ತಿದ್ದಾರೆ. ಸಚಿವರುಗಳಾದ ರಾಜನಾಥ ಸಿಂಗ್, ನಿತಿನ್ ಗಡ್ಕರಿ, ಅರುಣ್ ಜೇಟ್ಲಿ ಪಕ್ಷದಲ್ಲಿ ಎದ್ದಿರುವ ಸುಂಟರಗಾಳಿಯನ್ನು ತಡೆಯಲು ಮತ್ತು ಹಿರಿಯರ ವಿರುದ್ಧವಾಗಿ ಹರಿಹಾಯಲು ನೋಡುತ್ತಿದ್ದಾರೆ. ಸಂಘ ಪರಿವಾರದವರು ಅದು ಪಕ್ಷಕ್ಕೆ ಸಂಬಂಧಿಸಿದ ವಿಚಾರ ಎಂದು ಮುಗುಮ್ಮಾಗಿದ್ದಾರೆ. ಆರೆಸ್ಸೆಸ್‌ನ ಮುಖವಾಣಿ 'ಪಾಂಚಜನ್ಯ' ನೀಡಿರುವ ವಿಶ್ಲೇಷಣೆ ವಿಚಿತ್ರವಾಗಿದೆ. ಅದು ಸೋಲಿಗೆ ಭಾಜಪದ ಮೇಲೆ ಇತರ ವಿರೋಧ ಪಕ್ಷಗಳು ಒಟ್ಟುಗೂಡಿದ್ದೇ ಕಾರಣ ಎಂದು ಹೇಳಿದೆಯಲ್ಲದೆ ಬೇಕೆಂತಲೇ ದೇಶದಲ್ಲಿ ಹುಟ್ಟಿಹಾಕಿರುವ ಅಸಹಿಷ್ಣುತೆಯೇ ಕಾರಣ ಎಂದು ಹೇಳಿಕೊಂಡಿದೆ. ಆರೆಸ್ಸೆಸ್ಸಿಗೂ ಚುನಾವಣಾ ಫಲಿತಾಂಶಕ್ಕೂ ಸಂಬಂಧವಿಲ್ಲ ಎನ್ನುವಂತೆ ವರ್ತಿಸುತ್ತಿದೆ. ಈಗ ಅಮಿತ್‌ಷಾ ಭಾಜಪದ ಹಿರಿಯರ ಹಿರಿಯ ಮುಖಂಡರನ್ನು ಮಟ್ಟಹಾಕಲು ನೋಡುತ್ತಿದ್ದಾರೆ. ಈ ಹಿಂದೆ ಆರೆಸ್ಸೆಸ್‌ನ ಪ್ರಮುಖ ಸಿದ್ಧಾಂತಿಯಾಗಿದ್ದ ನಾನಾಜಿ ದೇಶಮುಖ್ ರಾಜಕಾರಣಿಗಳಿಗೆ ನಿವೃತ್ತಿಯ ವಯಸ್ಸನ್ನು ನಿಗದಿ ಮಾಡಬೇಕು ಎಂದು ಹೇಳಿದ್ದುದನ್ನು, ಅದು ಅರವತ್ತು ವರ್ಷ ದಾಟಿದವರಿಗೆ ಅನ್ವಯವಾಗಬೇಕೆಂದಿದ್ದುದನ್ನು ಸ್ಮರಿಸಿಕೊಂಡಿರುವ ಅಮಿತ್‌ಷಾ ಈಗ ಪಕ್ಷದ ಹಿರಿಯರಿಗೆ ಬೆದರಿಕೆ ಹಾಕಿದ್ದಾರೆ. ಈಗ ವಿದೇಶೀ ಪ್ರವಾಸದಲ್ಲಿರುವ ಪ್ರಧಾನಿ ಮೋದಿಗೆ ಅದರ ಕಹಿ ಅನುಭವವಾಗುತ್ತಿದೆ. ಬ್ರಿಟಿಷ್ ಪತ್ರಿಕೆಗಳು ಮೋದಿಗೆ ಅಂಥ ಪ್ರಚಾರವನ್ನೇನೂ ನೀಡಲಿಲ್ಲ. ಅದಕ್ಕೆ ಬದಲಾಗಿ ೨೦೦೨ರಲ್ಲಿ ಗುಜರಾತ್‌ನಲ್ಲಿ ಜರುಗಿದ ಅಲ್ಪಸಂಖ್ಯಾತರ ನರಮೇಧವನ್ನು ನೆನಪು ಮಾಡಿಕೊಟ್ಟವು. ಬಿಹಾರ ಚುನಾವಣೆಯಲ್ಲಿ ಸೋಲು ಅನುಭವಿಸಿದ ಭಾಜಪ ಮುಂದೇನು ಅವತಾರ ತಾಳುವುದೋ ನೋಡಬೇಕು.

✶ ✶ ✶

ಎನ್‌ಕ್ರಿಪ್ಷನ್' ಎಂಬ ಇಂಗ್ಲಿಷ್ ಪದಕ್ಕೆ ಕನ್ನಡದಲ್ಲಿ ಗೂಢ ಲಿಪಿ, ಗುಪ್ತಲಿಪಿ, ಸಂಕೇತ ಭಾಷೆ ಮುಂತಾದ ಅರ್ಥಗಳಿವೆ. ಜೊತೆಗೆ, 'ಕ್ಲಿಪ್ಟಾಗ್ರಫಿ' ಎಂಬ ಪದವೂ ಬಳಕೆಯಲ್ಲಿದೆ. ನಾಗರಿಕರು, ಸರ್ಕಾರಿ ಇಲಾಖೆಗಳು, ವ್ಯಾಪಾರಿ ಸಂಸ್ಥೆಗಳು, ದೇಶಗಳು, ಕೆಲವು ಖಾಸಗಿ ವಿಷಯಗಳ ಕುರಿತು ಪರಸ್ಪರವಾಗಿ ಪತ್ರವ್ಯವಹಾರ ನಡೆಸುವಾಗ ನೇರವಾದ, ಸರಳವಾದ, ಮಾಮೂಲಿನ ಭಾಷೆಯನ್ನು ಬಳಸುವುದರ ಬದಲು ಅದೇ ವಿಷಯಗಳನ್ನು ಗುಪ್ತಲಿಪಿ ಬಳಸಿ ವ್ಯವಹರಿಸುವುದು ರೂಢಿಗೆ ಬಂದು ಬಹಳ ದಶಕಗಳೇ ಕಳೆದಿವೆ. ಅಂತಹ ವಿಷಯಗಳ ಖಾಸಗಿತನವನ್ನು ಇತರರಿಗೆ ತಿಳಿಯದಂತೆ ಈ ಮೂಲಕ ವ್ಯವಹರಿಸುವುದು, ಗೋಪ್ಯವಾಗಿಡುವುದು, ಇದರ ಮೂಲ ಉದ್ದೇಶ. ಭಾರಿ ಭಾರಿ ವ್ಯವಹಾರಗಳನ್ನು ನಡೆಸುವ ಸಂದರ್ಭಗಳಲ್ಲಿ, ತೀರಾ ಖಾಸಗಿ ಅಥವಾ ವೈಯಕ್ತಿಕ ವಿಷಯಗಳನ್ನು ಪರಸ್ಪರ ಪತ್ರ ವ್ಯವಹಾರಗಳ ಮೂಲಕ ತಿಳಿಸಬೇಕಾದ ಸಂದರ್ಭಗಳಲ್ಲಿ, ಯುದ್ಧಗಳು ನಡೆಯುತ್ತಿರುವಾಗ ಯಾವುದೇ ಒಂದು ರಾಷ್ಟ್ರ ತನ್ನ ಮಿತ್ರರಾಷ್ಟ್ರಗಳಿಗೆ ಅಥವಾ ತನ್ನ ಗುಪ್ತಚಾರರಿಗೆ ಸಂದೇಶಗಳನ್ನೋ ಸೂಚನೆಗಳನ್ನೋ ನೀಡಬೇಕಾದ ಸಂದರ್ಭಗಳಲ್ಲಿ, ಈ ಗುಪ್ತಲಿಪಿಯ ಬಳಕೆ ರೂಢಿಯಲ್ಲಿದೆ. ಹೀಗೆ ಗುಪ್ತಲಿಪಿಯ ಬಳಕೆಯನ್ನು ಅಂತಹ ರಾಷ್ಟ್ರಗಳ, ವ್ಯಕ್ತಿಗಳ, ಸಂಸ್ಥೆಗಳ ಮೂಲಭೂತ ಹಕ್ಕು ಎಂದು ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾನ್ಯಮಾಡಲಾಗಿದೆ. ಆಧುನಿಕ ಸಂದರ್ಭದಲ್ಲಿ, ಎಂದರೆ ಸರಿಸುಮಾರು ೧೯೩೦–೪೦ರ ಹೊತ್ತಿಗೆ, ಅದರಲ್ಲೂ ಎರಡನೆಯ ಜಾಗತಿಕ ಯುದ್ಧ ನಡೆಯುತ್ತಿದ್ದ ವೇಳೆಗಾಗಲೇ ಈ ಗುಪ್ತಲಿಪಿಯ ಬಳಕೆ ಹೆಚ್ಚು ಜನಪ್ರಿಯವಾಗತೊಡಗಿತು. ಅದು ಬಹಳ ಅಗತ್ಯವೆಂದೂ ಪರಿಗಣಿಸಲಾಯಿತು.

೧೯೯೦ರ ದಶಕದಲ್ಲಿ ಕಂಪ್ಯೂಟರ್ ಯುಗ ಪ್ರಾರಂಭವಾದ ಮೇಲಂತೂ ಸರ್ಕಾರಗಳು, ಬ್ಯಾಂಕು ಮತ್ತು ವಿಮೆ ಕ್ಷೇತ್ರಗಳೂ ಸೇರಿದಂತೆ ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿರುವ ಎಲ್ಲ ಉದ್ಯಮಗಳು, ವ್ಯಾಪಾರಿ ಸಂಸ್ಥೆಗಳು, ಸಣ್ಣಪುಟ್ಟ ವ್ಯಾಪಾರಿಗಳಷ್ಟೇ ಅಲ್ಲ, ಮಧ್ಯಮ ಮತ್ತು ಮೇಲ್ವರ್ಗದ ವರ್ಗಗಳ ಕೋಟ್ಯಂತರ ನಾಗರಿಕರೂ ಗಣಕಯಂತ್ರ, ಅಂತರ್‌ಜಾಲ, ಐ–ಫೋನ್, ಐ–ಪ್ಯಾಡ್, ಫೇಸ್‌ಬುಕ್ ಇತ್ಯಾದಿಗಳನ್ನು ಬಳಸುವುದು ಸಾಮಾನ್ಯವಾಗಿಬಿಟ್ಟಿದೆ.

ಖಾಸಗಿ ಮತ್ತು ಸಾರ್ವಜನಿಕ ಅಂತರ್‌ಜಾಲ ಸೇವಾ ಸಂಸ್ಥೆಗಳು, ಉದಾಹರಣೆಗೆ ಏರ್‌ಟೆಲ್, ರಿಲಯನ್ಸ್, ಬಿಎಸ್‌ಎನ್‌ಎಲ್, ಹಾತ್‌ವೇ ಮುಂತಾದ ಸಂಸ್ಥೆಗಳು ತಮ್ಮದೇ ಆದ ಗುಪ್ತಲಿಪಿಗಳನ್ನು ರೂಪಿಸಿಕೊಂಡಿವೆ. ಗುಪ್ತಲಿಪಿಯ ಬಳಕೆಯ ಮೂಲ ಉದ್ದೇಶ ಅವುಗಳ ಗೋಪ್ಯವನ್ನು, ರಹಸ್ಯವನ್ನು ಕಾಪಿಟ್ಟುಕೊಳ್ಳುವುದು. ಆದರೆ ಈ ಸಾರ್ವಜನಿಕ ಅಂತರ್‌ಜಾಲ ಸೇವಾ ಸಂಸ್ಥೆಗಳು, ಬಳಕೆದಾರರು ಪರಸ್ಪರ ಸಂಪರ್ಕಿಸುವಾಗ ಕಳಿಸುವ ಸಂದೇಶಗಳನ್ನು ಇತರರು ಕದ್ದು ನೋಡುವುದು, ಮೇಲ್ವಿಚಾರಣೆ ನಡೆಸುವುದು ಅಲ್ಲಲ್ಲಿ ನಡೆಯುತ್ತಲೇ ಇರುತ್ತವೆ. ಇದೇ ಬಗೆಯಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಸರ್ಕಾರಗಳೂ ಇಂತಹ ಅಕ್ರಮ ಕೃತ್ಯಗಳಲ್ಲಿ ತೊಡಗಿರುವ ಉದಾಹರಣೆಗಳು ಇಲ್ಲದಿಲ್ಲ. ಇದು ಬೇಹುಗಾರಿಕೆಯ ಇನ್ನೊಂದು ಮುಖ.

ಈ ಹಿನ್ನೆಲೆಯಲ್ಲಿ ನಮ್ಮ ಕೇಂದ್ರ ಸರ್ಕಾರದ ಇಲೆಕ್ಟ್ರಾನಿಕ್ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆಯು ಆ ಗುಪ್ತಲಿಪಿ ಬಳಕೆದಾರರಿಗೆ ಸಂಬಂಧಿಸಿದಂತೆ ಒಂದು ಹೊಸ ನೀತಿಯ ಕರಡು ಪ್ರತಿಯನ್ನು ಇದೇ ಸೆಪ್ಟೆಂಬರ್, ೨೦೧೫ರಂದು ಪ್ರಕಟಿಸಿ ಸಾರ್ವಜನಿಕರು ಆ ಕುರಿತು ತಮ್ಮ ಪ್ರತಿಕ್ರಿಯೆಯನ್ನು ನೀಡಲು ಕರೆ ನೀಡಿತು.

ದೇಶದ ವಿದ್ಯುನ್ಮಾನ ಕ್ಷೇತ್ರದಲ್ಲಿ ಜರುಗುವ ಎಲ್ಲ ವ್ಯವಹಾರಗಳ ಮೇಲೂ ನಿಯಂತ್ರಣ ಸಾಧಿಸುವುದು, ಆ ಮೂಲಕ ಬೇಹುಗಾರಿಕೆ ನಡೆಸುವುದು ಆ ಕರಡಿನ ಮೂಲ ಉದ್ದೇಶ. ನಮ್ಮದೊಂದು ಪ್ರಜಾಪ್ರಭುತ್ವ ರಾಷ್ಟ್ರ ಎಂಬುದನ್ನು ಕಡೆಗಣಿಸಿ ಬಳಕೆದಾರರ ಮೂಲಭೂತ ಹಕ್ಕನ್ನೇ ಕಸಿದುಕೊಳ್ಳುವ ಇಂತಹ ಕಠಿಣ ಕ್ರಮಕ್ಕೆ ಮುಂದಾಗಿರುವ ಕೇಂದ್ರ ಸರಕಾರದ ನಡೆ ನಿಜಕ್ಕೂ ಖಂಡನೀಯ. ಇದೀಗ ಕೇಂದ್ರ ಸರ್ಕಾರ ನೀಡಿದ ಈ ಕರೆಗೆ ಲಕ್ಷಾಂತರ ಬಳಕೆದಾರರು ಕೂಡಲೇ ಪ್ರತಿಕ್ರಿಯಿಸಿ ಈ ಜನವಿರೋಧಿ ಕ್ರಮಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದುದರ ಪರಿಣಾಮವಾಗಿ ಇಲೆಕ್ಟ್ರಾನಿಕ್ ಮತ್ತು ತಂತ್ರಜ್ಞಾನ ಇಲಾಖೆ ಹಾಗೂ ಅದರ "ಪ್ರಧಾನ ಅರ್ಚಕ"ರಾಗಿರುವ ಸಚಿವ ರವಿಶಂಕರ್ ಪ್ರಸಾದ್

ಹೊಸ ನೀತಿಯ ಕರಡನ್ನು ತಾವು ಪ್ರಕಟಿಸಿದ ಕೇವಲ ೧೨ ಗಂಟೆಯ ಒಳಗಾಗಿ ಹಿಂತೆಗೆದುಕೊಳ್ಳಬೇಕಾಗಿ ಬಂದದ್ದರಿಂದಾಗಿ ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರಕ್ಕೆ ತೀವ್ರ ಮುಖಭಂಗವಾಗಿದೆ. ಅಷ್ಟೇ ಮುಖ್ಯವಾದ್ದು ಆ ಪಕ್ಷದ ಬೇಹುಗಾರಿಕೆಯ ಅಪ್ರಕಟಿತ ಹುನ್ನಾರ.

* * *

ಪ್ರತಿವರ್ಷ ಜನವರಿಯಲ್ಲಿ ಅಖಿಲ ಭಾರತ ವಿಜ್ಞಾನ ಸಮ್ಮೇಳನ ಜರುಗುತ್ತದೆ. ಈ ಬಾರಿ ಅದು ಮೈಸೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ನಡೆಯಲಿದೆ. ಬುರುಡೆದಾಸರ ವಿಜ್ಞಾನಕ್ಕೆ ಅಲ್ಲಿ ಅವಕಾಶ ನೀಡಕೂಡದೆಂದು ಆಗ್ರಹಿಸಬೇಕಾಗಿದೆ, ಏಕೆಂದರೆ ಕಳೆದ ವರ್ಷ ಅಂತಹ ಮೂರ್ಖತನ ಪ್ರದರ್ಶಿತವಾಗಿತ್ತು. ಸಮ್ಮೇಳನವನ್ನು ಪ್ರಧಾನಿ ಉದ್ಘಾಟಿಸುವುದು ರೂಢಿ. ಈ ಬಾರಿ ಮೈಸೂರಿಗೆ ಬರಲಿರುವ ಪ್ರಧಾನಿ ವಿಜ್ಞಾನದಲ್ಲಿ ಮಹತ್ಸಾಧನೆ ಮಾಡಿರುವ ವ್ಯಕ್ತಿ. ಸ್ವತಃ ಅವರೇ ಅದನ್ನು ನಂಬಿಬಿಟ್ಟಿದ್ದಾರೆ. ಗಣೇಶನ ಆನೆ ತಲೆಯ ಬಗೆಗೆ ಮಾನ್ಯ ಮೋದಿಯವರು ಅದ್ಭುತ ಸಂಶೋಧನೆ ನಡೆಸಿರುವುದಾಗಿ ಭಾವಿಸಿಕೊಂಡಿದ್ದಾರೆ. ಬೇರೆಯಂತೆ ವೈಜ್ಞಾನಿಕ ಮನೋಭಾವಕ್ಕೆ ಅಪವಾದದಂತಿರುವ ಈ ಪ್ರಧಾನಿ ಮೊನ್ನೆ ಮೊನ್ನೆ ಬಿಹಾರದ ಚುನಾವಣಾ ಪ್ರಚಾರ ಭಾಷಣಗಳಲ್ಲಿ "ಬಿಹಾರದ ಡಿಎನ್‌ಎ" ಕುರಿತು ಪದೇ ಪದೇ ಪುಂಖಾನುಪುಂಖವಾಗಿ ಮಾತನಾಡಿದರು. ನೀತೀಶ್ ಕುಮಾರರ ಡಿಎನ್‌ಎ ಮತ್ತು ಬಿಹಾರದ ಡಿಎನ್‌ಎ ಸರಿಯಾಗಿ ಹೊಂದುವುದಿಲ್ಲವೆಂದು ಅವರ ಸಂಶೋಧನಾ ಪಾಂಡಿತ್ಯವನ್ನು ಪ್ರಕಟಿಸಿದರು. ಅವರ ಸಂಶೋಧನೆ ತೀರಾ ಅಪಕ್ವವೆಂದು ಬಿಹಾರದ ಜನ ಒಕ್ಕೊರಲಿನಿಂದ ಕೂಗುಹಾಕಿಬಿಟ್ಟರು. ಆದಾಗ್ಯೂ ಒಂದು ಮಾತನ್ನು ಅಂಗೀಕರಿಸಬೇಕು : ಪ್ರಧಾನಿಗೆ ಡಿಎನ್‌ಎ ಎಂಬುದರ ಪರಿಚಯವಿದೆ ! ಹಾಗೆಂದರೇನೆಂದು ಅವರಿಗೆ ತಿಳಿದಿಲ್ಲದಿದ್ದರೆ ಪ್ರಮಾದವೇನೂ ಇಲ್ಲ, ಏಕೆಂದರೆ ಅವರ ವಿಜ್ಞಾನ ಸಲಹೆಗಾರರಿಗೆ ಅದೆಲ್ಲಾ ತಿಳಿದಿರುತ್ತದೆ. ಅದರಲ್ಲಿ ಒಂದು ವ್ಯತ್ಯಾಸವಿದೆ : ಈ ಸಲಹೆಗಾರರೆಲ್ಲಾ ಆಧುನಿಕ ವಿಜ್ಞಾನದಲ್ಲಿ ಪಾರಂಗತರು, ಅಥವಾ ಮೋದಿಯವರು ಕಟುವಾಗಿ ಟೀಕಿಸುವ "ಪಾಶ್ಚಾತ್ಯ" ಜ್ಞಾನದ ಖನಿಗಳು. ನಮ್ಮ ಪ್ರಧಾನಿಯವರ ಉಗ್ರರಾಷ್ಟ್ರೀಯತೆಗೆ ಇದು ವಿರುದ್ಧ ಧ್ರುವದ ವಿಜ್ಞಾನವೆನಿಸುತ್ತದೆ. ಪ್ರಾಚೀನ ಭಾರತದ ಯಾವ ವಿಜ್ಞಾನ ವಿಷಯಕ ಗ್ರಂಥದಲ್ಲಿ ಡಿಎನ್‌ಎ ಕುರಿತ ಮಾಹಿತಿ ಮೋದಿಯವರಿಗೆ ಸಿಕ್ಕಿತೋ ಅದನ್ನು ತಿಳಿಸಿಕೊಟ್ಟರೆ ಬೇರೆ ಪಾಮರ ವಿಜ್ಞಾನಿಗಳಿಗೆ ಉಪಕಾರವಾಗುತ್ತದೆ. ಆಗ ಅವರೂ ಆ ಗ್ರಂಥಗಳನ್ನು ಓದಿಕೊಂಡು ವಿಜ್ಞಾನ ವಿಚಾರದಲ್ಲಿ "ಅಪ್ ಟು ಡೇಟ್" ಆಗಬಹುದು ! ಪ್ರಯೋಗಗಳನ್ನು ಮಾತ್ರ ವಿಜ್ಞಾನಿಗಳು ಮೋದಿಯವರಂತೆ ಮಾಡಬಾರದು, ಏಕೆಂದರೆ ಅವರ ಡಿಎನ್‌ಎ ಪ್ರಯೋಗವು, ಮಳೆಯಿಂದಾಗಿ ಠುಸ್ ಎಂದುಹೋದ ನಮ್ಮ ದೀಪಾವಳಿ ಪಟಾಕಿಗಳ ಪೂರ್ವರೂಪವೆಂದು ತಿಳಿದುಬಂದಿದೆ.

* * *

ಮೋದಿ – ಡಿಎನ್‌ಎ ಸಂಬಂಧದ ಕತೆ ಇಲ್ಲಿಗೆ ಮುಗಿಯುವುದಿಲ್ಲ. ಡಿಎನ್‌ಎ ವ್ಯಾಮೋಹ ವಿಪರೀತವಾಗಿ ಬೆಳೆಯುವಂತಹ ಡಿಎನ್‌ಎ ಅವರದು. ಆದ್ದರಿಂದ ದೇಶದ ಎಲ್ಲ ಜನರ ಡಿಎನ್‌ಎ ಸಂಗ್ರಹಿಸಿಡುವ ಹುನ್ನಾರವಿದೆ. ಆಮೇಲೆ ಬೇಕಾದರೆ ಆ ವಿವರಗಳನ್ನು ಬೇರೆ ದೇಶದವರಿಗೆ, ವಿಶೇಷತಃ ಅಮೆರಿಕಾಕ್ಕೆ, ಹಸ್ತಾಂತರಿಸಬಹುದು. ಎಲ್ಲೋ ಒಂದು ಹತ್ಯೆಯೋ ಕಳ್ಳತನವೋ ನಡೆದಿದೆಯೆನ್ನಿ, ಅಪರಾಧಿಗಳನ್ನು ಪತ್ತೆಹಚ್ಚಬೇಕು. ಅಪರಾಧಿಗಳ ಶರೀರದ ಯಾವುವೋ ಪದಾರ್ಥಗಳು ಅಲ್ಲಿ ಬಿದ್ದಿರುವ ಸಾಧ್ಯತೆ ಇದೆ. ಅವು ಬೇರೆಯವರದೂ ಆಗಿರುವ ಸಂಭವವಿರುತ್ತದೆ. ಅವುಗಳ ನ್ನಾಧರಿಸಿ ಅಪರಾಧಿಯನ್ನು ಪತ್ತೆಹಚ್ಚಲಾಗುತ್ತದೆಯಂತೆ. ನಿರಪರಾಧಿಯೂ ಅಪರಾಧಿಯೆಂಬ ತೀರ್ಮಾನಕ್ಕೆ ಬಂದರೆ ಆಶ್ಚರ್ಯವಿಲ್ಲ. ಹಾಗೆಯೇ ಕಾರನ್ನು ಯಾರಿಗೋ ಡಿಕ್ಕಿ ಹೊಡೆಯಿಸಿ ಪರಾರಿಯಾಗಿರುತ್ತಾರೆ; ಆ ಸ್ಥಳದಲ್ಲಿ ದೊರಕುವ ಸಾಮಗ್ರಿಯ ಆಧಾರದ ಮೇಲೆ ಪರಾರಿಯಾದವರನ್ನು ಕಂಡುಹಿಡಿಯುತ್ತಾರೆ. ಯಾರ ಡಿಎನ್‌ಎ ಗುರುತಿಸಲಾಗುತ್ತದೋ ಅವರ ಮತಧರ್ಮ ವನ್ನು ಮಾಹಿತಿಯಲ್ಲಿ ಸಂಗ್ರಹಿಸಿಡುತ್ತಾರೆ ! ಆಗ ಮಾಧ್ವರು ಸಾಮಾನ್ಯವಾಗಿ ಅಪರಾಧ ಮಾಡುತ್ತಾರೆಂದೋ, ಲಿಂಗಾಯತರು ಡಿಕ್ಕಿ ಹೊಡೆಯುವುದರಲ್ಲಿ ಪ್ರವೀಣರು ಎಂದೋ ಘೋಷಿಸಬಹುದು. ಒಟ್ಟಿನಲ್ಲಿ, ಈ ರೀತಿಯ ಡಿಎನ್‌ಎ ಸಂಗ್ರಹವು ಅವೈಜ್ಞಾನಿಕವಾದ್ದು, ಅಪಾಯಕಾರಿಯಾದ್ದು. ಫ್ಯಾಸಿಸ್ಟ್ ಮಾದರಿ ಆಳ್ವಿಕೆಯನ್ನು ನಮ್ಮ ದೇಶದಲ್ಲಿ ಜಾರಿಗೆ ತರುವುದಾದರೆ ಈ ಡಿಎನ್‌ಎ ಮಾದರಿ ಬಹಳ ಉಪಯುಕ್ತ ಎನ್ನಲಾಗಿದೆ. ಹೀಗೆ ಡಿಎನ್‌ಎ ಸಂಗ್ರಹಕ್ಕೆ ಸರ್ಕಾರವು ಪರವಾನಗಿ ಪಡೆಯಲೋಸುಗ ಪಾರ್ಲಿಮೆಂಟಿನಲ್ಲಿ ಮಂಡಿಸಲು ವಿಧೇಯಕವೊಂದನ್ನು ಮೋದಿ ಸರ್ಕಾರ ಸಿದ್ಧಪಡಿಸಿದೆ. ಅದನ್ನು ಸದ್ಯದಲ್ಲೇ ಮಂಡಿಸುವ ಆಲೋಚನೆ ಇದೆ. ಇದು ಜನವಿರೋಧಿ, ವ್ಯಕ್ತಿ ಸ್ವಾತಂತ್ರ್ಯ ವಿರೋಧಿ, ವ್ಯಕ್ತಿಯ ಖಾಸಗಿತನದ ರಕ್ಷಣೆಯ ವಿರೋಧಿ ಕಾನೂನಾಗುತ್ತದೆ. ಬೇರೆ ಆಕ್ಷೇಪಗಳೂ ಇವೆ. ಇದನ್ನು ಪಾರ್ಲಿಮೆಂಟ್ ಸರ್ವಥಾ ಅಂಗೀಕರಿಸದಂತೆ ಒತ್ತಾಯಿಸುವುದು ಎಲ್ಲ ಪಕ್ಷಗಳ ಸದಸ್ಯರ ಕರ್ತವ್ಯ. ■

ಕಾವ್ಯಲೋಕ

# ಎಲ್ಲರದೂ ಆಗಿರುವ ದುಃಖಕ್ಕೆ

**ದುಃ**ಖವಿದೆ ನನಗೆ
ಮನುಷ್ಯ ಮನುಷ್ಯರ ನಡುವೆ
ಇರಬೇಕಾದ ಅದೇನೋ
ಕಳೆದುಹೋಗಿರುವದಕ್ಕೆ

ದುಃಖವಿದೆ ನನಗೆ
ಮಕ್ಕಳು ಉಸುಕಿನ ಗುಂಪಿಯ ಮೇಲೆ ಕುಳಿತು
ಗುಬ್ಬಿ ಗೂಡು ಕಟ್ಟುವದ ಮರೆತುದುಕ್ಕೆ
ರಾತ್ರಿವರೆಗೆ ಮಣ್ಣಲ್ಲಿ ಆಡಿ ಧೂಳಾಗಿ
ಮನೆಗೆ ಬಾರದುದಕ್ಕೆ

ಉತ್ತರವೇ ಸಿಗದ ಯಂತ್ರಜಾಲದಲ್ಲಿ ಸಿಲುಕಿ
ಗುಂಡಿ ಕೀಲಿಗೆ ಕಣ್ಣು ಸಿಲುಕಿಸಿ
ಅಕಾಲ ವೃದ್ಧರಾಗುತ್ತಿರುವದಕ್ಕೆ
ಗಿಡದ ಕಾಯಿ ಸಹಜ ಹಣ್ಣಾಗದಿರುವದಕ್ಕೆ

ಅತ್ತೆ ಸೊಸೆಯರ ರಂಜನೀಯ ಜಗಳಗಳು
ನಿಂತು ಮಾತಿಲ್ಲದೆ ನಿಶ್ಶಬ್ದವಾಗಿ ಟಿ. ವಿ.
ಪರದೆಯ ಧಾರಾವಾಹಿಗಳ
ಪಾತ್ರವಾಗಿರುವದಕ್ಕೆ

ಮತ್ತೂ ದುಃಖವೇಕೆ ಎಂದರೆ
ಈ ಎಲ್ಲ ಪ್ರಶ್ನೆಗಳು ಬರೀ ನನ್ನವು
ಮಾತ್ರವಾಗದೆ ಎಲ್ಲರವೂ ಆಗಿ
ಎಲ್ಲೆಡೆ ಮೌನವೇ ಉತ್ತರವಾಗಿರುವದಕ್ಕೆ.
ಉತ್ತರದ ಮೇಲ್‌ಗೆ ಕಾಯುತ್ತಿದ್ದೇನೆ,
ಯಾವುದಾದರೂ ಲೋಕದಿಂದ ಬಂದೀತೆಂದು!

**ಡಾ॥ ವೈ. ಎಂ. ಯಾಕೊಳ್ಳಿ**
ಉಪನ್ಯಾಸಕರು, ಜಿ. ಜಿ. ಚೋಪ್ರಾ
ಸರ್ಕಾರಿ ಪದವಿಪೂರ್ವ ಕಾಲೇಜು, ಸವದತ್ತಿ




## ಮಹದಾಯಿ ಸಮಸ್ಯೆ – ಪ್ರತಿಕ್ರಿಯೆ

✉ ಮಹದಾಯಿ, ಮಲಪ್ರಭಾ, ಕಳಸಾ–ಬಂಡೂರಿ ಈ ಮೂರು ನದಿಗಳ ನೀರು ಕರ್ನಾಟಕ, ಗೋವಾ ಮತ್ತು ಮಹಾರಾಷ್ಟ್ರದ ಪ್ರದೇಶಗಳಲ್ಲಿ ೨೦೩೨ ಚ.ಕಿ.ಮೀ.ನಷ್ಟು ವಿಸ್ತಾರವಾದ ಜಲಾನಯನ ಪ್ರದೇಶ ಹೊಂದಿದೆ. ಈ ಕಾರಣದಿಂದಾಗಿ ಮಲಪ್ರಭಾ ಜಲಾನಯನಕ್ಕೆ ಬಂದು ಸೇರುವ ನೀರಿನ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾಗುವುದಾದರೆ ಈ ಮೂರು ರಾಜ್ಯಗಳು ಅದನ್ನು ಪ್ರಶ್ನಿಸಬಹುದು.

ಈಗ ಬಂದಿರುವ ಸಮಸ್ಯೆ ಮಲಪ್ರಭಾ ಜಲಾನಯನಕ್ಕೆ ಬಂದು ಸೇರುವ ಕಳಸಾ–ಬಂಡೂರಿ ಹಳ್ಳಗಳಿಂದ. ನರಗುಂದ, ನವಲಗುಂದ, ರೋಣ ಮುಂತಾದ ಪ್ರದೇಶಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ರೂಪಿಸಬೇಕೆಂದು ಕರ್ನಾಟಕ ಸೂಚಿಸಿದೆ. ಕಳಸಾ–ಬಂಡೂರಿ ನಾಲೆಯನ್ನು ಅಡ್ಡಗಟ್ಟಿ ಕುಡಿಯುವ ನೀರಿಗಾಗಿ ಬಳಸಿಕೊಂಡರೆ, ಮಹದಾಯಿ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ತತ್ಪರಿಣಾಮವಾಗಿ ಮಲಪ್ರಭಾ ಜಲಾಶಯದಿಂದ ಗೋವಾ ಮತ್ತು ಮಹಾರಾಷ್ಟ್ರಗಳಲ್ಲಿ ನೀರು ಕಡಿಮೆಯಾಗುತ್ತದೆ. ಹಾಗೆ ಆಗಬಾರದೆಂಬುದು ಗೋವಾ ಮತ್ತು ಮಹಾರಾಷ್ಟ್ರಗಳ ವಾದ. ಈ ಜಲವಿವಾದವನ್ನು ಪರಿಷ್ಕರಿಸುವ ಏಕಮಾತ್ರ ಅಧಿಕಾರವಿರುವುದು ಅಂತರರಾಜ್ಯ ಜಲವಿವಾದ ಕಾಯ್ದೆಯ ಪ್ರಕಾರ ನ್ಯಾಯಾಧೀಕರಣಕ್ಕೆ ಮಾತ್ರ. ಈ ಜಲವಿವಾದವನ್ನು ಸರ್ವೋಚ್ಚ ನ್ಯಾಯಾಲಯವು ಪರಿಶೀಲಿಸುವಂತಿಲ್ಲ ಎಂದು ಸಂವಿಧಾನದಲ್ಲಿಯೇ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಒಂದು ವೇಳೆ ನ್ಯಾಯಾಧೀಕರಣವು ಕೊಡುವ ತೀರ್ಪು ವ್ಯಾಜ್ಯನಿರತ ರಾಜ್ಯಗಳಿಗೆ ಸಮ್ಮತವಾಗದಿದ್ದರೆ, ಅವರು ಯಾರಾದರೂ ಸುಪ್ರೀಂ ಕೋರ್ಟಿಗೆ ಹೋಗಬಹುದು. ಒಮ್ಮೆ ಈ ವಿವಾದ ಇತ್ಯರ್ಥಪಡಿಸಲು ಯಾವುದೋ ರಾಜ್ಯ ನ್ಯಾಯಾಧೀಕರಣ ನೇಮಿಸಬೇಕೆಂದು ನಿರ್ಧರಿಸಿದರೆ ಆಗ ಕೇಂದ್ರ ಸರ್ಕಾರ ನ್ಯಾಯಾಧೀಕರಣವನ್ನು ನೇಮಕ ಮಾಡಬಹುದು. ಹಾಗೆ ನ್ಯಾಯಾಧೀಕರಣ ನೇಮಿಸಿದ ತರುವಾಯ ಕೇಂದ್ರ ಸರ್ಕಾರವು ಏನೂ ಮಾಡಲಾಗದು.

ಈ ಜಲ ವಿವಾದವನ್ನು ಕರ್ನಾಟಕ ರಾಜ್ಯದ ಅಪೇಕ್ಷೆಯಂತೆ ನವೆಂಬರ್ ೨೦೧೦ರಲ್ಲಿ ಮಹದಾಯಿ ನ್ಯಾಯಾಧೀಕರಣವನ್ನು ನ್ಯಾ। ಡಿ. ಎಂ. ಪಂಚಾಳರ ಅಧ್ಯಕ್ಷತೆಯಲ್ಲಿ ನೇಮಿಸಿದೆ. ಈ ಸಮಸ್ಯೆ ಈಗ ಆ ನ್ಯಾಯಾಧೀಕರಣದ ಮುಂದಿದೆ. ಅದು ಐದು ವರ್ಷಗಳಿಂದಲೂ ವಿಚಾರಣೆಗಾಗಿ ಕಾದಿದೆ. ಈ ಹಂತದಲ್ಲಿ ಕರ್ನಾಟಕ ರಾಜ್ಯ ಮಾಡಬೇಕಾದ ಕೆಲಸವೇನು? ಹೆಚ್ಚೆಂದರೆ, ನ್ಯಾಯಾಧೀಕರಣ ಈ ಸಮಸ್ಯೆಯನ್ನು ಬೇಗ ಇತ್ಯರ್ಥಪಡಿಸಬೇಕೆಂದು ಮನವಿ ಸಲ್ಲಿಸಬೇಕು. ಆ ಮಧ್ಯಂತರ ಅರ್ಜಿಯಲ್ಲಿ ಕುಡಿಯುವ ನೀರಿಗಾಗಿ ಇಂತಿಷ್ಟು ನೀರನ್ನು ಕರ್ನಾಟಕ




ರಾಜ್ಯ ಉಪಯೋಗಿಸಿಕೊಳ್ಳಲು ಮಧ್ಯಂತರ ಆಜ್ಞೆಯನ್ನು ಮಂಜೂರು ಮಾಡಲು ಪ್ರಾರ್ಥಿಸಬಹುದು. ಆ ಮಧ್ಯಂತರ ಅರ್ಜಿಯನ್ನು ಪರಿಷ್ಕರಿಸಲು ಗೋವಾ ಮತ್ತು ಮಹಾರಾಷ್ಟ್ರ ರಾಜ್ಯಗಳ ವಾದವನ್ನು ಆಲಿಸಬೇಕು. ಈಗ ಬಹಿರಂಗ ವಾಗಿರುವ ಸುದ್ದಿಯ ಪ್ರಕಾರ ನ್ಯಾಯಾಧೀಕರಣದ ಮುಂದೆ ನಮ್ಮ ರಾಜ್ಯದ ನ್ಯಾಯವಾದಿಗಳಾದ ಶ್ರೀ ನಾರಿಮನ್ ಅವರು ಈ ಮಧ್ಯಂತರ ಅರ್ಜಿ ಸಾಧುವಲ್ಲವೆಂದು ಸರ್ಕಾರಕ್ಕೆ, ರಾಜ್ಯಕ್ಕೆ ತಿಳಿಸಿದೆ. ನಮ್ಮ ರಾಜ್ಯ ಅವರ ತಜ್ಞ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಕೆ ? ಅಥವಾ ತಿರಸ್ಕರಿಸಬೇಕೆ ? ಅಥವಾ ಜನಾಂದೋಲನಕ್ಕೆ ತಲೆಬಾಗಿ ಬೇರೆ ದಾರಿಯನ್ನು ಹಿಡಿಯಬಹುದೆ ? ನೆರೆ ರಾಜ್ಯಗಳೊಡನೆ ಸಂಧಾನವನ್ನು ಏರ್ಪಡಿಸುವ ಪ್ರಯತ್ನವನ್ನು ಪ್ರಧಾನ ಮಂತ್ರಿಗಳೇ ಮಾಡಿದರೆ ಉಭಯ ರಾಜ್ಯಗಳಿಗೂ ಅನುಕೂಲವಾಗಬಹುದು. ಈ ವಿಚಾರವಾಗಿ ಕರ್ನಾಟಕದ ಸರ್ವಪಕ್ಷಗಳ ನಿಯೋಗ ಪ್ರಧಾನಿಗಳ ಮುಂದೆ ಮನವಿಯನ್ನು ಅರ್ಪಿಸಿದಾಗ, ಪ್ರಧಾನಿಗಳು ಒಂದು ಸಹೃದಯ ಸನ್ನಿವೇಶವನ್ನು ನಿರ್ಮಿಸದೆ ರಾಜಕೀಯ ಪಕ್ಷಪಾತವನ್ನು ಪ್ರದರ್ಶಿಸಿದರೆಂದು ಬಹಿರಂಗವಾಗಿದೆ.

ಕುಡಿಯುವ ನೀರಿಲ್ಲದೆ ಬಳಲುತ್ತಿರುವ ಜನರಿಗೆ ಇರುವ ದಾರಿ ಏನು? ಹಾಗಾದರೆ ಪ್ರಜೆಗಳು ಅಸಹಾಯಕತೆಯಿಂದ ಸುಮ್ಮನೆ ಕೂರುವುದೇ? ಅಥವಾ ಸಂಬಂಧಪಟ್ಟವರು ಅಂದರೆ, ಈ ಸಮಸ್ಯೆಯನ್ನು ಬಗೆಹರಿಸಲು ಸಂಧಾನವನ್ನು ನಡೆಸಲು ಸೂಕ್ತ ಕ್ರಮ ಕೈಗೊಳ್ಳಬೇಕಾದ್ದು, ಈಗ ಪ್ರಧಾನಿ ಕೈಯಲ್ಲಿದೆ. ಅವರೂ ಈ ವಿಚಾರದಲ್ಲಿ ಅಸಡ್ಡೆಯನ್ನೋ, ಪಕ್ಷಪಾತವನ್ನೋ ತೋರಿದರೆ, ಕರ್ನಾಟಕ ರಾಜ್ಯದ ಕಾಂಗ್ರೆಸ್ ಸರ್ಕಾರಕ್ಕೆ ಇಕ್ಕಟ್ಟು, ಸಂಕಟವನ್ನು ಉಂಟುಮಾಡಲು ಸುಮ್ಮನಿದ್ದರೆ, ಕರ್ನಾಟಕದ ಪ್ರಜೆಗಳು ಅದನ್ನು ಸಹಿಸಿ, ಕಷ್ಟವನ್ನು ಅನುಭವಿಸುವುದೇ? ಅಥವಾ ತಮ್ಮ ಕಷ್ಟವನ್ನು ಚಳವಳಿ, ಆಂದೋಲನದ ಮೂಲಕ ವ್ಯಕ್ತಪಡಿಸುವುದೆ? ಈ ಸಂದರ್ಭದಲ್ಲಿ ಪ್ರಜೆಗಳು ಹೋರಾಟದ ಹಾದಿಯನ್ನು ಹಿಡಿಯುವುದು ಅನಿವಾರ್ಯ ವಾಗುತ್ತದೆ. ಹಾಗಾದರೆ ಆ ಹೋರಾಟ ಹೇಗಿರಬೇಕು? ಮೊಟ್ಟಮೊದಲನೆಯದಾಗಿ ಹೇಳಲೇಬೇಕಾದ ಮಾತೆಂದರೆ, ಆ ಹೋರಾಟ ಶಾಂತಿಯುತವಾಗಿ, ಅಹಿಂಸಾತ್ಮಕವಾಗಿ, ಸಾರ್ವಜನಿಕ ಅಥವಾ ಸರ್ಕಾರಿ ಆಸ್ತಿ ಪಾಸ್ತಿಗಳಿಗೆ ಹಾನಿ ಯಾಗದಂತೆ, ಪ್ರಜೆಗಳಿಗೆ ಪೀಡನೆಯಾಗದಂತೆ ಶಾಂತಿಯುತವಾಗಿರಬೇಕು. ಅಂಥ ಶಾಂತಿಯುತ ಹೋರಾಟದ ಮಾರ್ಗ ಯಾವುದು? ಗಾಂಧೀಜಿ ಇಂತಹ ಸಂದರ್ಭಗಳಲ್ಲಿ ಸತ್ಯಾಗ್ರಹದ ಮೂಲಕ ಸವಿನಯ ಶಾಸನೋಲ್ಲಂಘನೆಯ ದಾರಿ ತೋರಿಸಿದ್ದಾರೆ. ಈಗ ನಮಗೆ ಬಂದಿರುವ ಆಪತ್ತೇನು? ಮಹದಾಯಿ ನೀರನ್ನು ಕುಡಿಯಲಿಕ್ಕಾಗಿ ನಾವು ಬಳಸಿಕೊಂಡರೆ ಅದು ನೆರೆ ರಾಜ್ಯಗಳಾದ ಗೋವಾ, ಮಹಾರಾಷ್ಟ್ರದ ಕೃಷಿಗಾಗಿ ಬೇಕಾಗುವ ನೀರಿನಲ್ಲಿ ಕೊರತೆಯನ್ನು ಮಾಡಬಾರದೆಂಬುದು. ಹಾಗೆ ನಾವು ಬಳಸಿದರೆ ಅದು ಶಾಸನೋಲ್ಲಂಘನೆಯಾಗುತ್ತದೆ. ಆದ್ದರಿಂದ ಆ ಶಾಸನವನ್ನು ಶಾಂತಿಯುತವಾಗಿ ಉಲ್ಲಂಘಿಸಬೇಕು. ನಮ್ಮ ದೇಶದಲ್ಲಿ ಉಪ್ಪನ್ನು ತಯಾರಿಸಬಾರದು ಎಂಬ ಆಂಗ್ಲರು ವಿಧಿಸಿದ್ದ ಶಾಸನವನ್ನು ಉಲ್ಲಂಘಿಸಿ 'ಉಪ್ಪಿನ ಸತ್ಯಾಗ್ರಹ' ಜರುಗಿತು. ಕುಡಿಯುವುದಕ್ಕೂ ಮಹದಾಯಿ ನೀರನ್ನು ಬಳಸಬಾರದು ಎಂದು ಇರುವ ಶಾಸನವನ್ನು ನಮ್ಮ ರಾಜ್ಯದ ಪ್ರಜೆಗಳು ಉಲ್ಲಂಘಿಸಿ, ಅದರಿಂದ ಬರಬಹುದಾದ ಶಿಕ್ಷೆಯನ್ನು ಅನುಭವಿಸಬೇಕು. ಇದನ್ನು ಉಲ್ಲಂಘಿಸುವಾಗ ಪ್ರಜೆಗಳು ಆ ನದಿಯ ನೀರನ್ನು ಉಪಯೋಗಿಸಲು ಅಣೆಕಟ್ಟನ್ನು ಕಟ್ಟಲು ಪ್ರಜೆಗಳೇ ಪ್ರಯತ್ನ ಮಾಡಬಹುದು. ನೀರಿಗಾಗಿ ತಡೆಗೋಡೆಗಳನ್ನು ನಿರ್ಮಿಸುವುದು, ನೀರಿನ ಟ್ಯಾಂಕರ್ ಮೂಲಕ ನೀರನ್ನು ಸರಬರಾಜು ಮಾಡಿಕೊಳ್ಳಬಹುದು. ಅದನ್ನು

ತಡೆದು ಸರ್ಕಾರ ಪ್ರಜೆಗಳ ಮೇಲೆ ಕ್ರಮ ಕೈಗೊಳ್ಳಬಹುದು. ಪ್ರಜೆಗಳು ಅದರಿಂದಾಗಬಹುದಾದ ಶಿಕ್ಷೆಯನ್ನು ಸತ್ಯಾಗ್ರಹಿಗಳು ಭರಿಸಿದಂತೆ ಕಷ್ಟಕ್ಕೊಳಗಾಗಬೇಕು. ದಿನಕ್ಕೆ ಇಂತಿಷ್ಟು ಜನ ಇಂತಿಂಥ ಕಡೆ ಶಾಸನೋಲ್ಲಂಘನೆ ಮಾಡುವುದಾಗಿ ನಿರ್ಧರಿಸಿ ದೀರ್ಘಕಾಲ ಶಾಂತಿಯುತ ಚಳವಳಿಯನ್ನು ಹೂಡಬಹುದು. ಎಷ್ಟು ದಿನ, ಎಷ್ಟು ಸಹಸ್ರ ಸತ್ಯಾಗ್ರಹಿಗಳನ್ನು ಸರ್ಕಾರ ಶಿಕ್ಷಿಸಬಹುದು? ಇಂತಹ ಶಾಂತಿಯುತ ಸತ್ಯಾಗ್ರಹ ಇಡೀ ದೇಶದ ಗಮನವನ್ನು ಸೆಳೆಯುತ್ತದೆ. ಆಗ ಕೇಂದ್ರ ಸರ್ಕಾರ, ಅಂದರೆ ಪ್ರಧಾನಿ ಈ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಬೇಕು. ಅವರ ಗಮನ ಸೆಳೆಯಲು ಲೋಕಸಭಾ, ರಾಜ್ಯಸಭಾ ಸದಸ್ಯರಲ್ಲದೆ ನಮ್ಮ ಸಮಸ್ಯೆಗಳನ್ನು ಸಹಾನುಭೂತಿಯಿಂದ ಕಾಣುವ ಇತರ ರಾಜ್ಯಗಳ ಲೋಕಸಭಾ, ರಾಜ್ಯಸಭಾ ಸದಸ್ಯರು ಪ್ರಧಾನಿಯವರ ಮೇಲೆ ಒತ್ತಡ ತರಬಹುದು. ಈ ಪರಿಸ್ಥಿತಿಯನ್ನುಂಟುಮಾಡಲು ಕರ್ನಾಟಕ ಜನಪ್ರತಿನಿಧಿಗಳು ಒಂದೆರಡು ದಿನ ದೆಹಲಿಯಲ್ಲಿದ್ದು ಪ್ರಧಾನಿಗಳನ್ನು ಕಂಡು ಉಪೇಕ್ಷೆಗೆ ಒಳಗಾಗಿ ಹಿಂದಿರುಗುವುದಲ್ಲ, ಕರ್ನಾಟಕದ ಆಯ್ಕೆಯಾದ, ಆಯ್ಕೆಯಾಗದ ಜನಪ್ರತಿನಿಧಿಗಳು ದೆಹಲಿಯಲ್ಲಿ ಕುಳಿತು ದೀರ್ಘಕಾಲ ಕೇಂದ್ರ ಸರ್ಕಾರದ ಗಮನವನ್ನು ಸೆಳೆಯಬೇಕು.

ಅಂತರರಾಜ್ಯ ಜಲ ಹಂಚಿಕೆಯ ವಿಚಾರದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಜಗತ್ತಿನ ರಾಷ್ಟ್ರಗಳು ಒಪ್ಪಿಕೊಂಡಿರುವ ಮಾರ್ಗಸೂಚಿ ಏನೆಂದರೆ, ಅಂತರರಾಜ್ಯದ ನದಿಯ ನೀರನ್ನು ಹಂಚುವಾಗ ಜನರಿಗೆ ಕುಡಿಯಲು ಬೇಕಾಗುವ ಅವಶ್ಯಕತೆಯಂತೆ ಜಲದಾಹ ನಿವಾರಣೆಗೆ ಅಗತ್ಯವಾದ ನೀರನ್ನು ಮೊಟ್ಟಮೊದಲು ಒದಗಿಸಬೇಕು. ಅದಾದನಂತರ ಉಳಿದ ನೀರಿನಲ್ಲಿ ಪಶು–ಪಕ್ಷಿ, ಪ್ರಾಣಿಗಳಿಗೆ ತಕ್ಕಷ್ಟು ನೀರು ಒದಗಿಸಬೇಕು.

ಈ ಅವಶ್ಯಕತೆಗೆ ಬೇಕಾಗುವ ನೀರನ್ನು ಬಳಸಿದ ಮೇಲೆ ಉಳಿದ ನೀರಿನಲ್ಲಿ ಕೃಷಿಗೆ ಬೇಕಾಗುವ ನೀರನ್ನು ಒದಗಿಸಬೇಕು. ಅದಾದ ತರುವಾಯ ಉಳಿದ ನೀರನ್ನು ಔದ್ಯೋಗಿಕ ಅವಶ್ಯಕತೆಗಳಿಗೆ ಕೊಡಬಹುದು. ಇದು ಪ್ರಪಂಚದ ಎಲ್ಲ ದೇಶಗಳು ಒಪ್ಪಿರುವ ನಿಯಮಾವಳಿ. ಇದನ್ನು 'ಹೆಲ್‌ಸಿಂಕಿ ಅಂತರರಾಷ್ಟ್ರೀಯ ಒಪ್ಪಂದ'ವೆಂದು ಒಪ್ಪಿಕೊಳ್ಳಲಾಗಿದೆ. ಈ ನಿಯಮದಂತೆ ಈ ಮಹದಾಯಿ ಹಂಚಿಕೆಯ ವಿಚಾರದಲ್ಲಿ ಮೊದಲು ಕುಡಿಯುವ ನೀರಿನ ಅವಶ್ಯಕತೆ ಇರುವ ಪ್ರಜೆಗಳಿಗೆ ಒದಗಿಸಿ, ಉಳಿದ ನೀರನ್ನು ಮಹಾರಾಷ್ಟ್ರ ಕೃಷಿ ಭೂಮಿಗೆ, ಗೋವಾದ ಪರಿಸರ ರಕ್ಷಣೆಗೆ ಉಪಯೋಗಿಸಬಹುದು.

ಆದ್ದರಿಂದ ನಮ್ಮ ಪ್ರಜೆಗಳು ಕೈಗೊಳ್ಳಬಹುದಾದ ಆಂದೋಲನಕ್ಕೆ ಅಂತರರಾಷ್ಟ್ರೀಯ ಜಲವಿವಾದ ಒಪ್ಪಂದದ ನೀತಿಯು ಬೆಂಬಲಿಸುತ್ತದೆ. ಆ ಅಂತರರಾಷ್ಟ್ರೀಯ ನಿಯಮವನ್ನು ಆಚರಣೆಗೆ ತರದಿದ್ದರೆ ಅದು ನಮ್ಮ ದೇಶದ ಘನತೆಗೆ ಧಕ್ಕೆಯನ್ನುಂಟುಮಾಡಿದಂತಾಗುತ್ತದೆ.

*ಬೆಂಗಳೂರು* ***ಕೋ. ಚೆನ್ನಬಸಪ್ಪ***

## 'ಹೊಸತು' ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೧೬ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು ಓದುಗರಿಗೆ ಸಾಹಿತ್ಯದ ಸುರಿಮಳೆ ! ಲೇಖನಗಳ ಆಯ್ಕೆ / ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ತಲುಪುವುದು ತಡವಾಗಬಹುದು. ೨೦೧೬ ಜನವರಿ ೧೫ರೊಳಗೆ ನಿರೀಕ್ಷಿಸಿ. ಓದುಗರು ಸಹಕರಿಸಬೇಕಾಗಿ ವಿನಂತಿ.

### ಗೋಹತ್ಯೆ ಪಾತಕಿಗಳನ್ನು ಬಲಿ ಹಾಕಿ – ಇದು ವೇದವಾಕ್ಯವಂತೆ !

ಉತ್ತರ ಪ್ರದೇಶದ ಬಿಸಾಡ (ದಾದ್ರಿ) ಎಂಬಲ್ಲಿ ನಡೆದ ಮೊಹಮ್ಮದ್ ಅಖ್ಲಾಕ್ ಎಂಬಾತನ ಕಗ್ಗೊಲೆಯ ಬಗೆಗೆ ಆರಂಭದಲ್ಲಿ ಪ್ರಕಟವಾದ ವರದಿಗಳಲ್ಲಿ ಯಾರೂ ಆರ್.ಎಸ್.ಎಸ್. ಸಂಘಟನೆಯ ಮೇಲೆ ನೇರವಾಗಿ ಆರೋಪ ಹೊರಿಸಿದಂತೆ ತೋರಲಿಲ್ಲ. ಆದರೂ ರಾಷ್ಟ್ರೀಯ ಸ್ವಯಂ ಸೇವಕ ಸಂಘವು, ಸ್ವಯಂ ಪ್ರೇರಣೆಯಿಂದ, ತನ್ನ ಮುಖವಾಣಿಯಾದ 'ಪಾಂಚಜನ್ಯ'ದ ಮೂಲಕ 'ಈ ಘಟನೆಗೂ ತನಗೂ ಸಂಬಂಧವಿಲ್ಲವೆಂದು' ಸ್ಪಷ್ಟೀಕರಣ ನೀಡಲು ಪ್ರಯತ್ನಿಸಿದೆ (ಕುಂಬಳಕಾಯಿ ಕಳ್ಳ ಎಂದರೆ ಹೆಗಲುಮುಟ್ಟಿ ನೋಡಿಕೊಂಡ ! ಎಂಬ ಗಾದೆ ನೆನಪಾಗುತ್ತದೆ.) ರಾಷ್ಟ್ರೀಯ ಸ್ವಯಂಸೇವಕ ಸಂಘದ ಪ್ರಮುಖ ಪ್ರಚಾರಕರಾದ ಮನೋಹರ ವೈದ್ಯ ಅವರು ಒಂದು ಕಡೆ "ದಾದ್ರಿ ಘಟನೆಯ ಬಗೆಗಿನ ಕಿರುಚಾಟವು ಸಂಪೂರ್ಣವಾಗಿ ಸುಳ್ಳು ಮತ್ತು ನಿರಾಧಾರವಾದುದು; ಆರ್.ಎಸ್.ಎಸ್. ಯಾವತ್ತೂ ಯಾವುದೇ ಬಗೆಯ ಹಿಂಸಾಚಾರವನ್ನು ಸಮರ್ಥಿಸುವುದಿಲ್ಲ" – ಎಂದಿದ್ದಾರೆ.

ಆದರೆ, ಅಕ್ಟೋಬರ್ ೨ನೇ ವಾರದ 'ಪಾಂಚಜನ್ಯ'ದಲ್ಲಿ 'ಗೋಹತ್ಯೆ ಮಾಡಿದ ಪಾತಕಿಗಳನ್ನು ಕೊಲ್ಲಬೇಕೆಂದು, ವೇದದಲ್ಲಿ ಆದೇಶಿಸಲಾಗಿದೆ ಇತ್ಯಾದಿಯಾಗಿ (ವೇದ್ ಕೆ ಆದೇಶ್ ಹೈ ಕಿ ಗೋಹತ್ಯಾ ಕರ್ನೇವಾಲೆ ಪಾತಕಿಕೆ ಪ್ರಾಣ್ ಲೇಲೋ... ಎಂದು ಬರೆದಿದೆ) ... ಮುಂದುವರಿದು ಮೊಹಮ್ಮದ್ ಅಖ್ಲಾಕ್/ಇಖ್ಲಾಕ್‌ನನ್ನು ಕಗ್ಗೊಲೆ ಮಾಡಿದ್ದು ಒಂದು 'ಸಹಜ ಪ್ರತಿಕ್ರಿಯೆ' ಎಂದೂ ಹೇಳಲಾಗಿದೆ.

ಮೇಲಿನ ಅಭಿಪ್ರಾಯಕ್ಕೆ ಸಮರ್ಥನೆಯಾಗಿ ವಿಜ್ಞಾನಿ ನ್ಯೂಟನ್ ಪ್ರತಿಪಾದಿಸಿದ ಭೌತಶಾಸ್ತ್ರೀಯ ನಿಯಮವನ್ನು ಕೂಡ ಎಳೆದುತರಲಾಗಿದೆ. "ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಪರಸ್ಪರ ಸಮಾನವೂ, ವಿರುದ್ಧವೂ ಆಗಿರುತ್ತವೆ" – ಎಂಬುದು ಪಾಂಚಜನ್ಯವು ತನ್ನ ವಾದಕ್ಕೆ ಸಮರ್ಥನೆಯಾಗಿ ಕೊಡುವ ನ್ಯೂಟನ್ ನಿಯಮ. ಮುಂದುವರಿದು, ಹೀಗೆ, (ಗೋಹತ್ಯೆಗೆ ಪ್ರತಿಯಾಗಿ ಪಾತಕಿಯ ಹತ್ಯೆ) ಭಾವಿಸುವ ಸಮುದಾಯದಲ್ಲಿ ಬದುಕುತ್ತಿರುವ ಇಖ್ಲಾಕ್/ಅಖ್ಲಾಕ್ ನಂತಹವರು (ಆ ಮನೆಯಲ್ಲಿ ಹಸುವನ್ನು ಕೊಲ್ಲಲಾಗಿತ್ತೇ ಎಂಬುದು) ಗೋವಧೆ ಮಾಡುವ (ಸದ್ಯಕ್ಕೆ ಇದೊಂದು ಮಾರಣಾಂತಿಕ ಶಿಕ್ಷೆಗೆ ಗುರಿಯಾಗುವಂತಹ ಅನುಮಾನ ಅಷ್ಟೆ) ಧೈರ್ಯಮಾಡಿದುದಾದರೂ ಹೇಗೆ ? – ಎಂದು ನೀವೇಕೆ ಯೋಚಿಸುವುದಿಲ್ಲ ? – ಎಂದು ಓದುಗರನ್ನು ಪ್ರಶ್ನಿಸುತ್ತದೆ ಪಾಂಚಜನ್ಯ. ಅಲ್ಲದೆ, ಶೇಕಡ ೮೦ರಷ್ಟು ಬಹುಜನರ ಭಾವನೆಗಳನ್ನು ಗೌರವಿಸದಿದ್ದರೆ ಇಂಥ ಘಟನೆಗಳನ್ನು ತಡೆಯುವುದು ಸಾಧ್ಯವಿಲ್ಲ – ಎಂಬ ಹುಕುಂ ಕೂಡ ನೀಡುತ್ತದೆ.

ಪಾಂಚಜನ್ಯದ ಉಲ್ಲೇಖಗಳಿಗೆ ಸಂಬಂಧಿಸಿದಂತೆ, ನನ್ನನ್ನು ಕಾಡುತ್ತಿರುವ ಎರಡು ಪ್ರಶ್ನೆಗಳಿಗೆ ಪಾಂಚಜನ್ಯ ಬಳಗದವರು ಅಥವಾ ಯಾರಾದರೂ ಪ್ರಾಜ್ಞರಾದ, ಸಾಮಾಜಿಕ ಕಳಕಳಿಯುಳ್ಳ ವಿದ್ವಾಂಸರು ಉತ್ತರ ಕೊಡಬೇಕೆಂಬುದು ನನ್ನ ವಿನಂತಿ.

೧) ವೇದಗಳಲ್ಲಿ ಹೇಳಿದೆ, ಎಂದರೆ ಯಾವ ವೇದದ, ಯಾವ ಭಾಗದಲ್ಲಿ, ಯಾವ ಶ್ಲೋಕ (ಮಂತ್ರ, ಋಕ್)ದಲ್ಲಿ ಮೇಲಿನ ಮಾತುಗಳನ್ನು ಹೇಳಲಾಗಿದೆ ? ಆ ಮಂತ್ರದ ದ್ರಷ್ಟಾರನಾದ ಋಷಿಪುಂಗವ ಯಾರು ? ಮಂತ್ರದ ಅಧಿದೇವತೆ ಯಾರು ?

೨) ನ್ಯೂಟನ್ ನಿಯಮದಂತೆ ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಪರಸ್ಪರ (ವಿರುದ್ಧವೂ) ಸಮಾನವಾಗಿರುತ್ತವೆ – ಎನ್ನುವಾಗ ಒಂದು ಬಗೆಯ ಲೆಕ್ಕಾಚಾರವಿರಬೇಕಲ್ಲವೇ ? 'ಪಾಂಚಜನ್ಯ'ವು ಈ ಬಗೆಯ ಲೆಕ್ಕವಿಟ್ಟಿದೆಯೇ ? ಇದರ (ಪಾಂಚಜನ್ಯದ) ಪ್ರಕಾರ ಲೆಕ್ಕವನ್ನು ಸರಿದೂಗಿಸಲು ಇನ್ನು ಎಷ್ಟು ಜನ ಹಿಂದೂಗಳು ಎಷ್ಟು ಜನ ಮುಸಲ್ಮಾನರನ್ನು ಅಥವಾ ಎಷ್ಟು ಜನ ಮುಸಲ್ಮಾನರು ಎಷ್ಟು ಜನ ಹಿಂದೂಗಳನ್ನು ಕೊಲ್ಲಬೇಕು ? ಲೆಕ್ಕಾಚಾರವು ಎಂದಾದರೂ ಸರಿಹೋದೀತೆ ? ದೇಶಕ್ಕೆ ಎಂದಾದರೂ ನೆಮ್ಮದಿಯು ದೊರೆತೀತೇ ? ದಯಮಾಡಿ, ತಮ್ಮ ಪತ್ರಿಕೆಯ ಮೂಲಕ ನನ್ನ ಪ್ರಶ್ನೆಗಳಿಗೆ ಉತ್ತರವನ್ನೊದಗಿಸಿದರೆ ಉಪಕಾರವಾಗುತ್ತದೆ.

*ಬೆಂಗಳೂರು* ***ಗುಂಡಪ್ಪ***

### ಅಂತರಾಳದ ಅನಿಸಿಕೆ

ಡಾ॥ ಸಿದ್ದನಗೌಡ ಪಾಟೀಲರಿಂದ ನಿರೂಪಿಸಲ್ಪಟ್ಟ 'ಹೀಗಿದ್ದರು ಕಲಬುರ್ಗಿ ಮಾಮಾ' ಎನ್ನುವ ಸಂಪ್ರದಾಯ ಶರಣರೆಂದು ಸಮಾಜದ ಕೆಲವು ಮಂದಿಗಳಿಂದ ಮನ್ನಣೆಯ ಮಣೆ ಪಡೆದ

ಮತಾಂಧ ವಿಶ್ವಾಸಿಗಳಿಂದ ಬರ್ಬರವಾಗಿ ಮರಣವನ್ನಪ್ಪಿದ ವೀರ ಸಿದ್ಧಾಂತಿ ಕರ್ಮಯೋಗಿ ಡಾ|| ಎಂ. ಎಂ. ಕಲಬುರ್ಗಿ ಅವರು ಕಣ್ಮರೆಯಾದ ಚಿತ್ರಣವನ್ನು ಓದುಗರ ಕಣ್ಮುಂದೆ ಕಂಡರೀತಿಯಲ್ಲಿ ತಿಳಿಯಪಡಿಸಿ ಹೊಚ್ಚ ಹೊಸ ನುಡಿ ನಮನ ಒಂದಕ್ಕೆ ಅಸ್ಥಿವಾರ ಅನ್ನಿಸಿದ 'ಹೊಸತು'ವಿನ ಅಕ್ಟೋಬರ್ ಸಂಚಿಕೆ ವಿಶಿಷ್ಟ ರೀತಿಯಲ್ಲಿ ಮೂಡಿಬಂದಿದೆ.

ವಿವಿಧ ಕಲಾವಿದರು ಕುಂಚದಲ್ಲಿ ಗಾಂಧೀಜಿ ಯವರ ಹತ್ತು ಭಾವ ಚಿತ್ರಗಳು ಒಂದಕ್ಕಿಂತ ಒಂದು ಅರ್ಥಗರ್ಭಿತವಾಗಿ ಚಿತ್ರಿತಗೊಂಡ ರೀತಿ ಅವರ ಜನ್ಮದಿನಾಚರಣೆಯನ್ನು ನೆನಪಿಸಿ ಮುಖಚಿತ್ರ ಅನಾವರಣ ಹೊಂದಿದೆ. ಕಲಬುರ್ಗಿಯವರ ಮರಣ ಸನ್ನಿವೇಶವನ್ನು ಸ್ಮರಿಸಿಕೊಳ್ಳುವ ಹಾಗೆ ಗಾಂಧಿ ಸ್ಮರಣೆಯ ಆಶಯವನ್ನು ಸ್ಪಷ್ಟೀಕರಿಸಿದ 'ಹೊಸತು'ವಿನ ಮಹತ್ವವನ್ನು ಎತ್ತಿತೋರಿಸಿದೆ.

*ಕಾಸರಗೋಡು* **ಕೀರಿಕ್ಕಾಡು ವನಮಾಲಕೇಶವಭಟ್ಟ**

## ದೈನಂದಿನ ಜೀವನದಲ್ಲಿ ಸ್ಮಾರ್ಟ್ ಫೋನ್‌ಗಳ ಲಗ್ಗೆ !

✉ ಆಧುನಿಕ ತಂತ್ರಜ್ಞಾನ ವಿಕಾಸವಾದಂತೆ ನಾಗರಿಕತೆಯೂ ಸ್ಮಾರ್ಟ್ ಆಗುತ್ತಿದೆ. ಮೊದಮೊದಲು ಹಕ್ಕಿಗಳಿಂದ, ಅಂಚೆದಾರರಿಂದ, ಗ್ರಾಮಫೋನ್‌ಗಳಿಂದ, ಸ್ಥಿರ ದೂರವಾಣಿಗಳಿಂದ ಸಂವಹನ ಸಂಪರ್ಕ ನಡೆಯುತ್ತಿತ್ತು. ಆದರೆ ಮೊಬೈಲ್ ಕಂಡುಹಿಡಿದ ಮೇಲೆ ಸಾಮಾಜಿಕ ಶೈಲಿಯೇ ಬದಲಾವಣೆಯಾಯಿತೆನ್ನಬಹುದು.

ಮೊಬೈಲಿನ ಉದ್ದೇಶವೇ ಹೊರಪ್ರಪಂಚದೊಡನೆ ಸಂಪರ್ಕ ಬೆಸೆಯುವುದಾಗಿದೆ. ಆದರೆ ಅಂತರಜಾಲ ಸೌಲಭ್ಯವಿರುವ ಸ್ಮಾರ್ಟ್ ಫೋನುಗಳ ದೆಸೆಯಿಂದ ಇದೀಗ ಸಂಪರ್ಕವೆಂಬ ಪರಿಕಲ್ಪನೆಯ ವ್ಯಾಖ್ಯೆಯೇ ಬದಲಾಗಿಬಿಟ್ಟಿದೆ. ಈಗ ಮನೆಕೆಲಸದವರಿಂದ ಹಿಡಿದು ಮಂತ್ರಿಗಳವರೆಗೆ ಸ್ಮಾರ್ಟ್ ಫೋನುಗಳು ಸಾಮಾನ್ಯವಾಗಿಬಿಟ್ಟಿವೆ. ಒಂದೆಡೆ ತಂತ್ರಜ್ಞಾನದ ಬೆಳವಣಿಗೆಯಿಂದ ಅವುಗಳ ದರ ಅಗ್ಗವಾಗುತ್ತಿದೆ. ಪರಸ್ಪರ ದೂರದಲ್ಲಿದ್ದ ಇಬ್ಬರು ವ್ಯಕ್ತಿಗಳು ಧ್ವನಿಯ ಮೂಲಕವೋ ಪತ್ರದ ಮೂಲಕವೋ ಮಾತ್ರವೇ ವ್ಯವಹರಿಸಬೇಕಿದ್ದ ಪರಿಸ್ಥಿತಿ ಈಗಿಲ್ಲ ಬಿಡಿ; ಏಕೆಂದರೆ ಮೊಬೈಲ್ ಕಂಪನಿಗಳೂ ದಿನದಿಂದ ದಿನಕ್ಕೆ ಅಧಿಕವಾಗುತ್ತಿವೆ. ಜೊತೆಗೆ, ಸ್ಪರ್ಧಾತ್ಮಕವಾಗಿ ಬೆಳೆಯುವ ಅನಿವಾರ್ಯತೆ ಎದುರಾದಾಗ ರಿಯಾಯಿತಿ ದರ ನೀಡಲೇಬೇಕಾಗುತ್ತದೆ. ಆದ್ದರಿಂದಲೇ ಕೂಲಿ ಜೀವನ ಸಾಗಿಸುವವನಿಗೂ ಮೊಬೈಲ್ ಬಳಕೆ ಸಾಧ್ಯವಾಗಿದೆ. ದೂರ ಜಾಸ್ತಿಯಿದ್ದಷ್ಟೂ ದೂರವಾಣಿ ಕರೆಯ ಬೆಲೆಯೂ ಜಾಸ್ತಿಯಾಗುತ್ತಿದ್ದ ಪರಿಸ್ಥಿತಿ ಕೂಡ ಈಗ ಇಲ್ಲ. ವಾಟ್ಸಪ್‌ನಂತಹ ಸೌಲಭ್ಯಗಳು ಪತ್ರ, ಚಿತ್ರ ಹಾಗೂ ಧ್ವನಿರೂಪದಲ್ಲಿ ಯಾರ ಜೊತೆಗೆ ಯಾವಾಗ ಬೇಕಿದ್ದರೂ ಸಂಪರ್ಕದಲ್ಲಿರುವುದನ್ನು ಸಾಧ್ಯವಾಗಿಸಿವೆ, ಅದೂ ಅತ್ಯಂತ ಕಡಿಮೆ ವೆಚ್ಚದಲ್ಲಿ ! ಕುಟುಂಬದ ಸದಸ್ಯರು ದೇಶವಿದೇಶಗಳಲ್ಲಿದ್ದರೂ ಸುಲಭವಾಗಿ ಅವರೊಂದಿಗೆ ಮಾತನಾಡಬಹುದು. ಇತ್ತೀಚಿನ ಮೊಬೈಲ್‌ಗಳಿಗೆ ಸ್ಕೈಪ್ ಅಳವಡಿಸಿರುವುದರಿಂದ ಮುಖಾಮುಖಿಯಂತೆ ಕೂಡ ಒಬ್ಬರನ್ನೊಬ್ಬರು ನೋಡಿಕೊಂಡೇ ಮಾತನಾಡಬಹುದು. ಜಗತ್ತಿನ ಒಂದು ಮೂಲೆಯಿಂದ ಮತ್ತೊಂದು ಮೂಲೆಯ ಜನರೊಂದಿಗೆ ಇಂತಹ ಸೌಲಭ್ಯಗಳ ಮೂಲಕ ಸದಾಕಾಲ ಪರಸ್ಪರ ಸಂಪರ್ಕದಲ್ಲಿರುವುದು ಸಾಧ್ಯ. ಎಸ್‌ಟಿಡಿ–ಐಎಸ್‌ಡಿಗಳ ದುಬಾರಿ ಬೆಲೆಯ ಬಗ್ಗೆ ಚಿಂತೆಯಿಲ್ಲದೆ ಮಾತನಾಡಿಕೊಳ್ಳುವುದು ಕೂಡ ಈಗ ಬಹು ಸುಲಭ. ಅಂತೆಯೇ ಇ–ಮೇಲ್ ವ್ಯವಸ್ಥೆಗಳು, ಟ್ವಿಟರ್–ಫೇಸ್‌ಬುಕ್, ವಾಟ್ಸಪ್‌ನಂತಹ ಸಾಮಾಜಿಕ ಜಾಲಗಳೂ ಮೊಬೈಲ್ ಮೂಲಕ ನಮ್ಮ ಬದುಕನ್ನು ಇನ್ನಷ್ಟು ಹತ್ತಿರ ಮಾಡಿವೆ. ನಾವು ಎಲ್ಲಿದ್ದೇವೆ, ಏನು ಮಾಡುತ್ತಿದ್ದೇವೆ ಎನ್ನುವುದನ್ನೆಲ್ಲ ನಮ್ಮ ಆಪ್ತರಿಗೆ ಕ್ಷಣಾರ್ಧದಲ್ಲಿ ತಿಳಿಸುವ ಸೌಲಭ್ಯ ದೊರೆತಿರುವುದು ಮೊಬೈಲಿನಿಂದಲೇ. ಆದರೆ ಇತ್ತೀಚೆಗೆ ಕೆಲವರು ಈ ತಂತ್ರಜ್ಞಾನವನ್ನು ದುರ್ಬಳಕೆ ಮಾಡಿಕೊಳ್ಳುತ್ತಿದ್ದಾರೆ.

ಅಶ್ಲೀಲ ಸಂದೇಶಗಳು, ಚಿತ್ರಗಳು, ವೀಡಿಯೋಗಳನ್ನು ಹಾಕುತ್ತ, ಇಲ್ಲವೇ ರಾಜಕಾರಣಿಗಳನ್ನೆಲ್ಲಾ ಅವಹೇಳನ ಮಾಡುತ್ತಾ ಅಥವಾ ಜಾತಿ, ಧರ್ಮಗಳ ಬಗ್ಗೆ ಕೆರಳಿಸುವ ಮಾತುಗಳ ಮೂಲಕ ಇಡೀ ಅಂತರ್ಜಾಲದಲ್ಲೇ ಕೋಲಾಹಲವನ್ನೆಬ್ಬಿಸಿ ತಲೆಮರೆಸಿಕೊಳ್ಳುವವರೂ ಇದ್ದಾರೆ.

ಈಗಿನ ಪ್ರೈಮರಿ ಶಾಲೆಯ ಹಂತದ ಮಕ್ಕಳ ಕೈಯಲ್ಲೂ ಸಲೀಸಾಗಿ ಸ್ಮಾರ್ಟ್ ಫೋನುಗಳು ಸಿಕ್ಕಿಬಿಡುತ್ತವೆ. ಕೈಗೆ ಮೊಬೈಲ್ ಸಿಕ್ಕರೆ ಸಾಕು, ಚ್ಯಾಟಿಂಗ್ ಶುರುವಾಗಿಬಿಡುತ್ತದೆ, ಇಲ್ಲವೆ ಗೂಗಲ್ ತೆರೆದುಕೊಂಡುಬಿಡುತ್ತದೆ. ಯು ಟ್ಯೂಬ್ ಅಥವಾ ಗೂಗಲ್ ಓಪನ್ ಆದ ತಕ್ಷಣ ನಮಗೆ ಬೇಡವಾದ ವಿಷಯಗಳೇ ಕಣ್ಣಿಗೆ ರಾರಾಜಿಸುವುದು ಹೆಚ್ಚು ! ಆದರೆ ಅದ್ಯಾವ ಪರಿವೆಯೂ ಇಲ್ಲದ ತಾರುಣ್ಯದ ಮಕ್ಕಳಿಗೆ ಸಹಜವಾಗಿಯೇ ಅಲ್ಲಿನ ಅಶ್ಲೀಲ ಚಿತ್ರಗಳು, ವಿಡಿಯೋಗಳು ಗಮನ ಸೆಳೆಯುತ್ತವೆ. ಇವು ಆ ಮಕ್ಕಳ ಭವಿಷ್ಯದ ದಿಕ್ಕನ್ನೇ ಬದಲಾಯಿಸಬಲ್ಲವು. ಇಲ್ಲಿ ಪೋಷಕರ ಪಾತ್ರ ಮಹತ್ತರವಾಗಿರುತ್ತದೆ. ಮಕ್ಕಳ ಕೈಗೆ ಸ್ಮಾರ್ಟ್ ಫೋನ್ ನೀಡಿದಾಗ ಅದರ ಬಳಕೆಯ ಬಗ್ಗೆಯೂ ಗಮನಹರಿಸಬೇಕು. ಇಲ್ಲವಾದರೆ ದೊಡ್ಡ ದೊಡ್ಡ ಅನಾಹುತಗಳಿಗೆ ಕಾರಣವಾಗಬೇಕಾಗುತ್ತದೆ.

ಆಧುನಿಕ ತಂತ್ರಜ್ಞಾನವನ್ನು ನಾವು ಸಕಾರಾತ್ಮಕವಾಗಿ ಬಳಸಿಕೊಂಡರೆ ಲಾಭ, ಇಲ್ಲವಾದರೆ ಅದರಿಂದಾಗುವ ತೊಂದರೆಗಳೇ ಹೆಚ್ಚು.

*ಹಾಸನ* **ಕೊಟ್ರೇಶ್ ಎಸ್. ಉಪ್ಪಾರ್**

# ಕ್ಷ - ಕಿರಣ

-ಸಾನ್ವಿ ಪಿ.


ನಮ್ಮೆಟ್ರೊಗೆ... ಟಿಪ್ಪುಗೌಡ... ಅಲ್ಲಲ್ಲ ಕ್ಷಮಿಸಿ ಕೆಂಪೇಗೌಡ ಮೆಟ್ರೋ ಅಂತ ಹೆಸರಿಡ್ತೇವಿ.
TV


ನಿನ್ನನ್ನ ಯಾರಾದರು ರೇಪ್ ಮಾಡಿದರೆ ನಾನೇನ್ಮಾಡ್ಲಿ... ......ಕ್ಷಮಿಸು... ನೀನು ನನ್ನಮ್ಮನ ಸಮಾನ


ಅವರ DNA ಅಷ್ಟು ಸ್ಟ್ರಾಂಗ್ ಇದೆಯಾ? !
ಬಿಹಾರ DNA ಪರೀಕ್ಷೆ

# ಬಿಹಾರ ಚುನಾವಣೆ : ಕೆಲವು ಅನಿಸಿಕೆಗಳು

**ಜಿ. ರಾಮಕೃಷ್ಣ**



ನಿತೀಶ್ ಕುಮಾರ್ ಮತ್ತು ಲಾಲೂಪ್ರಸಾದ್‌ರ ಪಕ್ಷಗಳನ್ನುಳಿದು ಬಹುಶಃ ಯಾರೂ ನಿರೀಕ್ಷಿಸದಿದ್ದಂತಹ ಸ್ವಾಗತಾರ್ಹ ಫಲಿತಾಂಶವನ್ನು ನೀಡಿ ಬಿಹಾರವು ದೇಶಕ್ಕೆ ಸ್ವಲ್ಪ ಭರವಸೆ ಕಟ್ಟಿಕೊಟ್ಟಿದೆ. ಯಾವ ಪರಿವೀಕ್ಷಣೆಯ ಅಂದಾಜಿನಲ್ಲೂ ಅಂತಹ ಗೆಲುವನ್ನು ಪ್ರಕಟಿಸಿರಲಿಲ್ಲ. ಬಿಹಾರದ ಜನತೆಗೆ ಧನ್ಯವಾದಗಳನ್ನು ಹೇಳುವುದು ಸರ್ವಥಾ ಅನುಚಿತವಲ್ಲ. ೨೦೦೨ರಲ್ಲಿ ಹಾದಿಬೀದಿಗಳಲ್ಲಿ ಕೊಲೆಗಳು ನಡೆದಿದ್ದ ಗುಜರಾತಿನ ಅಂದಿನ ಮುಖ್ಯಮಂತ್ರಿ ಬಿಹಾರವನ್ನು "ಜಂಗಲ್ ರಾಜ್" ಎಂದು ಅವರ ಚುನಾವಣಾ ಪ್ರಚಾರ ಭಾಷಣಗಳಲ್ಲಿ ಪದೇಪದೇ ಹಂಗಿಸಿದ್ದರು. ಜಂಗಲ್‌ನ ಪ್ರಾಣಿಗಳು ತಾವೆಷ್ಟು ಸೌಮ್ಯ ಮತ್ತು ದೂರದರ್ಶಿಗಳು ಎಂಬುದನ್ನು ಸ್ಪಷ್ಟವಾಗಿ ತಿಳಿಸಿಕೊಟ್ಟಿವೆ. ಅವರೇಕೆ ದೂರದರ್ಶಿಗಳೆಂದರೆ ಇಡೀ ದೇಶಕ್ಕೆ ಆರೋಗ್ಯಕರ ಪರ್ಯಾಯ ಮಾರ್ಗವೊಂದಿದೆ ಎಂಬುದನ್ನು ನಿಚ್ಚಳವಾಗಿ ಅವರು ದೇಶದ ಮುಂದಿರಿಸಿದ್ದಾರೆ. ಇಂತಹ ಪ್ರಚಂಡ ಬೆಳವಣಿಗೆಯ ಸಂದರ್ಭದಲ್ಲಿ ಬಿಹಾರದ ಎಡಪಕ್ಷಗಳು ಸಂಭ್ರಮಿಸುವ ಅವಕಾಶ ಮತ್ತು ಹಕ್ಕನ್ನು ಕಳೆದುಕೊಂಡಿವೆ. ಮಹಾಗಡ್‌ಬಂಧನದಲ್ಲಿ ಕಾಂಗ್ರೆಸ್ ಪಕ್ಷವೂ ಇತ್ತೆಂಬುದು ಚುನಾವಣೆಯಲ್ಲಿ ಸ್ಥಾನಗಳ ಹೊಂದಾಣಿಕೆಗೆ ಅಡ್ಡ ಬಂದಿರಬಹುದು, ಇಲ್ಲವೇ ಸ್ಥಾನಗಳ ಸಂಖ್ಯೆಯ ಬಗೆಗೆ ಒಪ್ಪಂದ ಸಾಧ್ಯವಾಗಿಲ್ಲದಿರಬಹುದು. ಹಲವು ದಶಕಗಳಿಂದ "ಎಡ ಮತ್ತು ಪ್ರಜಾಪ್ರಭುತ್ವ ಶಕ್ತಿಗಳ ಜಂಟಿ ಕಾರ್ಯಕ್ರಮವು ನಮ್ಮ ದೇಶಕ್ಕೆ ಅಗತ್ಯ" ಎಂದು ಹೇಳುತ್ತಾ ಬಂದ ಭಾರತ ಕಮ್ಯುನಿಸ್ಟ್ ಪಕ್ಷವು ಬೇರೆ ಎಡಪಕ್ಷಗಳ ಜೊತೆ ಐಕ್ಯಹೋರಾಟದಲ್ಲಿ ತೊಡಗಿರುವುದರಿಂದ ಅದರ ಹಿಂದಿನ ಘೋಷಣೆಯನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಪ್ರಸ್ತುತ ಚುನಾವಣೆಯಲ್ಲಿ ಸೋತಿದೆಯೆಂದು ತೋರುತ್ತದೆ. ಬಲಪಂಥೀಯರ ಆಟೋಪವನ್ನು ಸಮರ್ಥವಾಗಿ ಎದುರಿಸಲು ಇಂದಿನ ಸನ್ನಿವೇಶಕ್ಕೆ ತಕ್ಕ ಯೋಜನೆಯನ್ನು ರೂಪಿಸಿಕೊಳ್ಳಲು ಎಡಪಕ್ಷಗಳು ಮುಂದಾಗಬೇಕೋ ಇಲ್ಲವೋ ಎಂಬುದನ್ನು ಗಂಭೀರವಾಗಿ ಪರ್ಯಾಲೋಚಿಸಬೇಕು. ಸದ್ಯದಲ್ಲಿ ಸಿ.ಪಿ.ಐ. (ಎಂ–ಎಲ್) ಮಾತ್ರ ಮೂರು ಸ್ಥಾನ ಪಡೆದಿದೆ, ಒಟ್ಟು ಚಲಾಯಿತ ಮತಗಳ ಶೇ. ೧.೪ರಷ್ಟನ್ನು ಪಡೆದಿದೆ. ಅದೇ ಸಿ.ಪಿ.ಐ. ಶೇ. ೧.೫ರಷ್ಟು ಮತ ಪಡೆದಿದ್ದರೂ ಒಂದು ಸ್ಥಾನವನ್ನೂ ಪಡೆದಿಲ್ಲ. ಪಡೆದ ಒಟ್ಟು ಮತಗಳ ಅನುಪಾತ ಕ್ರಮದಲ್ಲಿ ಸ್ಥಾನಗಳನ್ನು ನೀಡುವಂತೆ ನಮ್ಮ ವ್ಯವಸ್ಥೆ ಬದಲಾಗುವವರೆಗೆ ಹೊಂದಾಣಿಕೆಯ ಅನಿವಾರ್ಯತೆ ಇರುತ್ತದೆ.

ಚುನಾವಣೆಯ ಸಂದರ್ಭದಲ್ಲಿ ರಿಸರ್ವ್ ಬ್ಯಾಂಕ್ ಗವರ್ನರ್ ರಘುರಾಮ ರಾಜನ್, ಇನ್‌ಫೋಸಿಸ್‌ನ ನಾರಾಯಣಮೂರ್ತಿ ಹಾಗೂ ಕೆಲವು ಸಿನಿಮಾ ನಟರು ಭಾರತೀಯ ಜನತಾ ಪಕ್ಷದ ನಾಯಕರ ಬೈಗುಳ ತಿಂದಿದ್ದಾರೆ. ಅವರು ಯಾರೂ ಮೋದಿಯವರನ್ನಾಗಲಿ, ಅವರ ಪಕ್ಷವನ್ನಾಗಲಿ ಟೀಕಿಸಲಿಲ್ಲ. ಭಾರತದ ಬಹುತ್ವದ ಪರಂಪರೆಯನ್ನು ಕಿತ್ತೊಗೆಯಬಾರದು ಎಂಬಂಶವನ್ನು ತಮ್ಮದೇ ರೀತಿಗಳಲ್ಲಿ ಇವರೆಲ್ಲಾ ಅಭಿವ್ಯಕ್ತಿಸಿದ್ದರು. ಒಂದು ರಾಜಕೀಯ ಪಕ್ಷವು ಅಂತಹ ಟೀಕೆಗಳು ಬರಲೇಕೂಡದೆಂದು ಆಗ್ರಹಿಸುವುದು ಸೂಕ್ತವಲ್ಲ. ಅರ್ಥಸಚಿವ ಜೇಟ್ಲಿಯವರು ರಿಸರ್ವ್ ಬ್ಯಾಂಕ್ ಕಾರ್ಯವ್ಯಾಪ್ತಿಯಲ್ಲಿ ತಮ್ಮ ಮೂಗುತೂರಿಸಿದ್ದು ಸಹ ರಾಜನ್‌ರ ಬಹಿರಂಗ ಹೇಳಿಕೆಗೆ ಪ್ರಚೋದನೆ ನೀಡಿರಬಹುದು. ಸಾಂಸ್ಥಿಕ ಚೌಕಟ್ಟುಗಳನ್ನು ಭಗ್ನಗೊಳಿಸುವುದನ್ನು ತಟಸ್ಥರಾಗಿ ವೀಕ್ಷಿಸುತ್ತಿರಲು ಸಾಧ್ಯವೆ? ಇನ್ನೊಂದು ಉದಾಹರಣೆ ಅರುಣ್ ಶೌರಿ ಅವರದು. ಅವರಿಗೆ ಖಾಸಗಿತ್ವದ ವೃದ್ಧಿ ಶೀಘ್ರವಾಗಿ ನೆರವೇರುತ್ತಿಲ್ಲವೆಂಬುದು ಮೈ ಪರಚಿಕೊಳ್ಳುವಂತೆ ಮಾಡುತ್ತದೆ. ರೈಲ್ವೆ, ದೂರವಾಣಿ, ಸಾರ್ವಜನಿಕ ಉದ್ದಿಮೆಗಳು ಮತ್ತು ಸೇವೆಗಳು, ಒಂದೇ ಕ್ಷಣದಲ್ಲಿ ಸಾರ್ವಜನಿಕವಲಯದಿಂದ ಖಾಸಗಿವಲಯಕ್ಕೆ ಹೋಗಿಬಿಡಬೇಕೆಂಬುದು ಅವರ ಜೀವನಮೌಲ್ಯ. ಆದ್ದರಿಂದ ಅವರು "ಭಾಜಪ = ಕಾಂಗ್ರೆಸ್ + ಗೋವು" ಎಂಬ ಸಮೀಕರಣವನ್ನು ಪ್ರಸಿದ್ಧಪಡಿಸಿದ್ದಾರೆ. ಅವರು "ಮಿಥ್ಯಾ ದೇವತೆಗಳ ಆರಾಧನೆ" ಎಂಬ ಪುಸ್ತಕ ಬರೆದು ಡಾ॥ ಅಂಬೇಡ್ಕರ್ ಅವರನ್ನು ಹಿಗ್ಗಾಮುಗ್ಗಾ ಥಳಿಸಿದಾಗ ಅವರ ಪಕ್ಷವು ಶೌರಿಯವರನ್ನು ಮೆಚ್ಚಿಕೊಂಡಿತ್ತು, ಆದರೆ ಈಗ ಅವರ ಮಾತು ಅಪಥ್ಯವಾಗಿದೆ. ಆರೆಸ್ಸೆಸ್‌ನ ಮುಖವಾಣಿ "ಪಾಂಚಜನ್ಯ"ವು ತನ್ನ ವಿಶೇಷ ಸಂಚಿಕೆಯಲ್ಲಿ ಅಂಬೇಡ್ಕರ್ ಅವರನ್ನು ಆಕಾಶದೆತ್ತರಕ್ಕೇರಿಸಿದೆ. ಅದು ನೈಜಭಾವನೆಯೋ ದಲಿತರನ್ನು ಓಲೈಸುವ ತಂತ್ರವೋ ಎಂಬುದನ್ನು ತಿಳಿಯಲಾಗದಷ್ಟು ಮೂರ್ಖತನ ನಮ್ಮ ಜನರನ್ನು ಆವರಿಸಿಲ್ಲ.

ಅಸಹಿಷ್ಣುತೆಯ ಮಾತನ್ನಾಡಿ ನಮ್ಮ ದೇಶದ ಘನತೆಯನ್ನು ಕುಗ್ಗಿಸಬೇಕೆಂಬ ಆಶಯ ಕೆಲವು "ಬುದ್ಧಿಜೀವಿ"ಗಳ ಉದ್ದೇಶವಾಗಿದೆಯೆಂದು ಹಲವು ಭಾಜಪ ನಾಯಕರು ರೋಷ ಪ್ರದರ್ಶಿಸಿದ್ದಾರೆ. ಸರ್ಕಾರದಿಂದ ಪಡೆದಿದ್ದ ಪ್ರಶಸ್ತಿಗಳನ್ನು ಹಿಂದಿರುಗಿಸುವುದರಲ್ಲಿ ರಾಜಕೀಯ ಕುತಂತ್ರವಿದೆ ಎಂದು ಅನುಪಮ ಖೇರ್, ಡಾ॥ ಎಸ್. ಎಲ್. ಭೈರಪ್ಪ, ಶ್ರೀ. ಟಿ. ಎಸ್. ನಾಗಾಭರಣ, ಮುಂತಾದವರು ಕೆರಳಿದ್ದಾರೆ. ದೇಶದಲ್ಲಿ ಜರುಗಿದ ಅಥವಾ ಜರುಗುತ್ತಿರುವ ಯಾವುದೋ ಒಂದು ನಿರ್ದಿಷ್ಟ ಪ್ರಸಂಗವನ್ನು ದೃಷ್ಟಿಯಲ್ಲಿರಿಸಿಕೊಂಡು ಯಾರೂ ಅಸಹಿಷ್ಣುತೆಯ ಮಾತನ್ನಾಡುವುದಿಲ್ಲ. ಹತ್ತಾರು ಪ್ರಸಂಗಗಳ ಸಂಘಾತವು ಕಳವಳ ಉಂಟುಮಾಡುವುದು ಸಹಜ. ಶಿಕ್ಷಣ, ಪಠ್ಯಕ್ರಮ, ಕಲಾಸಂಸ್ಥೆಗಳ ಆಡಳಿತ ವ್ಯವಸ್ಥೆ, ಸ್ವತಂತ್ರ ಸಾಮಾಜಿಕ ಸಂಬಂಧಗಳು, ಬೌದ್ಧಿಕ ಕೃಷಿಯ ಅನಿರ್ಬಂಧಿತ ಮಾರ್ಗ, ಇಂಥವಕ್ಕೆ ನಿರಂತರವಾಗಿ ಪೆಟ್ಟು ಬೀಳುತ್ತಿದ್ದರೆ ಅದಕ್ಕೆ ಸಾರ್ವತ್ರಿಕ ಮತ್ತು ಸಾರ್ವಜನಿಕ ಪ್ರತಿಭಟನೆ ಅಗತ್ಯವಾಗುತ್ತದೆ. ಅದನ್ನು ಖಂಡಿಸುವ ಅನುಪಮ ಖೇರ್, ಮುಂತಾದವರು ಕಹಿಘಟನೆಗಳು ನಡೆದಾಗ ಮಧ್ಯಪ್ರವೇಶ ಮಾಡಿದ್ದರೆ ಅದರಲ್ಲಿ ಸೊಗಸಿರುತ್ತಿತ್ತು. ಉದಾಹರಣೆಗೆ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಅನೈತಿಕ ಗೂಂಡಾಗಿರಿ ನಡೆಸಿದವರನ್ನು ಒಂದೊಂದು ಘಟನೆ ನಡೆದಾಗಲೂ ಮಾನ್ಯ ಡಾ॥ ಭೈರಪ್ಪನವರು ನಿಗ್ರಹಿಸಬಹುದಿತ್ತು. ಆದರೆ ಅಂತಹ ಸಂದರ್ಭಗಳಲ್ಲಿ ಶ್ರೀಯುತರು ತಮ್ಮ ಕೈಯ್ಯಲ್ಲಿರಬಹುದಾದ ಲಗಾಮನ್ನು ಎಳೆಯುವುದಿಲ್ಲ. ಬದಲಾಗಿ, ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಒಂದೇ ಪಂಥದವರು ತುಂಬಿಕೊಂಡಿದ್ದಾರೆಂಬ ಮಿಥ್ಯಾರೋಪ ಮಾಡುತ್ತಾರೆ. ಅದಕ್ಕೆ ಅವರು ಕೊಡುವ



ಒಂದು ಉದಾಹರಣೆ ದೆಹಲಿಯಲ್ಲಿರುವ ಜವಹರಲಾಲ್ ನೆಹರು ವಿಶ್ವವಿದ್ಯಾಲಯ. "ಅಲ್ಲಿ ಎಲ್ಲಾ ಎಡಪಂಥೀಯರೇ ತುಂಬಿಕೊಂಡುಬಿಟ್ಟಿದ್ದಾರೆ, ಬೇರೆಯವರಿಗೆ ಅವಕಾಶ ನಿರಾಕರಿಸಿದ್ದಾರೆ, ಅಧ್ಯಯನವೆಲ್ಲಾ ಏಕಮುಖಿಯಾಗಿದೆ" ಎಂಬುದು ಅವರ ಆರೋಪದ ಸಾರಾಂಶ. ಜೀವರಸಾಯನ ಶಾಸ್ತ್ರ, ಖಗೋಳ ಶಾಸ್ತ್ರ, ಜಾನಪದ ಕಲೆ, ಇಂಥವನ್ನು ಅಧ್ಯಯನ ಮಾಡುವಾಗ ಎಡ-ಬಲ ಎಂಬುದು ಅಪ್ರಾಸಂಗಿಕ. ಅದೇ ಸಾಹಿತ್ಯ, ಇತಿಹಾಸ, ಅರ್ಥಶಾಸ್ತ್ರ, ಮುಂತಾದ ಶಿಸ್ತುಗಳಲ್ಲಿ ದೃಷ್ಟಿಭಿನ್ನತೆ ಇರಲು ಸಾಧ್ಯ. ಆದರೆ ಅಲ್ಲಿಯೂ ಮೂಲಭೂತ ಮಾಹಿತಿಯನ್ನಾಧರಿಸಿಯೇ ವಿಶ್ಲೇಷಣೆಗಳಲ್ಲಿ ತೊಡಗಬೇಕಾದ್ದು ಅಧ್ಯಯನದ ಶಿಸ್ತು. ಭೈರಪ್ಪನವರು ಮಾನ್ಯಮಾಡುವ ಪಂಥದ ವಿದ್ವಾಂಸರಿಗೆ ಮೂಲತಃ ಅಧ್ಯಯನದ ಶಿಸ್ತಿನ ಗೊಡವೆಯೇ ಇಲ್ಲವೆಂಬುದು ನಿಜವಾದ ನ್ಯೂನತೆ. ಕಳೆದ ಜನವರಿಯಲ್ಲಿ ಅಖಿಲ ಭಾರತ ವಿಜ್ಞಾನ ಸಮ್ಮೇಳನವು ಮುಂಬೈ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆದದ್ದು ನೆನಪಿನಲ್ಲಿದೆಯಷ್ಟೆ? ಅಲ್ಲಿನ ಒಂದು ಗೋಷ್ಠಿಯಲ್ಲಿ ಮಂಡಿಸಲಾದ ಕೆಲವು ಪ್ರಬಂಧಗಳು ಇತಿಹಾಸ-ವಿಜ್ಞಾನ-ಖಗೋಳಶಾಸ್ತ್ರ ಎಲ್ಲವನ್ನೂ ಮೀರಿ ನಿಂತಂಥವು. ಋಗ್ವೇದದ ಕಾಲದಲ್ಲಿ ಅಂತರ-ಗ್ರಹ ಸಂಚಾರವಿದ್ದಿತು, ಅದಕ್ಕೆ ಬೇಕಾದ ಅದ್ಭುತ ಯಾನ-ಯಂತ್ರಗಳಿದ್ದವು, ತಂತ್ರಜ್ಞಾನವು ಅಷ್ಟು ಉನ್ನತಮಟ್ಟದ್ದಾಗಿದ್ದಿತು, ಎಂದೆಲ್ಲಾ ಹೇಳಲಾಯಿತು. ಪ್ರಧಾನಿಯವರ ಪಟಾಲಂ ಇದು ಎಂಬ ಕಾರಣಕ್ಕೆ ವಿಜ್ಞಾನಿಗಳು ಅವರ ಬಾಲಿಶ ಪ್ರಬಂಧಗಳನ್ನು ಮುಸಿಮುಸಿ ನಗುತ್ತಾ ಕೇಳಿಸಿಕೊಂಡರು. ಒಂದು ವಿಶ್ವವಿದ್ಯಾನಿಲಯದಲ್ಲಿ "ಎಲ್ಲ ಅಭಿಪ್ರಾಯಗಳಿಗೆ ಮತ್ತು ದೃಷ್ಟಿಕೋನಗಳಿಗೆ ಮುಕ್ತ ಅವಕಾಶ ಇರಬೇಕು" ಎಂಬ ಸೂತ್ರದಡಿ ಈ ಬಾಲಿಶ ಸಂಶೋಧನೆಗಳಿಗೆ ಪ್ರೋತ್ಸಾಹ ನೀಡಲಾಗುತ್ತದೆಯೆ? ಅದೇ ಮುಂಬೈ ವಿಶ್ವವಿದ್ಯಾನಿಲಯವು ಇದೇ ಆಗಸ್ಟ್‌ನಲ್ಲಿ ಮೂರು ದಿನಗಳ ವಿಚಾರಗೋಷ್ಠಿ ನಡೆಸಿ ಋಗ್ವೇದವು ಕನಿಷ್ಠವೆಂದರೆ ಕ್ರಿ. ಪೂ. ೮೦೦೦ಕ್ಕೆ ರಚನೆಗೊಂಡಿತೆಂಬ ನಿರ್ಣಯಕ್ಕೆ ಸಾಕ್ಷಿಯಾಯಿತು. ಬಹಳವೆಂದರೆ ಅದು ಕ್ರಿ. ಪೂ. ೧೬೦೦-೧೫೦೦ರ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಸೂಕ್ತ ಸಂಕಲನವೆಂಬುದು ಸಾಮಾನ್ಯ ಅಭಿಪ್ರಾಯ. ಆದರೆ ಮುಂಬೈ ಗೋಷ್ಠಿಯು ಅದನ್ನು ಹೆಚ್ಚುಕಡಿಮೆ ಹೊಸ ಶಿಲಾಯುಗದ ಕಾಲಕ್ಕೆ ಸೇರಿಸಿಬಿಟ್ಟಿತು. ಇದಕ್ಕೆ ಪುರಾವೆಯೇನು? ಭಾಷಾಶಾಸ್ತ್ರ, ಉತ್ಖನನ ಶಾಸ್ತ್ರ, ಶಾಸನಗಳು, ಮುಂತಾದವು ಇತಿಹಾಸಕ್ಕೆ ಆಕರಗಳು. ಮನಸ್ಸಿಗೆ ಬಂದಂತೆ ಹೇಳುವುದು ಇತಿಹಾಸವಾಗುವುದಿಲ್ಲ ಮತ್ತು ಅಂತಹ ಅಶಿಸ್ತಿಗೆ ವಿಶ್ವವಿದ್ಯಾನಿಲಯವು ಆಸರೆ ನೀಡುವಂತಿಲ್ಲ. ಹೀಗಿರುವಾಗ ಆರೆಸ್ಸೆಸ್ ಮುಂತಾದ ಸಂಘಟನೆಗಳ ಅವೈಚಾರಿಕ, ಅನೈತಿಹಾಸಿಕ, ಭ್ರಮೆಗಳಿಗೆ ಶಿಕ್ಷಣ ಕ್ಷೇತ್ರದಲ್ಲಿ ಎಂತಹ ಸ್ಥಾನ ನೀಡಬೇಕು? ಭೈರಪ್ಪನವರು ಹಲವು ವಿಶ್ವವಿದ್ಯಾನಿಲಯಗಳ ನೇರ ಪರಿಚಯ ಇರುವಂಥವರು. ಆದ್ದರಿಂದ ಅವರು ಭಾವೋದ್ರೇಕದ ತೀರ್ಮಾನಗಳಿಗೆ ಬರಬಾರದು.

ಬಿಹಾರದ ಚುನಾವಣೆಗೂ ಇದಕ್ಕೂ ಏನು ಸಂಬಂಧ? ವಾಸ್ತವವನ್ನು ಮುಚ್ಚಿಹಾಕಿ ಐತಿಹ್ಯಕ್ಕೆ ಗೌರವ ಸ್ಥಾನ ಕಲ್ಪಿಸುವುದು ಹೇಗೆ ಪಾಂಡಿತ್ಯವಲ್ಲವೋ ಹಾಗೆ ನೈಜ ಸಂದರ್ಭವನ್ನು ಗೌಣವಾಗಿಸಿ ಭ್ರಾಂತಿಲೋಕವನ್ನು ಜನರಿಗೆ ಆಪ್ಯಾಯಮಾನವಾಗುವಂತೆ ವಿಜೃಂಭಿಸಿ ರಂಜನೀಯವಾಗಿಸುವುದು ಕ್ಷಮಾರ್ಹ ರಾಜಕಾರಣವಲ್ಲ. "ಭಾರತದ ಪ್ರತಿಯೊಬ್ಬ ನಾಗರಿಕನಿಗೂ ಸಾವಿರಾರು ರೂಪಾಯಿಗಳನ್ನು ಕೊಡುತ್ತೇನೆ, ವಿದೇಶಿ ಬ್ಯಾಂಕುಗಳಲ್ಲಿ ನಮ್ಮ ದೇಶದವರು ಇಟ್ಟಿರುವ ಕಪ್ಪು ಹಣವನ್ನು ಹಿಂದಕ್ಕೆ ತರುವುದರಿಂದ ಅದು ಸಾಧ್ಯವಾಗುತ್ತದೆ" ಎಂಬಂತಹ ಮಾತುಗಳನ್ನು ಕಳೆದ ಲೋಕಸಭಾ ಚುನಾವಣೆಯ ಪ್ರಚಾರದ ಸಂದರ್ಭದಲ್ಲಿ ಮಾನ್ಯ ಮೋದಿ ಅವರು ಅದೆಷ್ಟು ಬಾರಿ ಹೇಳಿದರು! ಅದನ್ನು ಮಾಡಲಾಗಿದೆಯೆ? ಇಂತಹ ಹಸಿಸುಳ್ಳುಗಳನ್ನು ಮೂಟೆಗಟ್ಟಲೆ ಮತದಾರರ ಮುಂದೆ ಸುರಿಯುವುದು ಕ್ಷುಲ್ಲಕ ರಾಜಕೀಯ. ಮತದಾರರಿಗೆ ಅದು ಚೆನ್ನಾಗಿ ತಿಳಿಯುತ್ತದೆ. ಬಿಹಾರದ ಚುನಾವಣೆಯು ಅದಕ್ಕೆ ಪುರಾವೆ ಒದಗಿಸಿದೆ.

ಜನತೆಯ ಜೀವಂತ ಸನ್ನಿವೇಶವನ್ನು ವಿಶ್ಲೇಷಿಸಿ ಮೂರ್ತ ಸಮಸ್ಯೆಗಳಿಗೆ ಗಟ್ಟಿ ಪರಿಹಾರಗಳನ್ನು ನೀಡಲು ಅಗತ್ಯವಾದ ಆರ್ಥಿಕ ನೀತಿ, ಕೃಷಿ ನೀತಿ, ಇತ್ಯಾದಿಗಳನ್ನು ವಿಸ್ತರಿಸಿ ಹೇಳುವ ಬದಲಾಗಿ ಗೋಮಾಂಸ, ಡಿಎನ್‌ಎ, ಸೈತಾನ, ಜಂಗಲ್ ರಾಜ್, ಮುಂತಾದವನ್ನು ಪ್ರಚಾರ ಸಾಮಗ್ರಿಗಳನ್ನಾಗಿ ಬಳಸುವುದು ಹೇಯವಾದ್ದು. ಹಾಗೆಂದು ಬಿಹಾರದ ಮತದಾರರು ದೊಡ್ಡ ಸ್ವರದಲ್ಲಿ ಹೇಳಿದ್ದಾರೆ. "ಜಾತಿಗಳ ಒಗ್ಗಟ್ಟಿನಿಂದಾಗಿ ನೀತೀಶ್ ಗೆದ್ದರು" ಎಂದು ಚುನಾವಣಾ ಫಲಿತಾಂಶ ಪ್ರಕಟವಾದ ನಂತರ ಹೇಳಲಾಯಿತು. ಇದೂ ಅಸಂಗತವೇ, ಏಕೆಂದರೆ ಜಾತಿಗಳು ದಿಢೀರನೆ ಈಗ ಪ್ರತ್ಯಕ್ಷವಾಗಿಲ್ಲ. "ನೀನು ಗೋಮಾಂಸ ತಿನ್ನಬೇಕಿದ್ದರೆ ಪಾಕಿಸ್ತಾನಕ್ಕೆ ಹೋಗು" ಎಂಬ ಪಲ್ಲವಿಯನ್ನು ಚುನಾವಣೆಯ ಸಂದರ್ಭದಲ್ಲಿ ಭಾಜಪದ ಮುತ್ಸದ್ದಿಗಳು ಎಗ್ಗಿಲ್ಲದೆ ಹೇಳುತ್ತಾ ಹೋದರು. ಏನು ತಿನ್ನಬೇಕು, ಎಂತಹ ಉಡುಪು ಧರಿಸಬೇಕು, ಯಾರೊಂದಿಗೆ ಮಾತನಾಡಬೇಕು, ಯಾರೊಡನೆ ಊಟ ಮಾಡಬಾರದು, ಎಂದೆಲ್ಲಾ ಅನೀತಿಸೂತ್ರಗಳನ್ನು ಹೇರುವ ಮನಸ್ಸು ಭಾರತೀಯ ಮನಸ್ಸಲ್ಲವೆಂದು ಬಿಹಾರದ ಮತದಾರರು ಘೋಷಿಸಿದ್ದಾರೆ. ಆಶ್ಚರ್ಯವೆಂದರೆ "ಪಾಂಚಜನ್ಯ" ಎಂಬ ಆರೆಸ್ಸೆಸ್‌ನ ಪತ್ರಿಕೆಯನ್ನು ಓದುವ ಅಕ್ಷರಸ್ಥರು ಮತ್ತು ವಿದ್ಯಾವಂತರು ಅಂತಹ ಮನಸ್ಸುಗಳೇ ಭಾರತದ ಶ್ರೇಷ್ಠ ಪರಂಪರೆಯವು ಎಂಬ ಅಪಾಯಕಾರಿ ನಿಲುವನ್ನು ಸ್ವೀಕರಿಸುತ್ತಿದ್ದಾರೆ. ಮೌಢ್ಯ ಮತ್ತು ಐತಿಹ್ಯಗಳನ್ನು ಬಂಡವಾಳ ಮಾಡಿಕೊಳ್ಳುವುದು ಯೋಗ್ಯವಲ್ಲ, ಆರೋಗ್ಯಕರವಲ್ಲ. ಆದರೆ ತನ್ನ ತೆಕ್ಕೆಗೆ ಬಂದವರನ್ನು ಅಂತಹ ಮೌಢ್ಯದ ಕೂಪದಲ್ಲಿರಿಸುವುದು ಅದೇಕೋ ಆರೆಸ್ಸೆಸ್‌ಗೆ ರುಚಿಸುತ್ತದೆ. ಇವರಿಗೆ ರುಚಿಸಿದ್ದೆಲ್ಲಾ ಬಿಹಾರದ ಮತದಾರರಿಗೆ ರುಚಿಸಲೇಬೇಕೆ? "ಹೌದು" ಎನ್ನುತ್ತಾರೆ ಅಮಿತ್ ಷಾ, "ಸಾಧ್ಯವೇ ಇಲ್ಲ" ಎಂದರು ಬಿಹಾರದ ಮತದಾರರು.

ನೇರವಾಗಿ ಚುನಾವಣೆಗೆ ಸಂಬಂಧಿಸಿರದ ಕೆಲವು ಆರೆಸ್ಸೆಸ್ ಸಿದ್ಧಾಂತಗಳನ್ನು ನೋಡಿ ಅಂತಹ ಸಿದ್ಧಾಂತಗಳನ್ನೇಕೆ ಮಂಡಿಸಲಾಗುತ್ತಿದೆ ಎಂಬುದನ್ನು ಮಾನ್ಯ ಅನುಪಮ ಖೇರ್, ಡಾ॥ ಭೈರಪ್ಪ, ಮುಂತಾದವರು ಪರ್ಯಾಲೋಚಿಸಬೇಕು. ಆದರೆ ಅವರೆಲ್ಲಾ ಸ್ವತಃ ಭಾರತದ ಇತಿಹಾಸವನ್ನು ಭ್ರಾಮಕ ಇತಿಹಾಸದ ಮಟ್ಟಕ್ಕೆ ಇಳಿಸಿಬಿಟ್ಟಿದ್ದಾರೆ. "ಪಾಂಚಜನ್ಯ" ಪ್ರಚಾರಮಾಡುವ ಒಂದೆರಡು ಇತಿಹಾಸದ ತುಣುಕುಗಳನ್ನು ಗಮನಿಸಿ ಮತ್ತು ಅಂತಹ ಅವಿವೇಕದ ಇತಿಹಾಸವು ಆರೆಸ್ಸೆಸ್‌ಗೆ ಏಕೆ ಬೇಕಾಗಿದೆ ಎಂಬುದನ್ನು ಖುದ್ದಾಗಿ ವಿಶ್ಲೇಷಣೆ ಮಾಡಿಕೊಳ್ಳಿ. ಬಿಹಾರದ ಮತದಾರರ ಶ್ರೇಷ್ಠ ಕೊಡುಗೆಯ ಮೌಲ್ಯ ಆಗ ತಿಳಿಯುತ್ತದೆ. "ಪಾಂಚಜನ್ಯ"ದ ಇತಿಹಾಸದ ಮಾದರಿ ಹೀಗಿದೆ: (ಅ) ಭಾರತದಲ್ಲಿ ಅಸ್ಪೃಶ್ಯತೆ ಇರಲಿಲ್ಲ, ಮುಸಲ್ಮಾನರು ಭಾರತದ ಮೇಲೆ ಆಕ್ರಮಣ ನಡೆಸಿದ ತರುವಾಯದಲ್ಲಿ ಆ ದುಷ್ಟ



ಪದ್ಧತಿಯು ಹುಟ್ಟಿಕೊಂಡಿತು; (ಆ) ನಮ್ಮ ದೇಶದ ಗುಡ್ಡಗಾಡು ಜನರು ಗುಡ್ಡಗಾಡಿನವರಲ್ಲ; ಅವರೆಲ್ಲಾ ಹಿಂದೆ ಬ್ರಾಹ್ಮಣರಾಗಿದ್ದವರು. ಮುಸಲ್ಮಾನ ಆಕ್ರಮಣಕಾರರ ಉಪಟಳ ಸಹಿಸಲಾಗದೆ ಅಂದಿನ ಬ್ರಾಹ್ಮಣರು ಗುಡ್ಡಗಾಡುಗಳಿಗೆ ಓಡಿಹೋದರು.

ಅಸಹಿಷ್ಣುತೆಯ ಬಗೆಗಿನ ಚರ್ಚೆಗೆ ಇಂತಹ ಆಧಾರ ರಹಿತ "ಚರಿತ್ರೆ" ಬೇರೊಂದು ಆಯಾಮವನ್ನೊದಗಿಸುತ್ತದೆ. 'ಪಾಂಚಜನ್ಯ'ದ ಬೇಜವಾಬ್ದಾರಿ ಹೇಳಿಕೆಗಳನ್ನು ಸಂಶೋಧನೆಯ ಫಲವೆಂದು ಯಾವ ಕಡುಮೂರ್ಖನೂ ಭಾವಿಸಲಾರ. "ಪುರಾವೆಯಿಲ್ಲದೆ ಇತಿಹಾಸವಿಲ್ಲ" ಎಂಬುದು ನಿಜವಾದರೆ 'ಪಾಂಚಜನ್ಯ'ದ ಹೇಳಿಕೆಗಳು ಕಸದ ಬುಟ್ಟಿಯ ತುಣುಕುಗಳು, ಅಷ್ಟೆ. ನಮ್ಮ ದೇಶದ ಎಲ್ಲ ಪಿಡುಗುಗಳಿಗೂ ಆಂತರಿಕ ವ್ಯವಸ್ಥೆಯ ಜಡ್ಡುತನವನ್ನು ಗೌಣವಾಗಿಸಿ, ಮುಸಲ್ಮಾನ ಆಕ್ರಮಣಕಾರರನ್ನು ಜವಾಬ್ದಾರರನ್ನಾಗಿಸುವುದು ಇತಿಹಾಸವೆನಿಸಿ ಕೊಳ್ಳುವುದಿಲ್ಲ. ಗುಡ್ಡಗಾಡಿನ ಜನರನ್ನು ಬ್ರಾಹ್ಮಣರನ್ನಾಗಿ 'ಮತಾಂತರ' ಮಾಡಿಸಬೇಕೇನು ? "ಆವರಣ" ಎಂಬ ಕುತ್ಸಿತ ಗ್ರಂಥದಲ್ಲಿ ಡಾ॥ ಭೈರಪ್ಪನವರು ಅಲ್ಲಾವುದ್ದೀನ್ ಖಿಲ್ಜಿಯ ಪಾತಕಗಳನ್ನು ಕುರಿತು ಮತ್ತು ಅವನ ನೀಚತನದ ಬಗೆಗೆ ಬರೆದಿದ್ದಾರೆ. ಬೆಟ್ಟುಮಾಡಿ ತೋರಿಸಲು ಖಿಲ್ಜಿ ಸಿಕ್ಕುತ್ತಾನೆ, ಆದರೆ ಭಾರತೀಯ ಸಮಾಜದ ಆಂತರಿಕ ದುರವಸ್ಥೆಯನ್ನು ಚಿತ್ರಿಸಲು ಭೈರಪ್ಪ ಸಿದ್ಧರಿಲ್ಲ. ಸೋಮನಾಥ ದೇವಸ್ಥಾನಕ್ಕೆ ಮೊದಲ ಲಗ್ಗೆಯನ್ನು ಸರಿಯಾಗಿ ಎದುರಿಸದಿರಲು ಕಾರಣ ಹುಡುಕಬಹುದು. ಆದರೆ ನಂತರದಲ್ಲಿ ಸಿದ್ಧತೆ ಮಾಡಿಕೊಂಡು ಆಕ್ರಮಣಕಾರರನ್ನು ಹಿಮ್ಮೆಟ್ಟಿಸಲು ಏಕಾಗಲಿಲ್ಲ ? "ಈ ದೇವಸ್ಥಾನ ನನ್ನದು" ಎಂಬ ಭಾವನೆ ಬಹಳ ಜನರಲ್ಲಿರಲಿಲ್ಲ, ಏಕೆಂದರೆ ಅವರಿಗೆ ಅಲ್ಲಿ ಪ್ರವೇಶವೇ ಇರಲಿಲ್ಲ. ಲೂಟಿಕೋರರ ಕೆಲಸ ಸುಲಭವಾಯಿತೇನೊ ! ಇತಿಹಾಸಕಾರರು ಈ ಮಗ್ಗುಲನ್ನೂ ನೋಡಬೇಕು. ಬಿಹಾರದಲ್ಲಿ ಭಾಜಪವು ದೇಶವನ್ನು ಏಕಮುಖಿ ಯನ್ನಾಗಿಸಲು ಚುನಾವಣೆಯ ತಂತ್ರಕ್ಕೆ ತಿರುವು ನೀಡಿತು. ಜನ ಅದನ್ನು ತಿರಸ್ಕರಿಸಲು ಹೇಸಲಿಲ್ಲ. ಸಂಸ್ಕೃತಿಯ ಬಹುತ್ವವನ್ನು ಗುರುತಿಸಲು ಅವರು ವಿದ್ವಾಂಸರಾಗಿರ ಬೇಕಾಗಲಿಲ್ಲ. ಎಡವಿದವರು ಕೆಟ್ಟ ವಿದ್ವತ್ತನ್ನು ಪ್ರದರ್ಶಿಸ ಹೊರಟಿದ್ದರು.




ಮಾನ್ಯ ಭೈರಪ್ಪನವರು ಗುಜರಾತಿನಲ್ಲಿ ನೌಕರಿ ಮಾಡುತ್ತಿದ್ದವರು. ಅವರಿಗೆ ಗುಜರಾತಿ ಸಾಹಿತ್ಯದ ಪರಿಚಯ ಇರಬಹುದು. ಗುಜರಾತಿ ಭಾಷೆಯಲ್ಲಿ ೧೮೬೬ರಷ್ಟು ಹಿಂದೆ ನಂದಶಂಕರ ಮೆಹ್ತ ಎಂಬುವವರು "ಕರಣ್ ಘೇಲೋ" ಎಂಬ ಚಾರಿತ್ರಿಕ ಕಾದಂಬರಿ ಪ್ರಕಟಿಸಿದ್ದರು. ಸೂರತ್‌ನ ಆಂಗ್ಲಮಾಧ್ಯಮ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಮೊದಲ ಭಾರತೀಯ ಇವರು. ನಂತರ ಭುಜ್‌ನ ದಿವಾನರಾಗಿದ್ದರಂತೆ. ಕರಣ್ ವಘೇಲ ಗುಜರಾತಿನ ಕಡೆಯ ರಜಪೂತ ದೊರೆ. ಪ್ರಸ್ತುತ ಕಾದಂಬರಿಯನ್ನು ಈ ವರ್ಷ ಪೆಂಗ್ವಿನ್ ಪ್ರಕಾಶನವು ಇಂಗ್ಲಿಷ್‌ನಲ್ಲಿ ಹೊರತಂದಿದೆ. ಖಳನಾಯಕ ಅಲ್ಲಾವುದ್ದೀನ್ ಖಿಲ್ಜಿಯೋ ಅಥವಾ ಕರಣ್ ವಘೇಲನಂಥವರೋ ಎಂಬುದನ್ನು ಭೈರಪ್ಪನವರು ಮತ್ತು ಆರೆಸ್ಸೆಸ್ ಪರಿವಾರದವರು ತೀರ್ಮಾನಿಸಲು ಅಡ್ಡಿಯಿಲ್ಲ. ಕರಣ್ ವಘೇಲ ಸಾಕಷ್ಟು ಪ್ರಬಲನಾಗಿದ್ದ ದೊರೆ. ಅವನ ಮಂತ್ರಿ ಮಾಧವ. ಮಂತ್ರಿಯ ಪತ್ನಿಯನ್ನು ಕರಣ್ ಅಪಹರಿಸಿದ. ಅವಳ ಹೆಸರು ರೂಪಸುಂದರಿ. ಅಪಹರಣವನ್ನು ತಡೆಯ ಹೋದ ಮಾಧವನ ಸೋದರ ಕೊಲ್ಲಲ್ಪಟ್ಟ. ಮಾಧವನು ಅನ್ಹಿಲ್ ಪಟಾಣ್ ನಗರದಿಂದ ಹೇಗೋ ಪಲಾಯನ ಮಾಡಿದ. ಅದು ರಾಜ್ಯದ ರಾಜಧಾನಿ. ತುರ್ಕಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯನ್ನು ದೆಹಲಿಯಲ್ಲಿ ಭೇಟಿಯಾಗಿ ಸಂಪದ್ಭರಿತ ಗುಜರಾತಿನ ಆಕ್ರಮಣ ಮಾಡಬೇಕೆಂದು ಸೂಚಿಸಿದ. ಹೆಂಡತಿಯನ್ನು ಕಳೆದುಕೊಂಡಿದ್ದ ಮಾಧವ ಗುಜರಾತಿನ ಜೊತೆ ಕರಣ್‌ನ ಪತ್ನಿ ಕೌಲರಾಣಿಯನ್ನೂ ಖಿಲ್ಜಿಗೆ ಒಪ್ಪಿಸಲು ಸಿದ್ಧನಿದ್ದ. ೧೨೯೭–೯೮ರಲ್ಲಿ ಪಟಾಣ್‌ನ ಕೋಟೆಯನ್ನು ಖಿಲ್ಜಿ ಧ್ವಂಸಮಾಡಿದ, ರಾಣಿಯನ್ನು ಪಡೆದ, ರಾಜ್ಯವನ್ನೂ ತನ್ನದಾಗಿಸಿಕೊಂಡ. ಕೌಲರಾಣಿಯ ಮಗಳು ದೇವಲ್‌ದೇವಿ ಸಹ ನಂತರ ಸುಲ್ತಾನನಿಗೆ ಸೇರಿಹೋದಳು. ರಜಪೂತರ ಆಳ್ವಿಕೆಯು ಅಲ್ಲಿಗೆ ಕೊನೆಯಾಯಿತು.

ಕರಣ್ ವಘೇಲನಂತಹ ಪಾತಕಿ ಇಲ್ಲದಿದ್ದರೆ ಖಿಲ್ಜಿ ಏನು ತಾನೆ ಮಾಡಲು ಸಾಧ್ಯವಿತ್ತು? ಕರಣ್ ವಘೇಲನ ನೀಚತನವನ್ನು ಸೂಚಿಸಲು ಕಾದಂಬರಿಕಾರರು ಅವನ ಹೆಸರನ್ನು ತುಚ್ಛೀಕರಿಸಿ "ಘೇಲೋ" ಮಾಡಿದ್ದಾರೆ. ಇಂತಹ ಆಳುವ ಮಂದಿ ನಮ್ಮ ದೇಶವನ್ನು ಪರಾಧೀನಗೊಳಿಸಿದ್ದಾರೆ, ದೇಶಕ್ಕೆ ಶಾಶ್ವತ ಕಳಂಕ ತಂದಿದ್ದಾರೆ. ಖಿಲ್ಜಿಯು ಪಾತಕಿ, ನಿಜ; ಆದರೆ ಪಾತಕಕ್ಕೆ ಸ್ವಾಗತ ನೀಡಿ ಸಹಾಯ ಮಾಡಿದವರು ಮಾಧವನಂಥವರು. ಮಂತ್ರಿಯ ಪತ್ನಿಯನ್ನೇ ಸೆಳೆದೊಯ್ದ ರಾಜ ವಘೇಲ. "ನಾವಿಷ್ಣುಃ ಪೃಥಿವೀಪತಿಃ" ಎನ್ನುವ ಮಾತಿದೆ. ಅಂದರೆ, ವಿಷ್ಣುವಿನ ಅಂಶವಿಲ್ಲದವನು ರಾಜನಾಗುವುದಿಲ್ಲ, ಎಂದು. ವಿಷ್ಣುವಿನ ಅಂಶವಿದ್ದ ಕರಣ್ ಪರಪತ್ನೀಲೋಲನಾದ ಮತ್ತು ಕರಣ್‌ನ ಮಂತ್ರಿ ಖಿಲ್ಜಿಯ ಬಳಿಗೋಡಿದ. ಖಿಲ್ಜಿಯ ಬರ್ಬರತೆಯನ್ನು ಖಂಡಿಸಿದರೆ ಇತಿಹಾಸ ಪೂರ್ಣವಾಗುವುದಿಲ್ಲ; ಇತಿಹಾಸದಲ್ಲಿ ವಘೇಲ ಮತ್ತು ಮಾಧವರ ಘೋರ ಕ್ರಿಯೆಗಳೂ ಪ್ರಧಾನವಾದುವೇ. ಹಲವು ವಿಧಗಳಲ್ಲಿ ದೇಶದ ವಿಭಜನೆಯ ಕೆಲಸವನ್ನು ಬಿಹಾರದ ಚುನಾವಣಾ ಪ್ರಚಾರದ ಸಂದರ್ಭದಲ್ಲಿ ಸ್ವತಃ ನಮ್ಮ ಪ್ರಧಾನಿ ಮಾಡಿದ್ದಾರೆ, ಆದರೆ ಗೌರವಾನ್ವಿತ ಮತದಾರರು ದೇಶದ ತೇಜಸ್ಸನ್ನು ರಕ್ಷಿಸಿದ್ದಾರೆ. ಇನ್ನುಮುಂದೆ "ಅವನು ಪಾಕಿಸ್ತಾನಕ್ಕೆ ತೊಲಗಲಿ" ಎಂಬ ಮಾತನ್ನು ನಿಲ್ಲಿಸೋಣ. ಭಾರತದ ಯಾವ ಪ್ರಜೆಯೂ ಅಲ್ಲಿಗೆ ಹೋಗಬೇಕಾಗಿಲ್ಲ, ಏಕೆಂದರೆ ಭಾರತವು ಎಲ್ಲ ಪ್ರಜೆಗಳದು. ಸಾವಿರಾರು ಭಾರತೀಯರನ್ನು ನಾವು ಪಾಕಿಸ್ತಾನಕ್ಕೆ ಅಟ್ಟಲು ಸಾಧ್ಯವಿಲ್ಲ. ಹಾಗೇನಾದರೂ ಅಟ್ಟಿದರೆ ನಾಳೆ ಅಂತಹ ಅಟ್ಟಲ್ಪಟ್ಟವರಿಗೆ ಆಶ್ರಯ ನೀಡಲು ಪಾಕಿಸ್ತಾನವು ಭಾರತದ ಭೂಭಾಗವನ್ನು ಕೇಳಿದರೆ ಏನು ಹೇಳೋಣ ? ನಾವು ದೇಶದ ಇನ್ನೊಂದು ವಿಭಜನೆಯತ್ತ ಹೆಜ್ಜೆ ಹಾಕಕೂಡದು. ನಮ್ಮನಮ್ಮಲ್ಲಿ ತಕರಾರುಗಳಿದ್ದರೆ ನಮ್ಮಲ್ಲೇ ಪರಿಹರಿಸಿಕೊಳ್ಳೋಣ, ದೇಶವನ್ನು ಸುಭದ್ರವಾಗಿಡೋಣ, ಬಹುಸಂಸ್ಕೃತಿಗಳ ಸೆಲೆಯಾದ ಭಾರತವನ್ನು ತನ್ನ ಪರಂಪರೆಯಿಂದ ದೂರಮಾಡದಿರೋಣ. ಇದನ್ನು ಬಿಹಾರದ ಮತದಾರರು ನಮಗೆಲ್ಲಾ ಕೂಗಿಹೇಳಿದ್ದಾರೆ, ನಾವು ಕಿವಿ ಮುಚ್ಚಿಕೊಳ್ಳುವುದು ಬೇಡ.

ಕೊನೆಯ ಇನ್ನೊಂದು ಮಾತು : ನಮ್ಮ ಐಕ್ಯತೆಯು ವಿದ್ವತ್ಪ್ರಪಂಚದಲ್ಲಿ ಏಕಮುಖೀ ಅಭಿಪ್ರಾಯದ ಹೇರಿಕೆಯಿಂದ ಸಿದ್ಧಿಸುವುದಿಲ್ಲ. ಬೆಂಗಳೂರಿನ ಆಕಾಶವಾಣಿಯು ಇತ್ತೀಚೆಗೆ ವಿ. ಕೃ. ಗೋಕಾಕರ "ಭಾರತ ಸಿಂಧುರಶ್ಮಿ"ಯನ್ನು ಸರಣಿರೂಪದಲ್ಲಿ ಪ್ರಸ್ತುತಪಡಿಸಿತು. ಕಡೆಯಲ್ಲಿ ಗೋಕಾಕರ ಕಲ್ಪನೆಯು ಹಳಸಿದ್ದೆಂದು ಹೇಳಲಾಯಿತು, ಏಕೆಂದರೆ ಸಿಂಧುನದಿಯ ಸಂಸ್ಕೃತಿ ಮತ್ತು ಋಗ್ವೇದದ ಸಂಸ್ಕೃತಿ ಬೇರೆಬೇರೆ ಜನಸಮುದಾಯಗಳ ಕೊಡುಗೆಯೆಂದು ಅವರು ಪ್ರತಿಪಾದಿಸಿದ್ದಾರೆ. ಪ್ರಸಕ್ತ ಆರೆಸ್ಸೆಸ್ ಇತಿಹಾಸದ ಪ್ರಕಾರ ಇವೆರಡೂ ಒಂದೇ ಬಣದವರ ಕೊಡುಗೆ. ಹಾಗೆಂದು ಈಗಾಗಲೇ ತೀರ್ಮಾನವಾಗಿದೆಯೆಂದು ಆಕಾಶವಾಣಿ ಘೋಷಿಸಿತು. ಆ ವಾಣಿಗೆ ಪ್ರೇರಣೆ ಇಂದಿನ ಮೋದಿ ಪ್ರಭುತ್ವ. ಇತಿಹಾಸವನ್ನು ಸ್ವೇಚ್ಛೆಯಿಂದ ಬದಲಿಸಿ ಬರೆಯುವ ಪ್ರವೀಣರಿದ್ದಾರೆ, ಆದರೆ ಅದು ವಂಚನೆ ಮತ್ತು ಅಪರಾಧ. ಚರ್ಚೆಯನ್ನು ತುಳಿದುಹಾಕಿ ಸರ್ವಾಧಿಕಾರಿ ಧೋರಣೆಯ ಇತಿಹಾಸವನ್ನು ಬರೆದರೆ ಅದು ಹೀನ ಇತಿಹಾಸವಾಗುವ ಸಾಧ್ಯತೆಯನ್ನು ತಳ್ಳಿಹಾಕಲಾಗದು.

ಬಿಹಾರದ ಮತದಾರರು ಹೇಳಿದ್ದಾರೆ, "ಸ್ವಾಮಿ, ಸಿಂಧು ನಾಗರಿಕತೆ ಮತ್ತು ಋಗ್ವೇದ ಸಂಸ್ಕೃತಿ, ಎರಡನ್ನೂ ವಿರಾಮವಾಗಿ ನಿರಂತರವಾಗಿ ಚರ್ಚಿಸುತ್ತಿರಿ. ಎರಡನ್ನೂ ಬೇರೆಯಾಗಿ ಬೇಕಾದರೆ ಓದಿಕೊಳ್ಳಿ, ಇಲ್ಲ ಎರಡೂ ಒಂದೇ ಎಂದು ಭ್ರಮಿಸಿ. ಆದರೆ ತೊಗರಿಬೇಳೆಯ ಬೆಲೆಯನ್ನು ಕಿಲೋಗೆ ೨೦೦ ರೂಪಾಯಿಯಿಂದ ಕಡೇಪಕ್ಷ ೬೦ ರೂಪಾಯಿಗಾದರೂ ಇಳಿಸಿ. ನಿಮ್ಮ ಆಳ್ವಿಕೆಯ ಜವಾಬ್ದಾರಿ ಅದು."

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫






**ನಮ್ಮ ಮಕ್ಕಳೇ ಚರಿತ್ರೆ ಬರೆದರೆ...** (ಪ್ರಬಂಧಗಳು)

*ಕೆ. ಸತ್ಯನಾರಾಯಣ*

**ಪುಟ : ೧೨೮ ಬೆಲೆ : ರೂ. ೭೫**

**ಅಭಿನವ ಪ್ರಕಾಶನ,** ಬೆಂಗಳೂರು

*ಕಥೆಗಾರರಾಗಿ, ಲೇಖಕರಾಗಿ ಗುರುತಿಸಿಕೊಂಡಿರುವ ಕೆ. ಸತ್ಯನಾರಾಯಣ ಅವರು ಓದುಗನನ್ನು ಸಮ್ಮೋಹನಕ್ಕೀಡುಮಾಡುವಂಥ ಬರವಣಿಗೆ ಶೈಲಿಯ ಅಷ್ಟೇ ಆರ್ದ್ರತೆಯನ್ನೂ, ಸಹಜತೆಯನ್ನೂ ಹೊಂದಿರುತ್ತದೆ. ಸದ್ಯ, 'ನಮ್ಮ ಮಕ್ಕಳೇ ಚರಿತ್ರೆ ಬರೆದರೆ...' ಸಂಕಲನದಲ್ಲಿರುವ ಪ್ರಬಂಧಗಳು ಲೇಖಕರ ಲೋಕಾನುಭವಗಳನ್ನು ಸಾಂದ್ರವಾಗಿ ಒಳಗೊಂಡಿರುವುದರಿಂದಲೂ ತೀರ ಸಹಜವಾಗಿಯೇ ಓದುಗನಿಗೆ ತಟ್ಟುವುದರ ಮೂಲಕ ಕ್ಷಣಕಾಲ ನಮ್ಮನ್ನು ನಾವೇ ಮರೆಯುವಂತೆ ಮಾಡುತ್ತವೆ. ಹಾಗೆಯೇ ಒಂದು ಕಾಲದ, ಒಂದು ಪ್ರದೇಶದ ಆವರಣದೊಳಗಿನ ಮನುಷ್ಯನ ವರ್ತನೆ, ಪರಿಸರದ ಸಂಸ್ಕೃತಿ, ಸಾಮಾಜಿಕ ಅನುಭವ – ಇವೆಲ್ಲವು ಲೇಖಕರ ಬಾಲ್ಯದಲ್ಲಿ ಅತೀವ ಕುತೂಹಲ ಕೆರಳಿಸಿದ ರೋಚಕ ಸಂಗತಿಗಳ ಮೂಲಕ ಅನಾವರಣ ಮಾಡುತ್ತವೆ. ಅಲ್ಲದೆ, ಆಧುನಿಕ ಜಗತ್ತಿನಲ್ಲಿ ಕಳೆದುಹೋಗುತ್ತಿರುವ ಸಂಬಂಧಗಳು, ಜೀವನ ಪ್ರೀತಿ ಇಲ್ಲದ ಧಾವಂತದ ಬದುಕು ಮತ್ತು ವ್ಯಾಪಾರೀಕರಣಗೊಂಡ ಶಿಕ್ಷಣ ಪದ್ಧತಿ ಹೊಂದಿರಬಹುದಾದ ಹಲವು ಆಯಾಮಗಳು ತಂದೊಡ್ಡಿದ ಅಪಾಯಗಳು – ಈ ಎಲ್ಲ ಕ್ರಿಯೆಗಳನ್ನು ಹಲವು ರೂಪಕಗಳೊಂದಿಗೆ ಸಮೀಕರಿಸಿ ಹೇಳುತ್ತವೆ. ಒಂದು ರೀತಿಯಲ್ಲಿ ಈ ಸಂಕಲನದ ಪ್ರಬಂಧಗಳು ಲೇಖಕರ ಅಗಾಧವಾದ ಓದು ಮತ್ತು ಗಹನವಾದ ಆಲೋಚನಾ ಕ್ರಮಕ್ಕೆ ಕನ್ನಡಿ ಹಿಡಿಯುತ್ತವೆ.*

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ

**ಕ್ರಾಂತಿಕಾರಿ ಜನಾಂದೋಲನ** *ರಚನೆ ಹಾಗೂ ಪರಿಕಲ್ಪನೆ : ಡಾ॥ ಕೆ. ಎಸ್. ಶರ್ಮಾ*

**ಪುಟ : xxiv + ೧೭೬ = ೨೦೦** **ಬೆಲೆ : ರೂ. ೧೨೫**

**ಪುರೋಗಾಮಿ ಸಾಹಿತ್ಯ ಪ್ರಕಾಶನ,** ನಂ. ೪, ಪತ್ರಕರ್ತರ ನಗರ, ನೃಪತುಂಗ ಬೆಟ್ಟ (ಪಶ್ಚಿಮ), ಹುಬ್ಬಳ್ಳಿ – ೫೮೦ ೦೩೨

*ಕರ್ನಾಟಕದ ಪ್ರಮುಖ ಕಾರ್ಮಿಕರ ಹೋರಾಟಗಾರರಲ್ಲಿ ಡಾ॥ ಕೆ. ಎಸ್. ಶರ್ಮಾ ಅವರೂ ಒಬ್ಬರು. ಅವರು ತಮ್ಮ ಹೋರಾಟಗಳ ಜೊತೆಗೇ ಸೈದ್ಧಾಂತಿಕವಾಗಿಯೂ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಪ್ರಸ್ತುತ 'ಕ್ರಾಂತಿಕಾರಿ ಜನಾಂದೋಲನ' ಎನ್ನುವ ಕೃತಿಯಲ್ಲಿ ಸಮಕಾಲೀನ ಸಂದರ್ಭದ ಹಲವಾರು ವಿಷಯಗಳ ಕುರಿತು ಚರ್ಚಿಸಿದ್ದಾರೆ. ಒಟ್ಟು ೧೧ ಅಧ್ಯಾಯಗಳಲ್ಲಿ ಸ್ವಾತಂತ್ರ್ಯದ ಕುರಿತ ವಿಶ್ಲೇಷಣೆಯಿಂದ ಇಂದಿನ ಜಾಗತೀಕರಣದವರೆಗಿನ ನಮ್ಮ ಸಮಾಜದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಬೆಳವಣಿಗೆಗಳ ಕುರಿತ ಲೇಖನಗಳಿವೆ. '೨೦೧೪ರ ಲೋಕಸಭಾ ಚುನಾವಣೆ ಎಷ್ಟು ಪ್ರಜಾಸತ್ತಾತ್ಮಕ' ಎಂಬ ಲೇಖನ ನಮ್ಮ ಪ್ರಜಾಸತ್ತೆ ಮತ್ತು ಚುನಾವಣಾ ವ್ಯವಸ್ಥೆಯ ವೈಫಲ್ಯದ ಮೇಲೆ ಬೆಳಕು ಚೆಲ್ಲುತ್ತದೆ. ಇಂದು ಬೇಕಾಗಿರುವುದು 'ಭೂಸುಧಾರಣೆಯಲ್ಲ ಭೂ ಮಾಲಿಕತ್ವದ ಸುಧಾರಣೆ' ಎಂದು ಹೇಳುವ ಡಾ॥ ಕೆ. ಎಸ್. ಶರ್ಮಾ ಅವರು ಇಂದು ನಮ್ಮ ಸಮಾಜ ಎದುರಿಸುತ್ತಿರುವ ಹಲವಾರು ಸಮಸ್ಯೆಗಳನ್ನು ವಿವರಿಸುತ್ತಲೇ ಅವುಗಳಿಗೆ ಪರಿಹಾರವನ್ನೂ ಸೂಚಿಸುತ್ತಾರೆ. ಮಾರ್ಕ್ಸ್‌ವಾದಿ ದೃಷ್ಟಿಕೋನದ ಶರ್ಮಾ ಅವರ ಈ ಕೃತಿ ಹೋರಾಟಗಾರರಿಗೆ, ಬರಹಗಾರರಿಗೆ ಉಪಯುಕ್ತ ಮಾಹಿತಿ, ದೃಷ್ಟಿಕೋನ ಒದಗಿಸುತ್ತದೆ.*



**ಕೃಷಿ ಕಾರಣ** (ಕೃಷಿ ಲೇಖನಗಳ ಸಂಗ್ರಹ) *ಚನ್ನಪ್ಪ ಅಂಗಡಿ*

**ಪುಟ : x + ೧೧೮** **ಬೆಲೆ : ರೂ. ೭೫**

**ಕನ್ನಡ ಸಾಹಿತ್ಯ ಪರಿಷತ್ತು,** ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು – ೫೬೦ ೦೧೮

*ರೈತರ ಆತ್ಮಹತ್ಯೆ, ಕೃಷಿ ಸಮಸ್ಯೆಗಳು, ವ್ಯಾಪಕವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಕೃಷಿ ಮತ್ತು ಕೃಷಿಕನ ಕುರಿತು ಹಲವಾರು ಆಯಾಮಗಳಿಂದ ಅಧ್ಯಯನ ನಡೆಯಬೇಕಾಗಿದೆ. ಅಂಥ ಅಧ್ಯಯನಕ್ಕೆ ಪೂರಕವಾದ ಆಕರ ಸಾಮಗ್ರಿಯನ್ನು ಶ್ರೀ ಚನ್ನಪ್ಪ ಅಂಗಡಿಯವರ 'ಕೃಷಿ ಕಾರಣ' ಕೃತಿ ಒದಗಿಸುತ್ತದೆ. ವಿವಿಧ ಸಂದರ್ಭಗಳಲ್ಲಿ ವಿವಿಧ ಉದ್ದೇಶಕ್ಕಾಗಿ ಕೃಷಿಯನ್ನೇ ಕೇಂದ್ರವಾಗಿಟ್ಟುಕೊಂಡು ಬರೆದ ೨೫ ಲೇಖನಗಳು ಈ ಕೃತಿಯಲ್ಲಿವೆ. ವಿವಿಧ ಕೃಷಿ ಪದ್ಧತಿಗಳು, ಮಣ್ಣು, ನೀರು, ಗೊಬ್ಬರ, ಕೀಟನಾಶಕ, ಮಾರುಕಟ್ಟೆ. ಹೀಗೆ ಕೃಷಿಗೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಆಯಾ ಕ್ಷೇತ್ರಗಳಲ್ಲಿ ನಮ್ಮ ರೈತರು ಅನುಭವಿಸುತ್ತಿರುವ ತೊಂದರೆಗಳನ್ನು ಶ್ರೀ ಚನ್ನಪ್ಪ ಅಂಗಡಿಯವರು ಸಾಮಾನ್ಯರಿಗೂ ಅರ್ಥವಾಗುವ ಹಾಗೆ ಬರೆದಿದ್ದಾರೆ. ಕೃಷಿ ಪದವೀಧರರಾಗಿರುವ ಅವರು ಹಸಿರುಕ್ರಾಂತಿಯಿಂದ ಕಂಪನಿ (ಕಾರ್ಪೊರೇಟ್) ಕೃಷಿಯವರೆಗಿನ ವಿವಿಧ ಬೆಳವಣಿಗೆಗಳ ಕುರಿತು ವಿವರವಾದ ಮಾಹಿತಿಗಳನ್ನು ಈ ಕೃತಿಯಲ್ಲಿ ಕೊಟ್ಟಿದ್ದಾರೆ. ಕೃಷಿ ಜಾನಪದದಿಂದ ಯಾಂತ್ರೀಕರಣಗೊಂಡ ಕೃಷಿವರೆಗಿನ ಬೆಳವಣಿಗೆಯನ್ನು ವಿವರಿಸಿರುವ ಲೇಖಕರು ಕೃಷಿ ಬಿಕ್ಕಟ್ಟಿನ ನಿವಾರಣೆಗಳಿಗೆ ಹಲವಾರು ಮಾರ್ಗಗಳನ್ನು ಸೂಚಿಸುತ್ತಾರೆ. ಪ್ರಸ್ತುತ ಸಂದರ್ಭದ ಓದಿಗೆ ಯೋಗ್ಯ ಕೃತಿ.*

– **ಶ್ರೀಸುಮಿತ್ರಾಸುತ,** ಅಗಸಬಾಳ

**ಹೊಕ್ಕುಳ ಋತುಗಾನ** (ಕವನ ಸಂಕಲನ)

*ಎಸ್. ಜಿ. ಸಿದ್ಧರಾಮಯ್ಯ*

**ಪುಟ : ೧೨೮** **ಬೆಲೆ : ರೂ. ೧೦೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ




*'ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರ ಕವನಗಳು, ಮುತ್ತಿನ ರಾಶಿಯಲ್ಲಿ ಕೈಯಿಟ್ಟ ಅನುಭವ ಕೊಡುತ್ತವೆ' ಎನ್ನುತ್ತಾರೆ, ಎಸ್. ಎಫ್. ಯೋಗಪ್ಪನವರ್. ಎಸ್. ಜಿ. ಅವರ ಕವನಗಳು ಕುಟುಂಬ, ಸಮಾಜ, ನೆಲಮೂಲ, ಭೂಮಿ–ಆಕಾಶ, ಗಿಡಮರ, ಪಶುಪಕ್ಷಿ, ಸಕಲ ಚರಾಚರ; ಬುದ್ಧ, ಬಸವ, ಮಾರ್ಕ್ಸ್ ಹೀಗೆ ಎಲ್ಲವನ್ನು ಆವರಿಸಿಕೊಳ್ಳುತ್ತವೆ. ಈ ಭೂಮಿಯ ಸಕಲ ಸಸ್ಯ ಜೀವಸಂಕುಲ ಎಲ್ಲವನ್ನು ರೂಪಕಗಳಾಗಿ ಪರಿವರ್ತಿಸುವ ಅವರ ನೋಟಗಳು ಕವಿತೆಗಳಾಗಿ ಬೆಳಗುತ್ತಿವೆ. ಗರಿಕೆ ಬೇರುಗಳಂತೆ ನೆಲಕಚ್ಚಿ ನೆಲದ ಮೂಲ – ಸೊಗಡು, ಕಷ್ಟ–ಸುಖ ಎಲ್ಲವನ್ನು ಸಹಿಸಿಕೊಂಡು ಉಳಿದುಕೊಂಡು ಬಂದಿರುವ ದ್ರಾವಿಡ ಸಂಸ್ಕೃತಿಯ ಕೃಷಿ ಪ್ರಧಾನ ಸಂಸ್ಕೃತಿ ಇಲ್ಲಿ ಎದ್ದುಕಾಣುತ್ತದೆ. ಹಾಗೆಯೇ ತಣ್ಣನೆಯ ಪ್ರತಿಭಟನೆ ಎಚ್ಚರದಿಂದ ಈ ಕವಿತೆಗಳಲ್ಲಿ ಕೆಲಸ ಮಾಡಿದೆ. ಜೊತೆಗೆ ಕವಿತೆಗಳ ಉದ್ದಕ್ಕೂ ಜನಪದರಿನ ಕಾವ್ಯರೂಪಕ ಹೆಣೆದುಕೊಂಡಿದೆ.*

*ಎಸ್. ಜಿ. ಅವರ ಕವಿತೆಗಳನ್ನು ಸಾಧಾರಣ ಓದುಗರು ಓದುವುದು ಒಂದು ಸವಾಲೇ ಆಗಿದೆ. ಕವಿತೆಗಳು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ ಅಥವಾ ಸುಲಭವಾಗಿ ಅರ್ಥಗಳನ್ನು ಬಿಟ್ಟುಕೊಡುವುದಿಲ್ಲ. ಆದರೆ, ಕಾವ್ಯವನ್ನು ಗಂಭೀರವಾಗಿ ಪರಿಗಣಿಸಿದವರಿಗೆ ಕಾವ್ಯ ಕಟ್ಟುವ ವಿಭಿನ್ನ ನೆಲೆಗಳ ಪ್ರಕಾರಗಳು ಗೋಚರಿಸುತ್ತವೆ. ಅದಕ್ಕೆ ಯೋಗಪ್ಪನವರ್ 'ಕವಿಯೊಬ್ಬನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ವಿಮರ್ಶಕರೆನ್ನುವವರಿಗೂ ಸರಿಯಾದ ತಾಲೀಮು ಬೇಕಾಗುತ್ತದೆ' ಎನ್ನುತ್ತಾರೆ.*

*ಎಸ್. ಜಿ. ಅವರು ತಮ್ಮ ಕವಿತೆಗಳ ಬಗ್ಗೆ ಹೀಗೆ ಹೇಳುತ್ತಾರೆ: 'ಬರೆದ ಕವನಗಳ ಬಗ್ಗೆ ಮತ್ತೆ ಬರೆಯಲೇನುಂಟು ? ಅವು ಬೀದಿಗೆ ಬಿದ್ದ ಮಕ್ಕಳು. ಹತ್ತನೇ ಕವನ ಸಂಕಲನ – ಪ್ರಕಟಿಸಿದ ಮೇಲೂ ಕವಿತೆ ಬರೆಯುತ್ತಿದ್ದೇನೆ ಎಂದರೆ ಅದು ನನ್ನ ನಿಜದ ಹುಡುಕಾಟದ ಪಯಣ. ಒಳಹೊರಗಿನ ನಿರೀಕ್ಷೆಯ ಯಾಣ. ಭೂಮಿತತ್ವದ ದಾರಿ ತುಳಿದ ಋಣ'. ಕನ್ನಡಕ್ಕೆ ದಕ್ಕಿದ ಪ್ರತಿಭೆಯೊಂದರ ಸಾಂಸ್ಕೃತಿಕ ಅನುಭಾವದ ಪರಕಾಯ ಮಾತುಗಳಿವು. ಒಬ್ಬ ಕವಿ/ವಿಮರ್ಶಕ ಇದಕ್ಕಿಂತ ಹೆಚ್ಚು ಹೇಳಲು ಸಾಧ್ಯವೇ ?*

– **ಡಾ॥ ಎಂ. ವೆಂಕಟಸ್ವಾಮಿ,** ಬೆಂಗಳೂರು

ಸಿ. ಆರ್. ಕೃಷ್ಣರಾವ್

ಬಲಪಂಥೀಯ ಮತೀಯವಾದಿ ಭಾಜಪ ನೇತೃತ್ವದ ಎನ್‌ಡಿಎ ಸರಕಾರ ದೇಶದ ಜಾತ್ಯತೀತ ವ್ಯವಸ್ಥೆಯನ್ನೇ ಬುಡಮೇಲು ಮಾಡಲು ಹೊರಟಿದೆ. ಹದಿನೆಂಟು ತಿಂಗಳಲ್ಲಿ ಮೋದಿ ನೇತೃತ್ವದ ಸರಕಾರ ಯಾವ ದಿಶೆಯಲ್ಲಿ ಹೊರಟಿದೆ ಎಂಬುದು ಮನವರಿಕೆಯಾಗಿದೆ. ಬಿಹಾರ ರಾಜ್ಯದಲ್ಲಿ ಈಚೆಗೆ ನಡೆದ ಚುನಾವಣೆಗಳಲ್ಲಿ ಭಾಜಪ ಹೀನಾಯ ಸೋಲನ್ನು ಅನುಭವಿಸಿದೆ. ಇದರಿಂದ ಅದು ಏನಾದರೂ ಪಾಠ ಕಲಿಯುವುದೇ? ಇದು ಪ್ರಶ್ನೆ. ಅಭಿವೃದ್ಧಿಯ ಹೆಸರಿನಲ್ಲಿ ಅಧಿಕಾರ ದಲ್ಲಿರುವ ಪಕ್ಷ ಭಾರತವನ್ನು ಯಾವ ದಿಶೆಯಲ್ಲಿ ಅಭಿವೃದ್ಧಿಪಡಿಸೀತು ನೋಡೋಣ. ಬಹುತ್ವದ ಕಡೆಗೋ ಬಹುಮತದ ಕಡೆಗೋ ?

## ಸ್ವಾತಂತ್ರ್ಯಾನಂತರದ ಭಾರತ –೨೪

# ಸ್ವತಂತ್ರ ಭಾರತ ಯಾವ ದಿಶೆಯಲ್ಲಿ ಸಾಗುತ್ತಿದೆ

ದೇಶದಲ್ಲಿ ಇಂದು ಆತಂಕಕಾರಿ ಪರಿಸ್ಥಿತಿ ಎದ್ದುಕಾಣುತ್ತಿದೆ. ಸಮಾಜದಲ್ಲಿ ಒಡಕುಂಟುಮಾಡುವ ರಾಜಕಾರಣ ವಿಷವೃಕ್ಷದಂತೆ ಹರಡುತ್ತಿದೆ. ಭಿನ್ನಮತಕ್ಕೆ ಅವಕಾಶ ಅದೃಶ್ಯವಾಗುತ್ತಿದ್ದು ಅಸಹನೆ ಹೆಚ್ಚುತ್ತಿದೆ. ಯಾರು ಏನು ಓದಬೇಕು, ಏನು ನೋಡಬೇಕು, ಏನು ತಿನ್ನಬೇಕು ಎಂಬುದನ್ನು ನಿರ್ಧರಿಸುವ ಯಜಮಾನಿಕೆಯನ್ನು ವಿಚ್ಛಿದ್ರಕಾರಿಯಂಥ ಶಕ್ತಿಗಳ ಸಂಘಟನೆಗಳು ಪಡೆದುಕೊಳ್ಳುತ್ತಿವೆ. ಇಂಥ ಸಮಾಜಘಾತುಕ ಶಕ್ತಿಗಳ ಉಪಟಳದ ವಿರುದ್ಧ ನಾಗರಿಕ ಸಮಾಜದ ನೂರಾರು ಮಂದಿ ದನಿ ಎತ್ತುತ್ತಿದ್ದಾರೆ. ವಿಶಿಷ್ಟವಾದ ಒಂದು ಚಳವಳಿಯ ರೂಪದಲ್ಲಿ ವಿಜ್ಞಾನಿಗಳು, ಸಾಹಿತಿಗಳು, ಕಲಾವಿದರು, ಇತಿಹಾಸಕಾರರು, ಬುದ್ಧಿಜೀವಿಗಳು ತಮಗೆ ಸರಕಾರಿ ಸಂಸ್ಥೆಗಳ ವತಿಯಿಂದ ನೀಡಲಾಗಿದ್ದ ಪ್ರಶಸ್ತಿಗಳನ್ನು, ಪದಕಗಳನ್ನು ಹಿಂದಿರುಗಿಸುತ್ತಿದ್ದಾರೆ. ಇದು ಸ್ವಾತಂತ್ರ್ಯಾನಂತರದ ಅರವತ್ತೇಳು ವರ್ಷಗಳು ಕಳೆದಮೇಲೆ ಭಾರತದಲ್ಲಿ ಉಂಟಾಗಿರುವ ಪರಿಸ್ಥಿತಿ. ಇಂಥ ಒಂದು ಪರಿಸ್ಥಿತಿ ನಿರ್ಮಾಣ ಗೊಂಡಿರುವುದು ಭಾರತೀಯ ಜನತಾ ಪಕ್ಷ (ಭಾಜಪ)ದ ನೇತೃತ್ವದಲ್ಲಿ ಕೇಂದ್ರದಲ್ಲಿ ಎರಡನೇ ಸಲ ಅಧಿಕಾರ ವಹಿಸಿಕೊಂಡಿರುವ ಎನ್‌ಡಿಎ (ನ್ಯಾಷನಲ್ ಡೆಮಾಕ್ರಟಿಕ್ ಅಲಯನ್ಸ್) ಸರಕಾರದ ಆಡಳಿತದ ಒಂದೂವರೆ ವರ್ಷದಲ್ಲಿ. ಇದು ಅನಿರೀಕ್ಷಿತವೇನಲ್ಲ. ಕೇಂದ್ರದಲ್ಲಿ ಅಧಿಕಾರ ವಹಿಸಿಕೊಳ್ಳುತ್ತಿದ್ದಂತೆಯೇ ಸಂಘಪರಿವಾರದ ಅಂಗಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್ತು, ಭಜರಂಗ ದಳ, ಶ್ರೀರಾಮ ಸೇನೆ ಮುಂತಾದವು ಚುರುಕುಗೊಂಡವು. ಅಲ್ಪಸಂಖ್ಯಾತರಲ್ಲಿ ಭಯ ಹುಟ್ಟಿಸಲು ನಾನಾ ಬಗೆಯ ಹೊಸ ಘೋಷಣೆಗಳನ್ನು ಹೊಸೆದವು. ಇಂಥ ಪ್ರವೃತ್ತಿಯು ಭಾಜಪ ಕೇಂದ್ರದಲ್ಲಿ ೧೯೯೮ರಲ್ಲಿ ಅಧಿಕಾರಕ್ಕೆ ಬಂದಾಗಲೇ ಕಂಡುಬಂದಿತ್ತು, ಆದರೆ ಅದು ಈಗಿನಷ್ಟು ಉಗ್ರವಾಗಿರಲಿಲ್ಲ. ಭಾಜಪ ಅಧಿಕಾರದ ಮೆಟ್ಟಿಲೇರಿದ್ದೇ ಮತೀಯವಾದಿ ರಾಜಕಾರಣದಿಂದ, ಹಿಂದುತ್ವ ಸಿದ್ಧಾಂತದಿಂದ. ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿ ಇರುವ ಸ್ಥಳದಲ್ಲಿ ರಾಮಮಂದಿರ ನಿರ್ಮಾಣ ಮಾಡಲು ಭಾಜಪ ನಾಯಕ ಎಲ್. ಕೆ. ಅದ್ವಾನಿ ದೇಶದ ಉದ್ದಗಲಕ್ಕೂ ನಡೆಸಿದ ರಥಯಾತ್ರೆ, ತದನಂತರ ಕರಸೇವಕರಿಂದ ಬಾಬ್ರಿ ಮಸೀದಿಯ ಧ್ವಂಸ, ಪರಿಣಾಮವಾಗಿ ಜರುಗಿದ ಕೋಮುಗಲಭೆಗಳಲ್ಲಿ ಮೂರು ಸಾವಿರ ಜನರ ಹತ್ಯೆ ಇತ್ಯಾದಿ ಎಲ್ಲವೂ ಪೂರ್ವಸಿದ್ಧತೆ.



ದೇಶದಲ್ಲಿ ಕೋಮುವಾದಿ ಶಕ್ತಿಗಳು ತಲೆ ಎತ್ತುವುದಕ್ಕೆ ಮುಖ್ಯ ಕಾರಣ ಕಾಂಗ್ರೆಸ್ ಪಕ್ಷ ಹಾಗೂ ಅದು ಅನುಸರಿಸಿದ ಮತ ಬ್ಯಾಂಕ್ ರಾಜಕಾರಣ. ಮತದಾರರನ್ನು ಓಲೈಸಲು ಅನುಸರಿಸಿದ ಮೃದುಧೋರಣೆ. ಮಹಾತ್ಮ ಗಾಂಧಿ ಕೊಲೆ ಸಮಯದಲ್ಲಿ ನಿಷೇಧಿಸಲಾಗಿದ್ದ ಕೋಮುವಾದಿ ಸಂಘಟನೆ ಆರೆಸ್ಸೆಸ್‌ಅನ್ನು ಮತ್ತೆ ಊರ್ಜಿತಗೊಳಿಸಿದ್ದು ಆಗಿನ ಗೃಹಸಚಿವರಾಗಿದ್ದ ಸರ್ದಾರ್ ವಲ್ಲಭಭಾಯಿ ಪಟೇಲ್. ಈ ಹಿಂದೂ ಸಂಘಟನೆಯ ಬಗ್ಗೆ ಅವರಿಗಿದ್ದ ಒಲವು ರಹಸ್ಯವೇನಲ್ಲ. ಅದಕ್ಕೆ ಕೃತಜ್ಞತಾಪೂರ್ವಕವಾಗಿಯೇ ಈಗ ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಪಟೇಲರ ಜನ್ಮದಿನವನ್ನು 'ರಾಷ್ಟ್ರೀಯ ಏಕತಾದಿನ'ವಾಗಿ ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ. ಮೋದಿ ಗುಜರಾತ್ ಕಡಲತೀರದಲ್ಲಿ ಪಟೇಲರ ಬೃಹತ್ ಮೂರ್ತಿಯೊಂದನ್ನು ಸ್ಥಾಪಿಸಲು ಹೊರಟಿದ್ದಾರೆ. ಹಿಂದುತ್ವವಾದಿ ಸಂಘಟನೆ ಆರೆಸ್ಸೆಸ್ ಇಂದು ವ್ಯಾಪಕವಾಗಿ ಬೆಳೆದು ಬಹಿರಂಗವಾಗಿಯೇ ಭಾಜಪ ಸರಕಾರದ ನೀತಿಗಳಲ್ಲಿ ಹಸ್ತಕ್ಷೇಪ ಮಾಡುತ್ತಿದೆ. ಇಂದಿರಾ ಗಾಂಧಿ ಜಾರಿಗೆ ತಂದ ತುರ್ತು ಪರಿಸ್ಥಿತಿ ಆರೆಸ್ಸೆಸ್ಸಿನ ರಾಜಕೀಯ ಮುಖವಾಡ ಜನಸಂಘ ರಾಷ್ಟ್ರೀಯ ಮಾನ್ಯತೆ ಪಡೆದುಕೊಂಡಿತು, ಅನಂತರ ಅಲ್ಪಕಾಲಾವಧಿ ಅಧಿಕಾರದಲ್ಲಿದ್ದ ಮೊರಾರ್ಜಿ ದೇಸಾಯಿ ಸರಕಾರದಲ್ಲಿ ಅಧಿಕಾರದ ಸವಿಯನ್ನೂ ಅನುಭವಿಸಿತು. ಈ ಪ್ರಯೋಗವಾದ ಮೇಲೆ ಮರುಜನ್ಮ ಪಡೆದ ಭಾಜಪ ಈಗ ಕೇಂದ್ರದಲ್ಲಿ ಅಧಿಕಾರ ನಡೆಸುತ್ತಿದೆ. ರಾಮಜನ್ಮಭೂಮಿ, ರಥಯಾತ್ರೆ, ಬಾಬ್ರಿ ಮಸೀದಿ ಧ್ವಂಸ ಇವೆಲ್ಲ ಹಿಂದುತ್ವದ ಕಿಚ್ಚೆಬ್ಬಿಸಿ ಬೆಳೆಯಲು ಸೋಪಾನವಾಯಿತು. ಬಾಬ್ರಿ ಮಸೀದಿ ಆವರಣದಲ್ಲಿ ರಾಮಲಲ್ಲ ಮೂರ್ತಿ ಸ್ಥಾಪನೆಗೆ ಅನುವು ಮಾಡಿಕೊಟ್ಟಿದ್ದು ರಾಜೀವ ಗಾಂಧಿ ಪ್ರಧಾನಿಯಾಗಿದ್ದಾಗ. ಆಗಲೇ ಮುಸ್ಲಿಮ್ ಮತದಾರರನ್ನು ಶಮನಗೊಳಿಸಲು ಶಾಬಾನು ಮೊಕದ್ದಮೆಯ ವಿಚಾರದಲ್ಲಿ ಸುಪ್ರೀಮ್ ಕೋರ್ಟಿನ ತೀರ್ಪನ್ನು ಅನೂರ್ಜಿತಗೊಳಿಸಲು ಸಂವಿಧಾನಕ್ಕೆ ತಿದ್ದುಪಡಿ ತಂದು ಮುಸ್ಲಿಮ್ ಖಾಸಗೀ ನಿಯಮವನ್ನು ಎತ್ತಿಹಿಡಿದದ್ದು. ಈ ಪ್ರಕರಣಗಳ ಪೂರ್ಣ ಪ್ರಯೋಜನ ಪಡೆದುಕೊಂಡದ್ದು ಭಾಜಪ ಮಾತ್ರ. ಬಾಬ್ರಿ ಮಸೀದಿ ಧ್ವಂಸವನ್ನು ಅಂದು ಆಡಳಿತದಲ್ಲಿದ್ದ ಪ್ರಧಾನಿ ಪಿ. ವಿ. ನರಸಿಂಹರಾವ್ ನಾಯಕತ್ವದಲ್ಲಿದ್ದ ಸರಕಾರ ಮನಸ್ಸು ಮಾಡಿದ್ದರೆ ತಡೆಗಟ್ಟಬಹುದಾಗಿತ್ತು. ಕೇಂದ್ರ ಭದ್ರತಾ ಪಡೆಯನ್ನು ನಿಯೋಜಿಸಿ ಅನಾಹುತವನ್ನೂ ತಪ್ಪಿಸುವುದು ಸಾಧ್ಯವಿತ್ತು. ಆದರೆ ಕೇಂದ್ರ ಸರಕಾರ ಅದು ರಾಜ್ಯ ಸರಕಾರದ ಮೇಲೆ ಹೊಣೆ ಹಾಕಿ ಕೈಕಟ್ಟಿ ಕುಳಿತದ್ದು ಅಕ್ಷಮ್ಯ. ಆಗ ಉತ್ತರ ಪ್ರದೇಶದಲ್ಲಿದ್ದುದು ಕಲ್ಯಾಣ ಸಿಂಗ್ ನಾಯಕತ್ವದ ಭಾಜಪ ಸರಕಾರ ಎನ್ನುವುದು ಕಾಂಗ್ರೆಸ್ಸಿಗೆ ಚೆನ್ನಾಗಿ ತಿಳಿದಿತ್ತು. ಹಾಗೆಯೇ ಅದ್ವಾನಿ ರಥಯಾತ್ರೆಗೆ ಅವಕಾಶ ನೀಡಿದ್ದೂ ಕೂಡ ಕಾಂಗ್ರೆಸ್ ಆಡಳಿತವೇ. ಈಗ ಸೋಲನ್ನನುಭವಿಸಿ ಅಧಿಕಾರ ವಂಚಿತರಾಗಿ ತಲೆ ಎತ್ತದ ಸ್ಥಿತಿಯಲ್ಲಿರುವುದೂ ಕಾಂಗ್ರೆಸ್ಸೇ.

ಸಂವಿಧಾನಾತ್ಮಕವಾಗಿ ಜರುಗಿದ ಮೊದಲ ಚುನಾವಣೆಗಳಲ್ಲಿ ಕಾಂಗ್ರೆಸ್ ಪ್ರಚಂಡ ಬಹುಮತವನ್ನು ಲೋಕಸಭೆ ಹಾಗೂ ರಾಜ್ಯ ಶಾಸನಸಭೆಗಳಲ್ಲಿ ಗಳಿಸಿದ್ದರೂ ಅದಕ್ಕೆ ವಿರೋಧವಿಲ್ಲದೆ ಇರಲಿಲ್ಲ. ಅಂದಿನ ಅವಿಭಜಿತ ಮದರಾಸು ಪ್ರಾಂತದಲ್ಲಿ ಅಧಿಕಾರ ಕಳೆದುಕೊಳ್ಳಲಿತ್ತು. ಹೇಗೋ ಮಾಡಿ ಅಧಿಕಾರ ಉಳಿಸಿ ಕೊಂಡಿತು. ಅಂದು ಕಾಂಗ್ರೆಸ್ಸಿಗೆ ಎದುರಾಳಿಯಾಗಿದ್ದುದು ಭಾರತ ಕಮ್ಯುನಿಸ್ಟ್ ಪಕ್ಷ, ಪ್ರಜಾ ಸೋಷಿಯಲಿಸ್ಟ್ ಪಕ್ಷ, ಸೋಷಿಯಲಿಸ್ಟ್ ಪಾರ್ಟಿ ಮೊದಲಾದವು. ೧೯೫೭ರಲ್ಲಿ ಮೊದಲ ಬಾರಿಗೆ ಕಮ್ಯುನಿಸ್ಟ್ ಪಾರ್ಟಿ ಕೇರಳ ರಾಜ್ಯದಲ್ಲಿ ಅಧಿಕಾರಕ್ಕೆ ಬಂತು. ಮತ್ತೆ ಕಾಂಗ್ರೆಸ್ ಅಧಿಕಾರಕ್ಕೇರಿದರೂ ಮುಂದೆ ಕೇರಳ ಎಡ–ಬಲ ಪಕ್ಷಗಳ



ಸೆಣಸಾಟದ ಕೇಂದ್ರವಾಯಿತು. ಬಲಪಂಥೀಯ ಪಕ್ಷವಾಗಿ ಸ್ವತಂತ್ರ ಪಾರ್ಟಿ ಉದಯಿಸಿದ್ದಾಗ್ಯೂ ಅದು ಅಲ್ಪಾಯುಷಿ. ಕೋಮುವಾದಿ ಪಕ್ಷ ಹಿಂದೂ ಮಹಾಸಭಾ ಮೇಲೆದ್ದಿರಲೇ ಇಲ್ಲ. ದಕ್ಷಿಣ ಭಾರತದಲ್ಲಿ ದ್ರಾವಿಡ ಮುನ್ನೇಟ್ರ ಕಳಗಂ ತಮಿಳುನಾಡಿನಲ್ಲಿ ಕಾಂಗ್ರೆಸ್ಸನ್ನು ಮೂಲೆಗುಂಪಾಗಿಸಿ ಅಧಿಕಾರಕ್ಕೆ ಬಂದಿತು. ೧೯೬೭ರಿಂದ ಇಂದಿನವರೆಗೆ ಅಲ್ಲಿ ದ್ರಾವಿಡ ಪಕ್ಷಗಳೇ, ಅಂದರೆ ಡಿಎಂಕೆ, ಎಐಡಿಎಂಕೆ ಪಕ್ಷಗಳೇ ಅಧಿಕಾರದಲ್ಲಿವೆ. ದ್ರಾವಿಡ ಪಕ್ಷಗಳ ಪ್ರಾಬಲ್ಯಕ್ಕೆ ಮುಖ್ಯವಾದ ಒಂದು ಕಾರಣವೆಂದರೆ ಕೇಂದ್ರ ಸರಕಾರ ಅನುಸರಿಸಿದ ಭಾಷಾ ನೀತಿ. ಅದೆಂದರೆ, ಹಿಂದಿ ಭಾಷೆಯನ್ನು ಆಡಳಿತ ಭಾಷೆಯಾಗಿ ಕಡ್ಡಾಯವಾಗಿ ಹೊರಿಸಲು ದೇಶದ ಎಲ್ಲ ರಾಜ್ಯಗಳ ಮೇಲೂ ಒತ್ತಡ ತಂದದ್ದು. ತಮಿಳುನಾಡಿನಲ್ಲಿ ಡಿಎಂಕೆ ನಾಯಕತ್ವದಲ್ಲಿ ದೊಡ್ಡ ಹೋರಾಟವೇ ನಡೆಯಿತು. ಸರಕಾರ ರಾಜ್ಯ ಸರಕಾರಗಳ ಒತ್ತಡಕ್ಕೆ ಮಣಿದು ಹಿಂದಿ ಹೇರಿಕೆಯನ್ನು ಕೈಬಿಡಬೇಕಾಗಿ ಬಂತು. ಆಂಧ್ರಪ್ರದೇಶ ಮತ್ತು ಕರ್ನಾಟಕದಲ್ಲಿ ಭದ್ರಕೋಟೆಯನ್ನು ಕಾಂಗ್ರೆಸ್ ಹೊಂದಿದ್ದರೂ ಕೆಲಕಾಲ ಜನತಾ ಪಕ್ಷ ಹಾಗೂ ತೆಲುಗು ದೇಶಮ್ ಪಕ್ಷಗಳು ಆಡಳಿತದಲ್ಲಿದ್ದುವು. ಈಚೆಗೆ ಕರ್ನಾಟಕದಲ್ಲಿ ಮಾತ್ರ ಇನ್ನೂ ಕಾಂಗ್ರೆಸ್ ಆಡಳಿತದಲ್ಲಿದೆ, ಕೇರಳದಲ್ಲಿ ಹೊಂದಾಣಿಕೆ ಮಾಡಿಕೊಂಡಿದೆ. ಕರ್ನಾಟಕದಲ್ಲಿ ಭಾಜಪ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಬೆಳೆದು ಪ್ರಾಬಲ್ಯ ಹೆಚ್ಚಿಸಿಕೊಂಡಿದೆ. ಉತ್ತರ ಭಾರತದಲ್ಲಿ ಕಾಂಗ್ರೆಸ್ ಒಂದಾದ ಮೇಲೊಂದು ರಾಜ್ಯದಲ್ಲಿ ಅಧಿಕಾರ ಕಳೆದುಕೊಂಡಿತು. ಮಧ್ಯಪ್ರದೇಶ, ಉತ್ತರಪ್ರದೇಶ, ಬಿಹಾರ ಮುಂತಾದ ರಾಜ್ಯಗಳಲ್ಲಿ ಭಾಜಪ ನೇತೃತ್ವದ ಸರಕಾರಗಳು ಅಸ್ತಿತ್ವಕ್ಕೆ ಬಂದವು. ಒಂದು ಕಾಲಘಟ್ಟದಲ್ಲಿ ೭೦–೮೦ರ ದಶಕಗಳ ನಂತರ ಕಾಂಗ್ರೆಸ್ ಬಹುತೇಕ ದಕ್ಷಿಣ ಭಾರತದ ನೆರವಿನಿಂದ ಕೇಂದ್ರದಲ್ಲಿ ಆಡಳಿತ ನಡೆಸುತ್ತಿತ್ತೆಂದು ಹೇಳಬಹುದು. ಪಶ್ಚಿಮ ಬಂಗಾಳದಲ್ಲಿ ಸುಮಾರು ಮೂರೂವರೆ ದಶಕಗಳು ನಿರಂತರವಾಗಿ ಅಧಿಕಾರದಲ್ಲಿದ್ದ ಕಮ್ಯುನಿಸ್ಟ್ ಪಾರ್ಟಿ ನೇತೃತ್ವದ ಎಡರಂಗದ ಸರಕಾರ ೨೦೧೧ರಲ್ಲಿ ಅಧಿಕಾರ ಕಳೆದುಕೊಂಡಿತು. ಈಗ ತೃಣಮೂಲ ಕಾಂಗ್ರೆಸ್ ಅಧಿಕಾರದಲ್ಲಿದೆ. ಒಳಜಗಳ, ಗುಂಪುಗಾರಿಕೆ, ಸ್ವಜನ ಪಕ್ಷಪಾತ, ಭ್ರಷ್ಟಾಚಾರ, ದುರಾಡಳಿತಗಳೇ ಕಾಂಗ್ರೆಸ್ಸಿನ ಅವನತಿಗೆ ಕಾರಣ. ಪಾರ್ಲಿಮೆಂಟಿನಲ್ಲಿ ವಿರೋಧ ಪಕ್ಷದ ಸ್ಥಾನವೂ ಇಲ್ಲದೆ ಇಂದು ಕಾಂಗ್ರೆಸ್ ಹೀನಾಯ ಸ್ಥಿತಿಯಲ್ಲಿದೆ. ಸ್ವಾತಂತ್ರ್ಯಾನಂತರದಲ್ಲಿ ಅರ್ಧ ಶತಮಾನಕ್ಕೂ ಹೆಚ್ಚುಕಾಲ ಕೇಂದ್ರ ಅಧಿಕಾರ ನಡೆಸಿದ ಕಾಂಗ್ರೆಸ್ ಈಗ ನೆಲಕಚ್ಚಿದೆ. ಭಾಜಪಗೆ ಪೋಟಿಯೇ ಇಲ್ಲದಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಹೆಚ್ಚು ಕಡಿಮೆ ಪ್ರಾದೇಶಿಕವಾಗಿಯೇ ಪ್ರಬಲವಾಗಿದ್ದ,



ಹಲವು ಜನಪರ ಹೋರಾಟಗಳಿಗೆ ನೇತೃತ್ವದಲ್ಲಿದ್ದ ಎಡಪಕ್ಷಗಳು ಸರಕಾರದ ಮೇಲೆ ಪ್ರಭಾವ ಬೀರುತ್ತಿದ್ದ ಕಾಲ ಅಂತ್ಯಗೊಂಡಿರುವುದು ದುರದೃಷ್ಟಕರ. ಹಾಗಾಗಿ ಇಂದು ಬಲಪಂಥೀಯ ಮತೀಯವಾದಿಗಳ ಪ್ರಾಬಲ್ಯವೇ ಅಧಿಕವಾಗಿರುವ ಪರಿಸ್ಥಿತಿ ದೇಶದಲ್ಲಿ ಉದ್ಭವಿಸಿದೆ. ಅದರ ಪರಿಣಾಮಗಳನ್ನು ನಾವು ಕಾಣುತ್ತಿದ್ದೇವೆ.

ಸ್ವಾತಂತ್ರ್ಯ ಬಂದು ಆರೂವರೆ ದಶಕಗಳು ಕಳೆದಿದ್ದರೂ ಹಲವು ಪ್ರಶ್ನೆಗಳು ಬಗೆಹರಿಯದೆ ಕಗ್ಗಂಟಾಗಿಯೇ ಉಳಿದಿವೆ! ಮುಖ್ಯವಾಗಿ ಭಾರತ–ಪಾಕಿಸ್ತಾನ ಸಂಬಂಧಗಳಿಗೆ ಅಡ್ಡಿಯಾಗಿರುವ ಬಹುದೊಡ್ಡ ಸಮಸ್ಯೆ ಕಾಶ್ಮೀರದ ಪ್ರಶ್ನೆ ಇತ್ಯರ್ಥವಾಗದೆ ಮುಂದುವರಿದಿದೆ. ಉಪಖಂಡದಲ್ಲಿ ನ್ಯೂಕ್ಲಿಯರ್ ಶಕ್ತರಾಷ್ಟ್ರಗಳಾದ ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಹಗೆತನ ಇರುವವರೆಗೆ ಸುರಕ್ಷಿತತೆಗೆ ಆತಂಕಕಾರಿ. ಹಾಗೆಯೇ, ಅಸ್ಸಾಮ್, ಮಣಿಪುರ, ನಾಗಾಲ್ಯಾಂಡ್ ಮುಂತಾದ ಈಶಾನ್ಯ ಭಾರತದ ರಾಜ್ಯಗಳಲ್ಲಿ ಅಸ್ಥಿರತೆ ನಿರಂತರವಾಗಿ ಬಗೆಹರಿಯದೆ ಇದೆ. ಪಾಕಿಸ್ತಾನಿ ಪ್ರೇರಿತ ಉಗ್ರರಿಂದ ಭಯೋತ್ಪಾದನೆ ದೇಶ ಎದುರಿಸುತ್ತಿರುವ ಬಹುದೊಡ್ಡ ಸಮಸ್ಯೆ. ಹಾಗೆಯೇ ದೇಶದ ಹಲವು ಭಾಗಗಳಲ್ಲಿ ಹರಡಿಕೊಂಡಿರುವ ನಕ್ಸಲೈಟ್ ಚಳವಳಿ ಕೂಡ. ಇದರ ಮೇಲೆ ಹಿಂದುತ್ವ ತೀವ್ರಗಾಮಿಗಳು, ಸಂಪ್ರದಾಯವಾದಿಗಳು ಆಧುನಿಕತೆಯ ಮೇಲೆ, ಪ್ರಮುಖವಾಗಿ ಅಲ್ಪಸಂಖ್ಯಾತರ ಮೇಲೆ ನಡೆಸುತ್ತಿರುವ ಹಲ್ಲೆ ಹೆಚ್ಚುತ್ತಿದೆ. ಈ ಎಲ್ಲ ಬೆಳವಣಿಗೆಗಳೂ ಪ್ರಗತಿಗೆ ಮಾರಕ ಎನ್ನುವುದರಲ್ಲಿ ಸಂಶಯವಿಲ್ಲ. ಇಷ್ಟಾದರೂ ಭಾರತ ಒಂದು ಪ್ರಜಾಪ್ರಭುತ್ವ ರಾಷ್ಟ್ರವಾಗಿ ಮುಂದುವರಿಯುತ್ತಿರುವುದು ದೊಡ್ಡ ಸಾಧನೆ.

ಸ್ವಾತಂತ್ರ್ಯಾನಂತರ ಭಾರತದ ಜನಜೀವನದಲ್ಲಿ ಏನೂ ಪ್ರಗತಿಯಾಗಿಲ್ಲವೆ, ಬದಲಾವಣೆಗಳಾಗಿಲ್ಲವೆ ಎನ್ನುವ ಪ್ರಶ್ನೆ ಏಳುವುದು ಸಹಜ. ಖಂಡಿತ ಆಗಿದೆ, ಆದರೆ ನಿರೀಕ್ಷಿತ ಮಟ್ಟದಲ್ಲಿ ಆಗಿಲ್ಲ. ಸ್ವಾವಲಂಬನೆಗಾಗಿ ಪ್ರಾರಂಭಗೊಂಡ ಪಂಚವಾರ್ಷಿಕ ಯೋಜನೆಗಳ ಕಾಲ ಮುಗಿದು ಈಗ ಪರಾವಲಂಬನೆಯ, ದೇಶೀ ಬಂಡವಾಳ ವೃದ್ಧಿಯಾಗುವ ಬದಲು, ವಿದೇಶೀ ಬಂಡವಾಳಕ್ಕೆ ಮಾರುಹೋಗುವ ಕಾಲ ಪ್ರಾರಂಭವಾಗಿದೆ. 'ಭಾರತದಲ್ಲೇ ತಯಾರಾದುದು' ಎನ್ನುವುದಕ್ಕೆ ಪ್ರತಿಯಾಗಿ 'ಭಾರತದಲ್ಲೇ ತಯಾರಿಸಿ' ಎಂಬುದಾಗಿ ವಿದೇಶೀ ಕಾರ್ಪೊರೇಟ್‌ಗಳನ್ನು ಯಾಚಿಸುವ ಸ್ಥಿತಿಗೆ ಮುಟ್ಟಿದ್ದಾಗಿದೆ. ಹೆಚ್ಚುಕಡಿಮೆ ನಾಲ್ಕು ದಶಕಗಳಿಂದ ದೇಶ ಅನುಸರಿಸುತ್ತಿರುವ ಜಾಗತೀಕರಣದ ನೀತಿಯ ಪರಿಣಾಮಗಳನ್ನು ಇಂದು ನಾವು ಕಾಣುತ್ತಿದ್ದೇವೆ. ಕೈಗಾರಿಕೆಗಳು ಬೆಳೆದಿದ್ದಾಗ್ಯೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿ ನಡೆಸಲು ಅಸಮರ್ಥವಾಗಿವೆ. ಜಾಗತೀಕರಣದಿಂದಾಗಿ ಸಹಸ್ರಾರು ಉದ್ಯಮಗಳೂ ಮುಚ್ಚಿಹೋಗಿವೆ, ಮುಖ್ಯವಾಗಿ ಸಣ್ಣ ಪ್ರಮಾಣದ ಉದ್ಯಮಗಳಿಗೆ ಭಾರಿ ಹೊಡೆತ ಬಿದ್ದಿದೆ; ಉದಾಹರಣೆಗೆ ಟೆಲಿವಿಷನ್ ತಯಾರಿಕೆ, ಇಲೆಕ್ಟ್ರಾನಿಕ್ ಉಪಕರಣ ತಯಾರಿಕೆ ಘಟಕಗಳು. ಸರಕಾರದ ನೀತಿಯ ಪರಿಣಾಮವಾಗಿ ಒಮ್ಮೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ, ದೇಶದ ಔದ್ಯೋಗೀಕರಣಕ್ಕೆ ಬುನಾದಿ ನಿರ್ಮಿಸಿದ ಸಾರ್ವಜನಿಕ ಉದ್ಯಮಗಳು ಸೊರಗಿಹೋಗುತ್ತಿವೆ ಮತ್ತು ಹಲವು ಮುಚ್ಚಿಹೋಗಿವೆ. ಹೊಸದಾಗಿ ಈಚಿನ ದಶಕಗಳಲ್ಲಿ ಬೆಳೆದ ಒಂದು ಉದ್ಯಮ ಕ್ಷೇತ್ರ ಎಂದರೆ ಮಾಹಿತಿ ತಂತ್ರಜ್ಞಾನ ಅಥವಾ ಐಟಿ ವಲಯ. ಮೂಲತಃ ಇದು ಸೇವಾವಲಯದ ಉದ್ಯಮ. ಉನ್ನತ ತಂತ್ರಜ್ಞಾನದ ನೌಕರ ವರ್ಗವನ್ನು ಹೊಂದಿರುವ ಈ ಉದ್ಯಮ ಬಹುತೇಕ ರಫ್ತುಗಾರಿಕೆಯದ್ದಾಗಿದ್ದು, ಸಾಕಷ್ಟು ವಿದೇಶೀ ವಿನಿಮಯವನ್ನು ಗಳಿಸುತ್ತಿದೆ. ಅಧಿಕ ವೇತನ ನೀಡುತ್ತಿರುವ ಈ ಉದ್ಯಮ ಸರಕಾರದಿಂದ ಅನೇಕ ರೀತಿಯ ನೆರವನ್ನು ಪಡೆದುಕೊಂಡಿರುವುದಲ್ಲದೆ, ಕಾರ್ಮಿಕ ಕಾನೂನುಗಳಿಂದಲೂ ವಿನಾಯಿತಿ ಪಡೆದುಕೊಂಡಿದೆ. ಹೊಸದೊಂದು ಬಿಳಿ ಕಾಲರ್ ನೌಕರರನ್ನೂ ಹುಟ್ಟುಹಾಕಿದೆ. ದೇಶದಲ್ಲಿ ಕಾರ್ಪೊರೇಟ್ ವಲಯ ಅತ್ಯಂತ ಪ್ರಬಲವಾಗಿ ಬೆಳೆದಿದೆ. ನುರಿತ ತಂತ್ರಜ್ಞಾನ ಉದ್ಯಮಗಳಲ್ಲಿ ಅಗತ್ಯವಿರುವುದರಿಂದ ಮಧ್ಯಮವರ್ಗವೊಂದು ಸೃಷ್ಟಿಯಾಗಿದೆ. ಹೆಚ್ಚು ಕಡಿಮೆ ಇವರ ಸಂಖ್ಯೆ ಶೇ. ೨೦ರಷ್ಟಾಗಿದೆ. ಉದ್ಯಮಗಳು ನಗರ ಕೇಂದ್ರಿತವಾಗಿರುವುದರಿಂದ ನಗರೀಕರಣ ಪ್ರಕ್ರಿಯೆ ಅಗಾಧವಾಗಿ ಬೆಳೆದಿದೆ. ಅದರೊಂದಿಗೇ ಪಬ್ ಸಂಸ್ಕೃತಿ, ಮಾಲ್‌ಗಳ ಸಂಸ್ಕೃತಿಯೂ ಬೆಳೆದಿದೆ. ಇಷ್ಟಾದರೂ ನಿರುದ್ಯೋಗ ಬೃಹದಾಕಾರವಾಗಿದ್ದು ದೊಡ್ಡ ಸಮಸ್ಯೆಯೇ ಆಗಿದೆ. ತಂತ್ರಜ್ಞಾನದ ವೃದ್ಧಿಯಿಂದಾಗಿ, ಸ್ವಯಂಚಾಲಿತ ಯಂತ್ರಗಳ ಸೃಷ್ಟಿಯಿಂದಾಗಿ ಉದ್ಯೋಗಾವಕಾಶ ಕಡಿಮೆಯಾಗಿದೆ. ದೇಶದಲ್ಲಿ ಶ್ರೀಮಂತರ ಸಂಖ್ಯೆ ವೃದ್ಧಿಯಾಗುತ್ತಿದ್ದ ಹಾಗೆಯೇ ಕಡುಬಡತನವೂ ಬೆಳೆಯುತ್ತಿದೆ. ದೇಶದಲ್ಲಿ ಬಡತನದ ರೇಖೆಗಿಂತ ಕೆಳಗಿರುವವರ ಸಂಖ್ಯೆ ಎಪ್ಪತ್ತರ ದಶಕದಲ್ಲಿ ಶೇ. ೫೯ ಇದ್ದುದು ಶೇ. ೨೨ಕ್ಕೆ ಇಳಿದಿದೆ. ಅಂದರೆ ದೇಶದ ಜನಸಂಖ್ಯೆಯಲ್ಲಿ ಐದನೇ ಒಂದು ಭಾಗ ಜನ ಕಡುಬಡತನದಲ್ಲೇ ಜೀವಿಸುತ್ತಿದ್ದಾರೆ. ಇದು ಇಪ್ಪತ್ತೊಂದನೇ ಶತಮಾನದಲ್ಲಿ ಭಾರತದ ಪರಿಸ್ಥಿತಿ.

ವಿಸ್ತಾರಗೊಳ್ಳುತ್ತಿರುವ ನಗರೀಕರಣ, ಹೆದ್ದಾರಿಗಳ ಅಗಲೀಕರಣ, ಕೈಗಾರಿಕಾ ವಲಯದ ಸ್ಥಾಪನೆಯ ಸರಕಾರದ ಉದ್ದೇಶ ಮೊದಲಾದುವುಗಳಿಂದಾಗಿ ರೈತರು ತಮ್ಮ ಜಮೀನುಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಮಾರುಕಟ್ಟೆ ಬೆಲೆಗಿಂತ ಕಡಿಮೆ ಬೆಲೆಗೆ ಜಮೀನುಗಳನ್ನು ವಶಪಡಿಸಿಕೊಳ್ಳುವ ಸರಕಾರದ ಕ್ರಮದಿಂದಾಗಿ ರೈತರು ದಿವಾಳಿಯಾಗುತ್ತಿದ್ದಾರೆ. ಸ್ವಾತಂತ್ರ್ಯಾನಂತರ ಭಾರತದಲ್ಲಿ ಮೊದಲ ದಶಕಗಳಲ್ಲಿ ಭೂಸುಧಾರಣೆಗಳಿಗಾಗಿ ರೈತರು ಹೋರಾಟ ನಡೆಸುತ್ತಿದ್ದರೆ, ಈಗ ಸರಕಾರದ ಭೂಕಬಳಿಕೆ ನೀತಿಯ ವಿರುದ್ಧ ಹೋರಾಟ ನಡೆಸಬೇಕಾಗಿ ಬಂದಿದೆ. ರೈತರ ಬೆಳೆಗೆ ವೈಜ್ಞಾನಿಕವಾದ ಬೆಲೆ ನಿಗದಿ ಮಾಡುವುದರಲ್ಲಿ ಸರಕಾರದ ವೈಫಲ್ಯ, ದಲ್ಲಾಳಿಗಳ ಉಪಟಳ, ದುಬಾರಿ ಬಡ್ಡಿದರ ಇವುಗಳಿಂದಾಗಿ ರೈತರು ಸೊರಗಿಹೋಗುತ್ತಿದ್ದಾರೆ. ಕಡುಬಡತನದಲ್ಲಿ ಬಾಳು ಸಾಗಿಸುತ್ತಿರುವ ರೈತರು ಸಾಲದ ಹೊರೆ ತಾಳಲಾರದೆ ಆತ್ಮಹತ್ಯೆಗೆ ಶರಣಾಗುತ್ತಿರುವುದು ಹೊಸ ಬೆಳವಣಿಗೆ. ಕಳೆದ ಹತ್ತುಹದಿನೈದು ವರ್ಷಗಳಲ್ಲಿ ದೇಶದಲ್ಲಿ ಸಹಸ್ರಾರು ರೈತರ ಆತ್ಮಹತ್ಯೆಯ ಪ್ರಕರಣಗಳು ವರದಿಯಾಗಿವೆ. ಒಂದು ಬಗೆಯಲ್ಲಿ ಇದು ಇಪ್ಪತ್ತೊಂದನೇ ಶತಮಾನದ ಶಾಪವೋ ಎನಿಸುತ್ತಿದೆ. ಇದು ದೇಶದ ಬೆನ್ನೆಲುಬು ಎಂದು ಪರಿಗಣಿಸಿರುವ ರೈತರ ಸ್ಥಿತಿಯಾದರೆ ಕೈಗಾರಿಕಾ ಕಾರ್ಮಿಕರ ಸ್ಥಿತಿ ಇನ್ನೊಂದು ಬಗೆ. ಸಂಘಟಿತ ಹೋರಾಟದ ಪರಿಣಾಮವಾಗಿ ಕಾರ್ಮಿಕರು ಪಡೆದುಕೊಂಡಿದ್ದ ರಿಯಾಯಿತಿಗಳ ಮೇಲೆ ಸರಕಾರದ ಕೆಂಗಣ್ಣು ಹಾಯ್ದಿದೆ. ಕಾರ್ಮಿಕ ಕಾಯಿದೆಗಳನ್ನು ಕಾರ್ಪೊರೇಟ್ ವಲಯಕ್ಕೆ ಅನುಕೂಲ ಕಲ್ಪಿಸಲು ತಿದ್ದುಪಡಿ ಮಾಡಲು ಸರಕಾರ ಹೊರಟಿದೆ. ಕಂಟ್ರಾಕ್ಟ್ ಲೇಬರ್ ಪದ್ಧತಿ ಈಗಾಗಲೇ ಅನುಷ್ಠಾನದಲ್ಲಿದೆ, ಉದ್ಯೋಗಪತಿಗಳು ಬೇಕೆನಿಸಿದಾಗ ಉದ್ಯಮಗಳನ್ನು ಮುಚ್ಚಲು, ಬೇಕೆನಿಸಿದಾಗ ಕಾರ್ಮಿಕರನ್ನು ವಜಾಮಾಡಲು ಅವಕಾಶವನ್ನು ಕಲ್ಪಿಸಲು ಸರಕಾರ ಕಾನೂನಿನಲ್ಲಿ ಮಾರ್ಪಾಟು ಮಾಡಲು ಉದ್ದೇಶಿಸಿದೆ. ಈಗಾಗಲೇ ಕಾರ್ಮಿಕ ಕಾಯಿದೆಗಳಿಗೆ ತಂದಿರುವ ಕೆಲವು ಮಾರ್ಪಾಟುಗಳೂ ಅಸಂಘಟಿತ ಕಾರ್ಮಿಕರನ್ನು ಬಾಧಿಸುತ್ತಿವೆ. ಅವರ ಸ್ಥಿತಿಗತಿಗಳೂ ಚಿಂತಾಜನಕವಾಗಿವೆ.

ಬಲಪಂಥೀಯ ಮತೀಯವಾದಿ ಭಾಜಪ ನೇತೃತ್ವದ ಎನ್‌ಡಿಎ ಸರಕಾರ ದೇಶದ ಜಾತ್ಯತೀತ ವ್ಯವಸ್ಥೆಯನ್ನೇ ಬುಡಮೇಲು ಮಾಡಲು ಹೊರಟಿದೆ. ಹದಿನೆಂಟು ತಿಂಗಳಲ್ಲಿ ಮೋದಿ ನೇತೃತ್ವದ ಸರಕಾರ ಯಾವ ದಿಶೆಯಲ್ಲಿ ಹೊರಟಿದೆ ಎಂಬುದು ಮನವರಿಕೆಯಾಗಿದೆ. ಬಿಹಾರ ರಾಜ್ಯದಲ್ಲಿ ಈಚೆಗೆ ನಡೆದ ಚುನಾವಣೆಗಳಲ್ಲಿ ಭಾಜಪ ಹೀನಾಯ ಸೋಲನ್ನು ಅನುಭವಿಸಿದೆ. ಇದರಿಂದ ಅದು ಏನಾದರೂ ಪಾಠ ಕಲಿಯುವುದೇ? ಇದು ಪ್ರಶ್ನೆ. ಅಭಿವೃದ್ಧಿಯ ಹೆಸರಿನಲ್ಲಿ ಅಧಿಕಾರದಲ್ಲಿರುವ ಪಕ್ಷ ಭಾರತವನ್ನು ಯಾವ ದಿಶೆಯಲ್ಲಿ ಅಭಿವೃದ್ಧಿಪಡಿಸೀತು ನೋಡೋಣ. ಬಹುತ್ವದ ಕಡೆಗೋ ಬಹುಮತದ ಕಡೆಗೋ?

*(ಮುಗಿಯಿತು)*

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫





# ಕೃಷಿ ಬಿಕ್ಕಟ್ಟು ಮತ್ತು ರೈತರ ಆತ್ಮಹತ್ಯೆಗೆ ಆರ್ಥಿಕ ಕಾರಣಗಳು - ಒಂದು ವಿಶ್ಲೇಷಣೆ

**೧೯ನೇ ಶತಮಾನದಿಂದಲೂ ಭಾರತದಲ್ಲಿ ಕೃಷಿಯು ಕೇವಲ ಹೊಟ್ಟೆಪಾಡಿಗಾಗಿ ಆಶ್ರಯಿಸುವ ವೃತ್ತಿಯಾಗಿದೆ. ಈ ದರಿದ್ರ ವೃತ್ತಿಯ ಬದಲು ಸಾಯುವುದೇ ಲೇಸು ಎನ್ನುವಂತಾಗಿದೆ. ಕೃಷಿಕರು ಸುಮಾರು ಎರಡು ಶತಮಾನಗಳಿಂದಲೂ ಇಂತಹ ಸ್ಥಿತಿಯಲ್ಲಿಯೇ ಜೀವನ ಸಾಗಿಸುತ್ತಿದ್ದಾರೆ.**

**ಡಾ॥ ಎಸ್. ಆರ್. ಕೇಶವ**

ಕಡಿಮೆ ಉಡಿಗೆ ತೊಟ್ಟು, ಕಠಿಣ ಪರಿಶ್ರಮ ವಹಿಸಿ, ಗರಿಷ್ಠ ಬೆವರು ಹರಿಸಿ, ಕೆಲವೊಮ್ಮೆ ಯಥೇಚ್ಛವಾಗಿ–ಕೆಲವೊಮ್ಮೆ ಬಂದರೂ ಬಾರದ ಹಾಗೆ ಕಣ್ಣ ಮುಚ್ಚಾಲೆಯಾಡುವ ಮಳೆಯೊಡನೆ ಧೃತಿಗೆಡದೆ, ತಾಳ್ಮೆಯಿಂದ ರೈತರು ದುಡಿಯುತ್ತಿದ್ದರು. ತನ್ನ ಕರ್ತವ್ಯನಿಷ್ಠೆಯಿಂದ ಭಾರತದ ಆಹಾರ ಭದ್ರತೆಗೆ ಕಾರಣನಾದ ರೈತ ಇಂದು ಹತಾಶನಾಗಿದ್ದಾನೆ. ತಾಳ್ಮೆಯ ಕಟ್ಟೆಯೊಡೆದು ತನ್ನನ್ನು ತಾನೇ ಕೊನೆಗೊಳಿಸಿಕೊಳ್ಳುತ್ತಿದ್ದಾನೆ. ಶೇ. ೭೭ರಷ್ಟು ರೈತರು ತಮಗೆ ಪರ್ಯಾಯ ಕೆಲಸ ದೊರೆತರೆ ತಾವು ಕೃಷಿ ಬಿಡಲು ಸಿದ್ಧ ಎಂದು ಘೋಷಿಸಿದ್ದಾರೆ.

ಭಾರತದ ಕೃಷಿ ಇಂದು ಕವಲುದಾರಿಯಲ್ಲಿದೆ. ಕೃಷಿಕರು ದಿಕ್ಕು ಕಾಣದೆ ಒಂದೆರಡು ಲಕ್ಷ ಸಾಲವೇ ಶೂಲವಾಗಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಆದರೆ ರೈತರು ಹತಾಶರಾಗಿ ಆತ್ಮಹತ್ಯೆಯ ದಾರಿಯನ್ನು ದಿಢೀರನೇ ತುಳಿದಿಲ್ಲ. ಭಾರತದಲ್ಲಿ ೧೯೯೫ರಿಂದ ೨೦೧೪ರವರೆಗೆ ३,೦೨,೧೧೬ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ಇದಕ್ಕೆ ಕಾರಣಗಳಾದರೂ ಯಾವುವು?

ಕಾಲದಿಂದ ಕಾಲಕ್ಕೆ ರಚಿಸಿದ್ದ ಸಮಿತಿಗಳು, ಬುದ್ಧಿಜೀವಿಗಳು ಸಂಶೋಧನೆ ನಡೆಸಿ ರೈತರ ಆತ್ಮಹತ್ಯೆಗೆ ಪ್ರಮುಖವಾಗಿ ಆರ್ಥಿಕ ಕಾರಣಗಳಾದ ೧) ಸಾಲ, ೨) ಕೃಷಿ, ಆದಾನ ಬೆಲೆಗಳಲ್ಲಿ ಹೆಚ್ಚಳ, ३) ಬೆಳೆ ವಿಫಲತೆ, ೪) ಬೆಳೆದ ಬೆಳೆಗೆ ಸೂಕ್ತ ಬೆಲೆ ದೊರೆಯದಿರುವುದು, ೫) ಕೊಳವೆ ಬಾವಿಗಳ ವೈಫಲ್ಯ. ಹಾಗೆಯೇ ಸಾಮಾಜಿಕ ಕಾರಣಗಳಾದ ಮದುವೆ, ಹಬ್ಬ, ಹುಟ್ಟು–ಸಾವು ಸಮಾರಂಭಗಳಿಗೆ ಅನುತ್ಪಾದಕ ಸಾಲ ಮಾಡುವುದು, ರೋಗ ರುಜಿನಗಳಿಗಾಗಿ ವೈದ್ಯಕೀಯ ಹಾಗೂ ಔಷಧೋಪಚಾರಕ್ಕಾಗಿ ಮಾಡಿದ ಸಾಲ, ಮನೆಯಲ್ಲಿ ಕಲಹ ಇತ್ಯಾದಿ... ಕಾರಣಗಳಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ ಎಂದು ತಿಳಿಸಿದ್ದಾರೆ.

ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ನಾವು ನಡೆಸಿದ ಕೃಷಿ ಮುಗ್ಗಟ್ಟಿನ ಸಮೀಕ್ಷೆಯಿಂದ ತಿಳಿದು ಬಂದ ಅಂಶಗಳು ಬಹುತೇಕ ಇವುಗಳನ್ನೇ ಹೋಲುತ್ತಿದ್ದವು. ಅದರ ಜೊತೆಗೆ ಕೃಷಿ ಮುಗ್ಗಟ್ಟಿನಿಂದ ಅತಿಹೆಚ್ಚು ಸಂಕಷ್ಟಕ್ಕೆ ಒಳಗಾಗಿರುವುದು ಸಣ್ಣ ಮತ್ತು ಅತಿಸಣ್ಣ ರೈತರು. ರೈತರ ಆತ್ಮಹತ್ಯೆಯಲ್ಲಿ ಶೇ. ೭೮ರಷ್ಟು ಇವರೇ ಆಗಿರುವುದರಿಂದ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸುತ್ತಿದೆ. ಬಹುತೇಕ ಅತಿಸಣ್ಣ ಮತ್ತು ಸಣ್ಣ



ರೈತರ ಬಳಿ ಕೃಷಿ ಸಲಕರಣೆಗಳು ಇಲ್ಲ. ಅವನ್ನು ಅವರು ಬಾಡಿಗೆಗೆ ತೆಗೆದುಕೊಂಡು ಕೃಷಿ ಮಾಡುವ ಸ್ಥಿತಿ ಉಂಟಾಗಿದೆ. ವಾಣಿಜ್ಯ ಬೆಳೆಗಳನ್ನು ಬೆಳೆಯುವ ರೈತರಲ್ಲಿ ಆತ್ಮಹತ್ಯೆ ಪ್ರಮಾಣವೂ ಹೆಚ್ಚಾಗಿದೆ, ಅದಕ್ಕೆ ಅದರಲ್ಲಾಗುವ ಅನಿರೀಕ್ಷಿತ ವ್ಯಾಪಾರ ಚಕ್ರಗಳ ಏರಿಳಿತಗಳು ಕಾರಣವಾಗಿವೆ. ಶೇ. ೮೪ರಷ್ಟು ರೈತರು ಎರಡಕ್ಕಿಂತ ಹೆಚ್ಚು ಮೂಲಗಳಿಂದ ಸಾಲವನ್ನು ಪಡೆದವರಾಗಿದ್ದಾರೆ; ಹಾಗೂ ಶೇ.೫೬ರಷ್ಟು ಜನ ಹಣದ ಲೇವಾದೇವಿಗಾರರಿಂದಲೂ ಸಾಲವನ್ನು ಪಡೆದು ಕೊಂಡಿದ್ದಾರೆ. ಆತ್ಮಹತ್ಯೆ ಮಾಡಿಕೊಂಡ ಶೇ. ೭೦ರಷ್ಟು ರೈತರು ೩೧ರಿಂದ ೫೦ ವರ್ಷದ ವಯೋಮಾನ ದವರು. ಜಾತಿವಾರು ವಿಂಗಡಣೆಯಲ್ಲಿ ಅತಿಸಣ್ಣ ರೈತರ ಆತ್ಮಹತ್ಯೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ರೈತರು ಅಧಿಕ ಸಂಖ್ಯೆಯಲ್ಲಿದ್ದರೆ, ಸಣ್ಣ ರೈತರ ಆತ್ಮಹತ್ಯೆಗಳಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ರೈತರ ಸಂಖ್ಯೆಯೇ ಹೆಚ್ಚು ಹಾಗೂ ಕರ್ನಾಟಕದ ಪ್ರಬಲ ಜಾತಿಗಳಿಗೆ ಸೇರಿದ ರೈತರ ಆತ್ಮಹತ್ಯೆಯಲ್ಲಿ ಸಣ್ಣ ಹಾಗೂ ಮಧ್ಯಮ ಹಿಡುವಳಿ ಹೊಂದಿದ್ದ ರೈತರ ಸಂಖ್ಯೆ ಅಧಿಕ. ದೊಡ್ಡ ಹಿಡುವಳಿ ಹೊಂದಿದ ರೈತರು ಯಾರೂ ಆತ್ಮಹತ್ಯೆಯ ದಾರಿ ತುಳಿದಿಲ್ಲ ಎಂಬುದು ಗಮನಿಸಬೇಕಾದ ಅಂಶ.

ಎನ್.ಎಸ್.ಎಸ್.ಓ. ವರದಿ (೨೦೧೪) ಹೇಳುವಂತೆ, ಭಾರತದ ಶೇ. ೫೧.೯ರಷ್ಟು ರೈತ ಕುಟುಂಬಗಳು ಸಾಲದಲ್ಲಿವೆ. ಇವರಲ್ಲಿ ಕರ್ನಾಟಕದಲ್ಲಿ ಶೇ. ೭೭.೩ರಷ್ಟು ರೈತ ಕುಟುಂಬಗಳು ಸಾಲದಲ್ಲಿವೆ. ಹಾಗೆ ನೋಡಿದರೆ ರೈತರು ಸಾಲದಲ್ಲಿ ಇರುವುದು ಹೊಸತೇನಲ್ಲ! ೧೯೨೬ರಲ್ಲಿ ಬ್ರಿಟಿಷ್ ಸರ್ಕಾರಕ್ಕೆ ರಾಯಲ್ ಕಮಿಷನ್ ನೀಡಿದ್ದ ವರದಿಯಲ್ಲಿ ಅಂದಿನ ರೈತರು ಇದ್ದ, ದಯನೀಯ ಸ್ಥಿತಿಯನ್ನು ಕುರಿತು 'ಭಾರತದಲ್ಲಿ ರೈತರು ಸಾಲದಲ್ಲಿ ಹುಟ್ಟಿ, ಸಾಲದಲ್ಲಿ ಬದುಕಿ, ಸಾಲದಲ್ಲಿಯೇ ಸಾಯುತ್ತಾರೆ' ಎಂದು ಉಲ್ಲೇಖಿಸಲಾಗಿದೆ. ಕೃಷಿ ಬೆಲೆಗಳಲ್ಲಿ ಏರುಪೇರಾಗಿ, ಬಹುತೇಕ ಸಲ ಬೆಳೆದ ಬೆಳೆಗೆ ತಗುಲಿದ ಖರ್ಚು ವಾಪಸ್ಸು ಬಾರದ ಅನೇಕ ಉದಾಹರಣೆಗಳನ್ನು ನಾವಲ್ಲಿ ನೋಡಬಹುದಾಗಿದೆ. ಉದಾಹರಣೆಗೆ, ೧೮೬೧ರಲ್ಲಿ ಭಾರತದ ಮಾರುಕಟ್ಟೆಗಳಲ್ಲಿ ಒಂದು ಕೆ.ಜಿ. ಹತ್ತಿಯ ಬೆಲೆಯು ೧೨ ಆಣೆಗೆ ಏರಿಕೆ ಆದಾಗ ಅನೇಕ ಕೃಷಿಕರು ಸಾಂಪ್ರದಾಯಿಕ ಬೆಳೆಗಳನ್ನು ಬಿಟ್ಟು ಹಣದ ಲೇವಾದೇವಿ ಗಾರರಿಂದ ಸಾಲ ಪಡೆದು ಹತ್ತಿ ಬೆಳೆದರು. ೧೮೬೫ರ ವೇಳೆಗೆ, ಒಂದು ಕೆ.ಜಿ. ಹತ್ತಿಯ ಬೆಲೆಯು ಆರು ಆಣೆಗೆ ಕುಸಿದಿದ್ದರಿಂದ ರೈತರಿಗೆ ದಿಕ್ಕೇ ತೋಚದಂತಾಗಿತ್ತು.

೧೯ನೇ ಶತಮಾನದಿಂದಲೂ ಭಾರತದಲ್ಲಿ ಕೃಷಿಯು ಕೇವಲ ಹೊಟ್ಟೆಪಾಡಿಗಾಗಿ ಆಶ್ರಯಿಸುವ ವೃತ್ತಿಯಾಗಿದೆ. ಈ ದರಿದ್ರ ವೃತ್ತಿಯ ಬದಲು ಸಾಯುವುದೇ ಲೇಸು ಎನ್ನುವಂತಾಗಿದೆ. ಕೃಷಿಕರು ಸುಮಾರು ಎರಡು ಶತಮಾನಗಳಿಂದಲೂ ಇಂತಹ ಸ್ಥಿತಿಯಲ್ಲಿಯೇ ಜೀವನ ಸಾಗಿಸುತ್ತಿದ್ದಾರೆ.

ಆದರೆ ಕಳೆದ ಎರಡು ದಶಕಗಳಿಂದ ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ರೈತರು ಏಕೆ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ?

ಸರ್ಕಾರಗಳು ರೈತರ ಈ ಸರಣಿ ಆತ್ಮಹತ್ಯೆಗೆ ಎಚ್ಚೆತ್ತು ಆಗಿಂದಾಗಲೇ ಅನೇಕ ಜನಪ್ರಿಯ ಯೋಜನೆ ಗಳನ್ನು, ಅದರಲ್ಲೂ ಪ್ರಮುಖವಾಗಿ : ೧) ಕಡಿಮೆ ಬಡ್ಡಿ ದರದಲ್ಲಿ ಸಾಲ, ೨) ಬಡ್ಡಿ ಮನ್ನಾ ೩) ಸಾಲ ಮನ್ನಾ... ಮುಂತಾದುವನ್ನು ಅನುಷ್ಠಾನಗೊಳಿಸಿತ್ತು. ರೈತ ಮಾಡಿದ ಸಾಲವೆಲ್ಲ ಮನ್ನಾ ಆಗಿದ್ದಿದ್ದರೆ, ಬಡ್ಡಿರಹಿತ ಸಾಲ ಸಿಕ್ಕಿದ್ದರೆ, ರೈತ ಮಿತ್ರ ಯೋಜನೆಗಳು ಯಶಸ್ಸು ಗಳಿಸಿದ್ದಿದ್ದರೆ, ರೈತರು ಏಕೆ ಸಂಕಷ್ಟದಲ್ಲಿಯೇ ಇದ್ದಾರೆ, ಇನ್ನೂ ಏಕೆ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ, ಎಂದು ಸರ್ಕಾರಗಳು ಒಮ್ಮೆ ಯೋಚಿಸಬೇಕು.

**ಕಡಿಮೆ ಆದಾಯ**

ಉದಾಹರಣೆಗೆ, ಯಾವುದೋ ಒಂದು ವರ್ಷ ಸಾಲ ಮನ್ನಾ ಮಾಡಿದ್ದರೆ ಆ ವರ್ಷದ ಸಾಲ ತೀರುತ್ತದೆ, ಅಷ್ಟೆ. ಮುಂದಿನ ವರ್ಷ ಮತ್ತೆ ಸಾಲ; ಮತ್ತೆ ಬಡ್ಡಿ! ಆದರೆ, ಕೃಷಿಯ ಆದಾನಗಳ ಬೆಲೆಗಳು ಹೆಚ್ಚಾಗುತ್ತಿವೆ. ರೈತನಿಗೆ ಕೃಷಿಯಿಂದ ಬರುತ್ತಿರುವ ಆದಾಯ ನಿರಂತರವಾಗಿ ಕಡಿಮೆಯಾಗುತ್ತಿದೆ. ಎನ್.ಎಸ್.ಎಸ್.ಓ ವರದಿ (೨೦೧೪)ಯ ಪ್ರಕಾರ ಕೃಷಿ ಕುಟುಂಬಗಳ ಸರಾಸರಿ ಮಾಸಿಕ ಆದಾಯ ಕೇವಲ ರೂ. ೬೪೨೬. ರೈತರ ಆದಾಯವನ್ನು ಹೆಚ್ಚಿಸಲು ಕೈಗೊಳ್ಳಬೇಕಾದ ಕ್ರಮಗಳನ್ನು ಕೈಗೊಳ್ಳದೆ ಮಿಕ್ಕೆಲ್ಲ ಕಾರ್ಯಕ್ರಮಗಳು ಕೇವಲ ಆ ಕ್ಷಣಕ್ಕೆ, ಆ ಸಂದರ್ಭಕ್ಕೆ ಪ್ರತಿಕ್ರಿಯಿಸಿದಂತೆಯೇ ಆಗುತ್ತಿದೆ. ಹಾಗಾಗಿ ಕೃಷಿ ಮುಗ್ಗಟ್ಟು ಹಾಗೆಯೇ ಮುಂದುವರಿಯುತ್ತಿದೆ.

ಕೃಷಿಯಿಂದ ಬರುವ ಆದಾಯವನ್ನು ಹೆಚ್ಚಿಸಲು ಕೃಷಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಸದೃಢಗೊಳಿಸಬೇಕಾಗುತ್ತದೆ. ೨೦೧೪ರಲ್ಲಿ ರಾಷ್ಟ್ರದ ೬ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತೆಲಂಗಾಣ, ಕರ್ನಾಟಕ, ಮಧ್ಯಪ್ರದೇಶ ಹಾಗೂ ಛತ್ತೀಸ್‌ಘಡ್‌ನಿಂದ ಶೇ. ೯೨ರಷ್ಟು ರೈತರ ಆತ್ಮಹತ್ಯೆಗಳು ವರದಿಯಾಗಿವೆ. ಈ ೬ ರಾಜ್ಯಗಳಲ್ಲಿ ಕೃಷಿ ಮೂಲಭೂತ ಸೌಕರ್ಯಗಳು ತುಂಬ ಕನಿಷ್ಠಮಟ್ಟದಲ್ಲಿವೆ ಎಂಬುದು ಗಮನಿಸಬೇಕಾದ ಅಂಶ. ಈ ಸ್ಥಿತಿಗೆ ದುರದೃಷ್ಟವಶಾತ್ ನಮ್ಮ ಬಹುತೇಕ ಆರ್ಥಿಕ ಯೋಜನೆಗಳು ಕೃಷಿಯನ್ನು ನಿರ್ಲಕ್ಷಿಸಿ ಇತರೆ ಕ್ಷೇತ್ರಗಳ ಬೆಳವಣಿಗೆಗೆ ಒತ್ತು ನೀಡಿದ್ದೇ ಪ್ರಮುಖ ಕಾರಣವಾಯಿತು.

**ಹೊರಗುಳಿಯಲ್ಪಟ್ಟ ಕೃಷಿ**

ರಾಷ್ಟ್ರೀಯ ಆದಾಯಕ್ಕೆ ಕೃಷಿಯೇತರ ಕ್ಷೇತ್ರಗಳಿಂದ ಹೆಚ್ಚಿನ ಆದಾಯ ಬಂದಲ್ಲಿ ಮಾತ್ರ ಆರ್ಥಿಕತೆಯು ಅಭಿವೃದ್ಧಿಯ ಕಡೆಗೆ ಸಾಗುತ್ತದೆ ಎಂಬ ಅಭಿವೃದ್ಧಿ ಅರ್ಥಶಾಸ್ತ್ರದ ಕಲ್ಪನೆಯನ್ನು ತಪ್ಪಾಗಿ ಅರ್ಥೈಸಿದ ಭಾರತದ ನೀತಿ ನಿರೂಪಕರು ಅಸಮತೋಲನ ಅಭಿವೃದ್ಧಿಗೆ ಹೆಚ್ಚಾಗಿ ಒತ್ತುಕೊಟ್ಟು, ಬಹುಸಂಖ್ಯಾತರು ನೆಚ್ಚಿದ ಕೃಷಿಯನ್ನು ೧೯೫೬ರಿಂದ ನಿರ್ಲಕ್ಷಿಸಿದರು. ಹೀಗಾಗಿ ಕೃಷಿಯು ಆರ್ಥಿಕವಾಗಿ, ಸಾಮಾಜಿಕವಾಗಿ, ವಿಜ್ಞಾನ ಹಾಗೂ ತಂತ್ರಜ್ಞಾನದ ಒಳಗೊಳ್ಳುವಿಕೆಯಿಂದ ಹೊರಗುಳಿಯಲ್ಪಟ್ಟಿತು.

**ಸರ್ಕಾರದ ಹೂಡಿಕೆಯಲ್ಲಿ ಇಳಿಕೆ**

ಭಾರತದಲ್ಲಿ ೧೯೯೧ರಿಂದ ಜಾರಿಗೆ ಬಂದ ಹೊಸ ಆರ್ಥಿಕ ನೀತಿಗಳು ಹಾಗೂ ೧೯೯೫ರಲ್ಲಿ ಅಸ್ತಿತ್ವಕ್ಕೆ ಬಂದ ವಿಶ್ವವ್ಯಾಪಾರ ಸಂಘಟನೆಯಿಂದಾಗಿ ಸರ್ಕಾರಗಳು ಕೃಷಿಕನನ್ನು ವ್ಯವಸ್ಥಿತವಾಗಿ ನಿರ್ಲಕ್ಷಿಸಿದವು. ಕೃಷಿಗೆ ಅಗತ್ಯವಿರುವ ಮೂಲಭೂತ ಸೌಲಭ್ಯಗಳ ಅಭಿವೃದ್ಧಿಗೆ ಸರ್ಕಾರದ ಹೂಡಿಕೆಯು ಪ್ರಮುಖ ಪಾತ್ರ ವಹಿಸುತ್ತದೆ. ಆದರೆ ಭಾರತ ಸರ್ಕಾರ ವ್ಯವಸ್ಥಿತವಾಗಿ ಕೃಷಿ ಕ್ಷೇತ್ರದಲ್ಲಿ ತನ್ನ ಹೂಡಿಕೆಯನ್ನು ಕಡಿಮೆ ಮಾಡಿತು. ಆರನೆಯ ಪಂಚವಾರ್ಷಿಕ ಯೋಜನೆಯ ಒಟ್ಟು ಯೋಜನಾ ಗಾತ್ರದ ಶೇ. ೧೬.೪ರಷ್ಟು ಹಣವನ್ನು ಸರ್ಕಾರ ಕೃಷಿಗೆ ವ್ಯಯಿಸಿತು. ಆದರೆ ಅದು ೧೨ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ಮೀಸಲಿಟ್ಟ ಹಣವು ಒಟ್ಟು ಯೋಜನಾ ಗಾತ್ರದ ಶೇ. ೪.೭ರಷ್ಟಕ್ಕೆ ಕುಸಿಯಿತು. ಇದರ ಪರಿಣಾಮವಾಗಿ ೨೦೧೩–೧೪ರಲ್ಲಿ ಕೃಷಿಯ ಒಟ್ಟು ಬಂಡವಾಳ ಸಂಚಯನವು ಶೇ. ೨.೫ರಷ್ಟಕ್ಕೆ ಕುಸಿಯಿತು.

**ನೀರಾವರಿ ಪ್ರದೇಶ ವಿಸ್ತೀರ್ಣದ ಕೌತುಕತೆ**

ಕೃಷಿಯಲ್ಲಿ ಸರ್ಕಾರದ ಹೂಡಿಕೆ ಕಡಿಮೆಯಾಗಿ ಬಂಡವಾಳ ಸಂಚಯನವು ಅತ್ಯಂತ ಕಡಿಮೆ ಇದ್ದಾಗಲೂ ೨೦೧೩–೧೪ರ ವೇಳೆಗೆ ಭಾರತದ ಒಟ್ಟು ಬೆಳೆ ಬೆಳೆಯುವ ಪ್ರದೇಶದಲ್ಲಿ ಶೇ. ೪೫.೩೨ರಷ್ಟು ಭಾಗವು (ಕರ್ನಾಟಕದಲ್ಲಿ ಇದು ಶೇ.೩೨ರಷ್ಟು) ನೀರಾವರಿ ಭೂಮಿಯನ್ನಾಗಿಸಿದೆ ಎಂಬ ಮಾಹಿತಿಯು ವಿಸ್ಮಯವನ್ನುಂಟುಮಾಡುತ್ತದೆ. ಈ ವಿಸ್ಮಯವನ್ನು

ಭೇದಿಸಬೇಕಾದರೆ ನೀರಾವರಿಯ ವಿವಿಧ ಮೂಲಗಳ ಪಾಲನ್ನು ನೋಡಬೇಕಾಗುತ್ತದೆ. ಯೋಜನೆಗಳ ಪ್ರಾರಂಭದಲ್ಲಿ ಕಾಲುವೆಗಳಿಂದ ನೀರುಣಿಸುತ್ತಿದ್ದ ಕೃಷಿ ಭೂಮಿಯ ಪಾಲು ಶೇ.೪೪ರಷ್ಟು ಇತ್ತು. ಅದು ಈಗ ಕೇವಲ ಶೇ.೨೬ಕ್ಕೆ ಕುಸಿದಿದೆ. ಕೆರೆಗಳಿಂದ ನೀರುಣಿಸುತ್ತಿದ್ದ ಪ್ರದೇಶವು ಯೋಜನೆಗಳ ಆರಂಭದಲ್ಲಿ ಶೇ.೧೯ರಷ್ಟು ಇದ್ದಿದ್ದು ಈಗ ಶೇ. ೩ರಷ್ಟಕ್ಕೆ ಕುಸಿದಿದೆ. ಆದರೆ ಕೊಳವೆ ಬಾವಿಗಳಿಂದ ಭೂಮಿಗೆ ನೀರುಣಿಸುವ ಪ್ರದೇಶವು ಯೋಜನೆಗಳ ಆರಂಭದಲ್ಲಿ ಶೇ.೩೯ರಷ್ಟು ಇದ್ದಿದ್ದು, ಈಗ ಶೇ. ೬೧ರಷ್ಟು ಹೆಚ್ಚಾಗಿದೆ. ಸರ್ಕಾರವು 'ಗಂಗಾ ಕಲ್ಯಾಣ'ದಂತಹ ಯೋಜನೆಗಳ ಹೊರತಾಗಿಯೂ ಬಹುಸಂಖ್ಯಾತ ಕೊಳವೆ ಬಾವಿಗಳನ್ನು ತೋಡಿಸುವುದು ರೈತರೇ ಹೊರತು ಸರ್ಕಾರಗಳಲ್ಲ. ಹಾಗಾಗಿ ನೀರಾವರಿ ಪ್ರದೇಶದ ವಿಸ್ತೀರ್ಣದಲ್ಲಿ ಸರ್ಕಾರದ ಪಾತ್ರ ಎಷ್ಟೆಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ.

### ಕೃಷಿ ಸಾಲ ಸೌಲಭ್ಯ

ರಾಷ್ಟ್ರದಲ್ಲಿ ಪ್ರಸ್ತುತ ೧೦೨೨೯ ಸಾರ್ವಜನಿಕ ಬ್ಯಾಂಕುಗಳ ಶಾಖೆಗಳು ಕಾರ್ಯನಿರ್ವಹಿಸುತ್ತಿದ್ದು, ಶೇ. ೬೯ರಷ್ಟು ಭಾರತೀಯರು ವಾಸ ಮಾಡುವ ಗ್ರಾಮೀಣ ಭಾರತದಲ್ಲಿ ಅವುಗಳ ಪಾಲು ಶೇ. ೩೭.೨ರಷ್ಟು (೩೭೮೪೭) ಮಾತ್ರ. ವಿಶ್ವಬ್ಯಾಂಕ್ ವರದಿ (೨೦೧೪)ಯ ಪ್ರಕಾರ ಭಾರತದಲ್ಲಿ ಶೇ. ೭೩ರಷ್ಟು ರೈತರಿಗೆ ಸಾಂಸ್ಥಿಕ ಮೂಲಗಳಿಂದ ಸಾಲವೇ ದೊರಕುತ್ತಿಲ್ಲ; ಪ್ರತಿ ಇಬ್ಬರು ರೈತರಲ್ಲಿ ಒಬ್ಬರ ಬಳಿಯೂ ಬ್ಯಾಂಕ್ ಖಾತೆ ಇಲ್ಲ; ಸಾಲ ಮನ್ನಾ, ಸಹಾಯಧನವನ್ನು ನೇರವಾಗಿ ಖಾತೆಗಳಿಗೆ ಹಾಕುವ ಯೋಜನೆಗಳು ಎಷ್ಟರಮಟ್ಟಿಗೆ ರೈತರಿಗೆ, ಯಾವ ರೈತರಿಗೆ ನೆರವಾಗುತ್ತಿವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಬಹುಸಂಖ್ಯಾತ ಅತಿ ಸಣ್ಣ ಹಾಗೂ ಸಣ್ಣ ರೈತರು ಸಾಂಸ್ಥಿಕ ಸಾಲದಿಂದ ಹೊರಗುಳಿದಿದ್ದಾರೆ, ಅವರು ಈಗಲೂ ತಮ್ಮ ಅಗತ್ಯ ಸಾಲಗಳಿಗಾಗಿ ರೈತರ ರಕ್ತ ಹೀರುವ ಹಣದ ಲೇವಾದೇವಿಗಾರರನ್ನು ಆಶ್ರಯಿಸಬೇಕಾಗುತ್ತದೆ. ವಾಣಿಜ್ಯ ಬ್ಯಾಂಕುಗಳಿಗಿಂತ ಸುಲಭವಾಗಿ ರೈತರು ಸಾಲ ಪಡೆಯಬಹುದಾದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಸಂಖ್ಯೆ ೧೯೯೧ರಲ್ಲಿ ೧,೧೫,೦೦೦ದಿಂದ ಪ್ರಸ್ತುತ ೯೦ ಸಾವಿರಕ್ಕೆ ಕಡಿಮೆಯಾಗಿರುವುದು ಕೃಷಿ ಮುಗ್ಗಟ್ಟನ್ನು ಹೆಚ್ಚಿಸಿದೆ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಒಟ್ಟು ಕೃಷಿ ಸಾಲದ ಶೇ. ೮೬ರಷ್ಟನ್ನು ೧೯೭೧-೭೨ರಲ್ಲಿ ನೀಡುತ್ತಿದ್ದವು. ಅದು ಪ್ರಸ್ತುತ ಶೇ. ೧೭ರಷ್ಟಕ್ಕೆ ಕುಸಿದಿದೆ. ಅನುತ್ಪಾದಕ ಸ್ವತ್ತುಗಳನ್ನು ಕಡಿಮೆ ಮಾಡುವ ಭರದಲ್ಲಿ ರೈತರಿಗೆ ಕೊಡುವ ಸಾಲವನ್ನು ರೈತರ ಹೆಸರಿನಲ್ಲಿ ಬೇರೆಯವರಿಗೆ ಸಾಲ ಕೊಡುವ ಪರಿಪಾಠವು ಯಥೇಚ್ಛವಾಗಿ ಮುಂದುವರಿದಿದೆ. ಉದಾಹರಣೆಗೆ, ಅತಿ ಸಣ್ಣ ರೈತರು ಮತ್ತು ಸಣ್ಣ ರೈತರು ಯಾವುದೇ ದಾಖಲೆ ಪತ್ರಗಳ ತಕರಾರು ಇಲ್ಲದೆ ಸುಲಭ ದರದಲ್ಲಿ ತಮ್ಮ ಮನೆಯಲ್ಲಿರುವ ಚಿನ್ನವನ್ನು ಅಡವಿಟ್ಟು ಒಂದು ಲಕ್ಷದವರೆಗೂ ಶೇ. ೪ರ ಬಡ್ಡಿ ದರದಲ್ಲಿ ಸಾಲ ಪಡೆಯುವ ಯೋಜನೆಯೊಂದನ್ನು ಸರ್ಕಾರ ರೂಪಿಸಿದೆ. ಆದರೆ ರೈತರ ಹೆಸರಿನಲ್ಲಿ ಇತರರಿಗೆ



ಈ ಯೋಜನೆಯಡಿ ಸಾಲ ಕೊಡಲಾಗುತ್ತಿದೆ.

### ವಿಶ್ವ ವ್ಯಾಪಾರ ಸಂಘಟನೆ

೧೯೯೫ರಿಂದ ೨೦೧೪ರವರೆಗೆ ೩,೦೨,೧೧೬ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ಭಾರತದಲ್ಲಿ ಹೊಸ ಆರ್ಥಿಕ ನೀತಿಗಳು ೧೯೯೧ರಲ್ಲಿ ಜಾರಿಗೆ ಬಂದ ತರುವಾಯ ಹಾಗೂ ೧೯೯೫ರಲ್ಲಿ ಡಬ್ಲ್ಯೂ.ಟಿ.ಓ ಅಸ್ತಿತ್ವಕ್ಕೆ ಬಂದ ನಂತರ ರೈತರ ಆತ್ಮಹತ್ಯೆಗಳೂ ಹೆಚ್ಚಾಗಿರುವುದು ಕಾಕತಾಳಿಯವೋ, ಇಲ್ಲ ನಿರ್ದಿಷ್ಟ ಸಂಕೇತವೋ ಎಂದು ಹೇಳುವುದು ಅಷ್ಟೇನು ಕಷ್ಟವಲ್ಲ! ೧೯೯೭ರಲ್ಲಿ ಭಾರತ ಬಹುರಾಷ್ಟ್ರೀಯ ವಿದೇಶಿ ಕಂಪನಿಗಳಿಗೆ ಬೀಜ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟಿತ್ತು. ಆ ವರ್ಷ ಸರಿಸುಮಾರು ೧೩,೬೨೨ ರೈತರು ಆತ್ಮಹತ್ಯೆ ಮಾಡಿಕೊಂಡರು.

ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಸರಿ ಹೊಂದುವ ನೀತಿಯನ್ನು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮೇಲೆ ಯಾವುದೇ ಮುಲಾಜಿಲ್ಲದೆ ಹೇರುವ ವಿಶ್ವ ವ್ಯಾಪಾರ ಸಂಸ್ಥೆ (ಡಬ್ಲೂಟಿಓ) ರೈತರ ಸಹಾಯಧನದ ಕಡಿತಕ್ಕೊ ಆದೇಶಿಸಿದೆ. ಸಹಾಯಧನವನ್ನು ನೀಲಿ ಪೆಟ್ಟಿಗೆ, ಹಸಿರು ಪೆಟ್ಟಿಗೆ, ಆ್ಯಂಬರ್ ಪೆಟ್ಟಿಗೆ ಹಾಗೂ ವಿಶೇಷ ಮತ್ತು ವ್ಯತ್ಯಸಾತ್ಮಕ ಪೆಟ್ಟಿಗೆ ಎಂದು ವಿಂಗಡಿಸುವ ಡಬ್ಲ್ಯೂ ಟಿ ಓ ಅಭಿವೃದ್ಧಿ ಹೊಂದಿದ ರೈತರ ಹಿತಾಸಕ್ತಿಗೆ ಅನುಗುಣವಾಗಿ ಸಹಾಯಧನದ ಗರಿಷ್ಠ ಮಿತಿಯನ್ನು ಹೇರಿದೆ. ಆದರೆ ವಾಸ್ತವವಾಗಿ ಭಾರತೀಯ ರೈತನಿಗೆ ವಾರ್ಷಿಕವಾಗಿ ಸರಾಸರಿ ತಲಾ ರೂ. ೧೫,೩೯ ಸಹಾಯಧನವನ್ನು ಸರ್ಕಾರ ಕೊಡುತ್ತದೆ. ಆದರೆ ಅದೇ ಯುರೋಪಿನಲ್ಲಿ ಅಲ್ಲಿನ ಸರ್ಕಾರಗಳು ವಾರ್ಷಿಕವಾಗಿ ಸರಾಸರಿ ೧ ಲಕ್ಷದ ೩೭ ಸಾವಿರ ರೂಪಾಯಿಗಳನ್ನು ಸಹಾಯಧನವನ್ನಾಗಿ ತನ್ನ ರೈತರಿಗೆ ನೀಡುತ್ತಿವೆ ಹಾಗೂ ಅಮೇರಿಕದಲ್ಲಿ ಅಲ್ಲಿನ ಸರ್ಕಾರ ವಾರ್ಷಿಕವಾಗಿ ಸರಾಸರಿ ೬ ಲಕ್ಷ ೪೧ ಸಾವಿರ ರೂಪಾಯಿಗಳ ಸಹಾಯಧನವನ್ನು ಕೊಡುತ್ತದೆ. ಇವೆಲ್ಲದರ ಅರಿವಿದ್ದರೂ ಭಾರತ ಸರ್ಕಾರ ತಲಾ ಸಹಾಯಧನವನ್ನು ಕಡಿತಗೊಳಿಸಲು ಸಜ್ಜಾಗಿದೆ. ಭಾರತ ತನ್ನ ಜಿಡಿಪಿಯ ಶೇ.೧ರಷ್ಟು ಸಹಾಯಧನವನ್ನು ರೈತರಿಗೆ ಕೊಡಲು ಹಿಂದೇಟು ಹಾಕುತ್ತಿರುವುದು ಖೇದದ ಸಂಗತಿ. ಆದರೆ ಅದೇ ಸರ್ಕಾರ ವಿದೇಶಿ ನೇರ ಬಂಡವಾಳವನ್ನು ಆಕರ್ಷಿಸಲು ವಿದೇಶಿ ಕಂಪನಿಗಳಿಗೆ ನೂರಾರು ಕೋಟಿಯಷ್ಟು ಆದಾಯ ತೆರಿಗೆ, ಕಂಪನಿ ತೆರಿಗೆ ಮುಂತಾದುವಲ್ಲಿ ರಿಯಾಯಿತಿಗಳನ್ನು ಸಂತೋಷದಿಂದ ಕೊಡುತ್ತದೆ!

### ಮಧ್ಯವರ್ತಿಗಳ ಹಾವಳಿ

ಕೃಷಿ ಪ್ರಧಾನ ರಾಷ್ಟ್ರವಾಗಿರುವ ಭಾರತದಲ್ಲಿ ಉತ್ಪಾದಕತೆ ಮಾತ್ರ ಅತ್ಯಂತ ಕನಿಷ್ಠ ಮಟ್ಟದಲ್ಲಿದೆ. ಗ್ರಾಹಕರು ಕೃಷಿ ಉತ್ಪನ್ನವನ್ನು ಕೊಂಡ ಬೆಲೆಯಲ್ಲಿ ರೈತನಿಗೆ ೧/೩ ಮಾತ್ರ ಸಿಗುತ್ತಿದೆ. ಸರ್ಕಾರ ಮಧ್ಯವರ್ತಿಗಳ ನಿರ್ಮೂಲನೆಗಾಗಿ ಕ್ರಮ ಕೈಗೊಂಡಿದ್ದೇವೆ ಎಂದು ಹೇಳುವಾಗಲೇ ಮಧ್ಯವರ್ತಿಗಳು ಮತ್ತಷ್ಟು ಬಲಗೊಂಡು ರೈತರಿಗೆ ನ್ಯಾಯಯುತವಾಗಿ ಬರಬೇಕಾದ ಆದಾಯವನ್ನು ತಿಂದು ತೇಗುತ್ತಿದ್ದಾರೆ. ಆದ್ದರಿಂದಲೇ ನಾವು ಇಲ್ಲಿಯವರೆಗೆ ಆರ್ಥಿಕ ಸಂಕಷ್ಟಕ್ಕೆ ಒಳಗಾಗಿ ಯಾವುದೇ ಮಧ್ಯವರ್ತಿಯು ಆತ್ಮಹತ್ಯೆ ಮಾಡಿಕೊಂಡದ್ದನ್ನು ಎಲ್ಲಿಯೂ ಕೇಳಿಲ್ಲ!

### ಕೃಷಿ ವಿಮೆ

ಕೃಷಿ ಅತಿ ಹೆಚ್ಚು ಗಂಡಾಂತರವನ್ನು ಎದುರಿಸುವ ಕ್ಷೇತ್ರವಾಗಿದ್ದು, ಗಂಡಾಂತರವನ್ನು ಶಮನ ಮಾಡಲು ಇರುವ ಪ್ರಮುಖ ಸಾಧನಗಳಲ್ಲಿ ವಿಮೆಯೂ ಒಂದು. ಆದರೆ ಈವರೆಗೆ ಎಲ್ಲಾ ಬೆಳೆಗಳನ್ನು ವಿಮೆಯ ವ್ಯಾಪ್ತಿಗೆ ತರಲಾಗಿಲ್ಲ, ಕೇವಲ ಕೆಲವೇ ಬೆಳೆಗಳಿಗೆ ಬೆಳೆ ವಿಮೆ ಯೋಜನೆ ಚಾಲ್ತಿಯಲ್ಲಿದ್ದು, ಪ್ರಸ್ತುತ ಕೇವಲ ಶೇ. ೨೦ರಷ್ಟು ರೈತರು ಮಾತ್ರ ಬೆಳೆ ವಿಮೆಯ ಲಾಭವನ್ನು ಪಡೆಯುತ್ತಿದ್ದಾರೆ.

### ಉತ್ತಮ ತಂತ್ರಜ್ಞಾನ ಹಾಗೂ ಯಂತ್ರೋಪಕರಣಗಳು

ಉತ್ತಮ ತಂತ್ರಜ್ಞಾನ ಹಾಗೂ ಯಂತ್ರೋಪಕರಣಗಳು ಚಾಲ್ತಿಯಲ್ಲಿದ್ದರೂ ಅವುಗಳನ್ನು ಉಪಯೋಗಿಸಲು ಸರಿಯಾದ ಮಾಹಿತಿಯಾಗಲಿ, ಹಣವಾಗಲಿ, ರೈತರ ಬಳಿ ಇಲ್ಲ, ತಾನು ಉಳುಮೆ ಮಾಡುವ ತನ್ನ ಜಮೀನಿನ ಮಣ್ಣಿನ ಆರೋಗ್ಯದ ಬಗ್ಗೆಯೂ ಮಾಹಿತಿಯಿಲ್ಲದ ರೈತ ಹೊಸ ತಂತ್ರಜ್ಞಾನವನ್ನು ಹೇಗೆ ತಾನೆ ತಿಳಿದುಕೊಂಡಾನು?

ಸರ್ಕಾರ, ವಿರೋಧ ಪಕ್ಷಗಳು, ವಿದ್ಯಾವಂತರು ತಮಗೆ ಅನ್ನ ನೀಡುವವರ ಜೊತೆಗಿದ್ದೇವೆ ಎಂದು ಸುಮ್ಮನೆ ಹೇಳಿಬಿಡುವ ಬದಲು ಕೃಷಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳಾದ ಬೀಜ, ಮಣ್ಣಿನ ಪರೀಕ್ಷೆ ವರದಿ, ವಿದ್ಯುತ್, ನೀರಾವರಿ, ಗೊಬ್ಬರ, ಕೀಟನಾಶಕಗಳು, ಸಾಲ, ಕೃಷಿ ಸಲಕರಣೆಗಳು, ಆಧುನಿಕ ಯಂತ್ರೋಪಕರಣಗಳು ಹಾಗೂ ತಂತ್ರಜ್ಞಾನವನ್ನು, ಉಗ್ರಾಣಗಳನ್ನು, ಶೈತ್ಯಾಗಾರಗಳನ್ನು, ಉತ್ತಮ ಮಾರುಕಟ್ಟೆಯನ್ನು, ಸರಿಯಾದ ಸಮಯಕ್ಕೆ, ಸರಿಯಾದ ಕ್ರಮದಲ್ಲಿ ಹಾಗೂ ಪ್ರಮಾಣದಲ್ಲಿ ಕೃಷಿಕನಿಗೆ ಒದಗಿಸಿ, ಬೆಳೆದ ಬೆಳೆಗೆ ಸರಿಯಾದ ಬೆಲೆ ದೊರಕಿದರೆ ಕೃಷಿಕನ ಬಾಳು ಮಾತ್ರವಲ್ಲ, ನೈಜ ಅರ್ಥದಲ್ಲಿ ರಾಷ್ಟ್ರದ ಬಾಳೂ ಹಸನಾದೀತು!

ಡಾ॥ ಎಸ್. ಆರ್. ಕೇಶವ
ಪ್ರಾಧ್ಯಾಪಕರು, ಅರ್ಥಶಾಸ್ತ್ರ ಸ್ನಾತಕೋತ್ತರ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬



# ಡಾ॥ ಬಿ. ಆರ್. ಅಂಬೇಡ್ಕರ್ ಹಾಗೂ ಕಾರ್ಲ್ ಮಾರ್ಕ್ಸ್ ತೌಲನಿಕ ಚಿಂತನೆಗಳು



**ಅಂಬೇಡ್ಕರ್ ಮತ್ತು ಕಾರ್ಲ್ ಮಾರ್ಕ್ಸ್‌ರಂಥ ಮಹಾನ್ ಚಿಂತಕರ ಕುರಿತು ತೌಲನಿಕವಾಗಿ ಇಂದು ಅಧ್ಯಯನ ಮಾಡುವ ಅವಶ್ಯಕತೆ ಇದೆ. ಆ ಹಿನ್ನೆಲೆಯಲ್ಲಿ ಅಂಬೇಡ್ಕರ್ ಹಾಗೂ ಮಾರ್ಕ್ಸ್‌ರವರ ಚಿಂತನೆಗಳಲ್ಲಿ ಸಹಮತ ಮತ್ತು ಭಿನ್ನಮತಗಳನ್ನು ಇಲ್ಲಿ ಪ್ರಸ್ತುತಪಡಿಸುತ್ತೇನೆ. ಯಾವುದೇ ಚಿಂತಕನ ಸ್ಮರಣೆಗೆ ಎರಡು ಆಯಾಮಗಳಿರುತ್ತವೆ. ಒಂದನೆಯದು : ಅವರ ಚಿಂತನೆ, ಹೋರಾಟ, ತ್ಯಾಗ ಬಲಿದಾನಗಳನ್ನು ಸ್ಮರಿಸುವ ಮೂಲಕ ಅವರನ್ನು ಗೌರವಿಸುವುದು. ಎರಡನೆಯದು : ಅವರ ಚಿಂತನೆ, ಆದರ್ಶ, ಮೌಲ್ಯಗಳನ್ನು ನಮ್ಮ ಬದುಕಿನಲ್ಲಿ ಸಾಧ್ಯವಾದಷ್ಟು ಮಟ್ಟಿಗೆ, ಅವಶ್ಯಕತೆಗೆ ಅನುಗುಣವಾಗಿ ಅಳವಡಿಸಿಕೊಳ್ಳಲು ಪ್ರಯತ್ನಿಸುವುದು. ಪ್ರಮುಖವಾದ ವಿಷಯವೆಂದರೆ ಮಾರ್ಕ್ಸ್ ಮತ್ತು ಅಂಬೇಡ್ಕರ್ ಇಬ್ಬರೂ ಶೀತಲಗೃಹ ಚಿಂತಕರಾಗಿರಲಿಲ್ಲ. ಯಾವುದೇ ಹವಾನಿಯಂತ್ರಿತ ಕೊಠಡಿಯಲ್ಲಿ ಕುಳಿತು, "ಹುಲುಮಾನವರೇ, ಇವು ನನ್ನ ಚಿಂತನೆಗಳು. ಅವುಗಳನ್ನು ತಿಳಿದುಕೊಂಡು ಪಾವನರಾಗಿ" ಅಂತ ಹೇಳಿದವರಲ್ಲ. ಅವರು ಚಿಂತಕರೂ ಹೌದು, ಚಳುವಳಿಗಾರರೂ ಹೌದು.**

ಇದು ಜಾಗತೀಕರಣ ಯುಗ. ಮಹಾರಾಷ್ಟ್ರದ ನೆಲದಲ್ಲಿ ಒಬ್ಬ ಅಸ್ಪೃಶ್ಯನಾಗಿ ಹುಟ್ಟಿದರೂ ಅಮೆರಿಕಾ, ಇಂಗ್ಲೆಂಡ್‌ಗಳಲ್ಲಿ ವಿದ್ಯಾಭ್ಯಾಸ ಮಾಡಿ ಅಲ್ಲಿ ಪಡೆದ ಜ್ಞಾನ ಮತ್ತು ಅನುಭವಗಳನ್ನು ತಾಯಿನಾಡಿನ ಬಿಡುಗಡೆಗಾಗಿ, ತನ್ನ ಜನಾಂಗದ ನೋವು ನಿವಾರಣೆಗಾಗಿ ಉಪಯೋಗಿಸಿ ದೇಶಕ್ಕಾಗಿಯೇ ಜೀವ ತೆತ್ತ ಬಾಬಾಸಾಹೇಬ್ ಅಂಬೇಡ್ಕರ್ ನಮಗೆ ಉತ್ತಮ ಮಾದರಿಯಾಗುತ್ತಾರೆ. ಅದು ಸ್ವಾತಂತ್ರ್ಯ ಹೋರಾಟದ ಸಂದರ್ಭದ ಮಾದರಿ. ಆದರೆ ಇಂದಿನ ನಮ್ಮ ಕ್ರೀಡಾ ಹಾಗೂ ಸಾಂಸ್ಕೃತಿಕ ರಾಯಭಾರಿಗಳು ನಮ್ಮ ನೆಲದಲ್ಲಿ ಬೆಳೆದು ಈ ನೆಲವನ್ನೇ, ಅಂದರೆ ಈ ದೇಶವನ್ನೇ ವಿದೇಶಿ ಕಂಪನಿಗಳ ಹಿತಾಸಕ್ತಿಗೆ ಪೂರಕವಾಗಿ ಜಾಹೀರಾತುಗಳ ಮೂಲಕ ನಮ್ಮ ಜನತೆಯನ್ನು ಪ್ರಭಾವಿಸುವ ಕೆಲಸ ಮಾಡುತ್ತಿದ್ದಾರೆ. ಇದು ಇಂದಿನ ಮಾದರಿ. ಇದನ್ನು ನಾನು ಸಾಂಸ್ಕೃತಿಕ ಜಾಗತೀಕರಣ ಎಂದು ಕರೆಯುತ್ತೇನೆ. ಜಾಗತೀಕರಣ ಸಂದರ್ಭದ ಬಹುರಾಷ್ಟ್ರೀಯ ಕಂಪನಿಗಳ ಆರ್ಥಿಕ ನೀತಿಗೆ ಪೂರಕವಾಗಿ ಸಾಂಸ್ಕೃತಿಕ ಪರಿಕರಗಳ ಮೂಲಕ ಒಂದು ಗುಲಾಮಿ ಮನೋಸ್ಥಿತಿಯನ್ನು ನಮ್ಮ ನಾಗರಿಕರಲ್ಲಿ ಬಿತ್ತುವುದೇ ಈ ಸಾಂಸ್ಕೃತಿಕ ಜಾಗತೀಕರಣ ಮಾಡುವ ಘಾತುಕ ಕ್ರಿಯೆ. ಇಲ್ಲಿ ಕಾರ್ಲ್ ಮಾರ್ಕ್ಸ್ ಅವರ ಒಂದು ಮಾತನ್ನು ನೆನಪಿಸಲು ಬಯಸುತ್ತೇನೆ. ಆ ಮಾತನ್ನು ಬಹಳ ಜನ ಮಾರ್ಕ್ಸ್‌ವಾದಿ ವಿರೋಧಿ ಚಿಂತಕರು ಲೇವಡಿ ಮಾಡಿದ್ದಾರೆ. ಅದು 'ಅಡಿಪಾಯ ಮತ್ತು ಮೇಲ್ಸ್ತರ'ಯ ಪರಿಕಲ್ಪನೆ. ಯಾವುದೇ, ಸಾಮಾಜಿಕ ವ್ಯವಸ್ಥೆಯಲ್ಲಿ 'ಆರ್ಥಿಕತೆ' ಎನ್ನುವುದು ಅಡಿಪಾಯವಾಗುತ್ತದೆ. ಅದಕ್ಕೆ ಅನುಗುಣವಾಗಿ ಮೇಲ್ಸ್ತರನಲ್ಲಿ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂರಚನೆಗಳು, ಸಂಬಂಧಗಳು, ರೂಪುಗೊಳ್ಳುತ್ತವೆ ಎನ್ನುವುದು ಮಾರ್ಕ್ಸ್ ಅವರ ಅಡಿಪಾಯ ಪರಿಕಲ್ಪನೆಯ ತಾತ್ಪರ್ಯ. ಇಲ್ಲಿ ಅಡಿಪಾಯ, ಮೇಲ್ಸ್ತರ, ಇವೆರಡರಲ್ಲಿ ಯಾವುದು ಪ್ರಮುಖ, ಯಾವುದು ಅಮುಖ್ಯ ಎಂಬ ಪ್ರಶ್ನೆ ಬರುವುದಿಲ್ಲ. ಇವು ಒಂದನ್ನೊಂದು ಪ್ರಭಾವಿಸುತ್ತ, ರಕ್ಷಿಸುತ್ತ, ಬೆಳೆಸುತ್ತ ಹೋಗುತ್ತವೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕು. ಆರ್ಥಿಕ ವ್ಯವಸ್ಥೆಯು ತನ್ನದೇ ಆದ, ತನ್ನ ವಿಕಾಸಕ್ಕೆ ಪೂರಕವಾದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ವ್ಯವಸ್ಥೆಯನ್ನು ಮೇಲ್ಸ್ತರಯಲ್ಲಿ ಹುಟ್ಟುಹಾಕುತ್ತದೆ. ಈ ಮೇಲ್ಸ್ತರ ವ್ಯವಸ್ಥೆ ಮೂಲ ಆರ್ಥಿಕ ವ್ಯವಸ್ಥೆಯನ್ನು ಸ್ಥಿರಗೊಳಿಸುವ ನಿಟ್ಟಿನಲ್ಲಿ ನಿರಂತರವಾಗಿ ಕೆಲಸ ಮಾಡುತ್ತದೆ. ಇಂದು ನಮ್ಮ ಹಲವಾರು ಕ್ರೀಡಾ ರಾಯಭಾರಿಗಳು, ಸಾಂಸ್ಕೃತಿಕ ರಾಯಭಾರಿಗಳು, ಶಿಕ್ಷಣ ತಜ್ಞರು ಆರ್ಥಿಕ ಜಾಗತೀಕರಣದ ರಾಯಭಾರಿಗಳಾಗಿ ಸಾಂಸ್ಕೃತಿಕ ಜಾಗತೀಕರಣದ ಜವಾಬ್ದಾರಿಯನ್ನು ನಿಭಾಯಿಸುತ್ತಿದ್ದಾರೆ. ಇವರು ಬಹುರಾಷ್ಟ್ರೀಯ ಕಂಪನಿಗಳಿಂದ ಹಣ ಪಡೆದು, ಈ ದೇಶದ ಜನ ಬಹುರಾಷ್ಟ್ರೀಯ ಕಂಪನಿಗಳ ಉತ್ಪನ್ನಗಳಿಗೆ ಉತ್ತಮ ಗಿರಾಕಿಗಳಾಗಲು ಮಾನಸಿಕ ತಯಾರಿಯನ್ನುಂಟುಮಾಡುವಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ. ಇದು ಸಾಂಸ್ಕೃತಿಕ ಜಾಗತೀಕರಣ. ಕಾರ್ಲ್ ಮಾರ್ಕ್ಸ್ ಅವರು ಹೇಳಿದ ಅಡಿಪಾಯ ಮತ್ತು ಮೇಲ್ಸ್ತರನ ಚಿಂತನೆಗಳು ಇಂದು ನಮ್ಮ ಸಮಾಜದಲ್ಲಿ ಮೂರ್ತರೂಪದಲ್ಲಿ ಗೋಚರವಾಗುತ್ತಿವೆ. ಈ ಹಿನ್ನೆಲೆಯಿಂದ ನಾನು ಅಂಬೇಡ್ಕರ್ ಮತ್ತು ಮಾರ್ಕ್ಸ್ ಅವರ ಸಮಾನ ಆಶಯಗಳ ಕುರಿತು ನನ್ನ ಅಭಿಪ್ರಾಯಗಳನ್ನು ನೋಡುತ್ತೇನೆ.

ಡಾ॥ ಸಿದ್ದನಗೌಡ ಪಾಟೀಲ

ಅಂಬೇಡ್ಕರ್ ಮತ್ತು ಕಾರ್ಲ್ ಮಾರ್ಕ್ಸ್‌ರಂಥ ಮಹಾನ್ ಚಿಂತಕರ ಕುರಿತು ತೌಲನಿಕವಾಗಿ ಇಂದು ಅಧ್ಯಯನ ಮಾಡುವ ಅವಶ್ಯಕತೆ ಇದೆ. ಆ ಹಿನ್ನೆಲೆಯಲ್ಲಿ ಅಂಬೇಡ್ಕರ್ ಹಾಗೂ ಮಾರ್ಕ್ಸ್‌ರವರ ಚಿಂತನೆಗಳಲ್ಲಿ ಸಹಮತ ಮತ್ತು ಭಿನ್ನಮತಗಳನ್ನು ಇಲ್ಲಿ ಪ್ರಸ್ತುತಪಡಿಸುತ್ತೇನೆ. ಯಾವುದೇ ಚಿಂತಕನ ಸ್ಮರಣೆಗೆ ಎರಡು ಆಯಾಮಗಳಿರುತ್ತವೆ. ಒಂದನೆಯದು : ಅವರ ಚಿಂತನೆ, ಹೋರಾಟ, ತ್ಯಾಗ ಬಲಿದಾನಗಳನ್ನು ಸ್ಮರಿಸುವ ಮೂಲಕ ಅವರನ್ನು ಗೌರವಿಸುವುದು. ಎರಡನೆಯದು : ಅವರ ಚಿಂತನೆ,

ಆದರ್ಶ, ಮೌಲ್ಯಗಳನ್ನು ನಮ್ಮ ಬದುಕಿನಲ್ಲಿ ಸಾಧ್ಯವಾದಷ್ಟು ಮಟ್ಟಿಗೆ, ಅವಶ್ಯಕತೆಗೆ ಅನುಗುಣವಾಗಿ ಅಳವಡಿಸಿಕೊಳ್ಳಲು ಪ್ರಯತ್ನಿಸುವುದು. ಪ್ರಮುಖವಾದ ವಿಷಯವೆಂದರೆ ಮಾರ್ಕ್ಸ್ ಮತ್ತು ಅಂಬೇಡ್ಕರ್ ಇಬ್ಬರೂ ಶೀತಲಗೃಹ ಚಿಂತಕರಾಗಿರಲಿಲ್ಲ. ಯಾವುದೋ ಹವಾನಿಯಂತ್ರಿತ ಕೊಠಡಿಯಲ್ಲಿ ಕುಳಿತು, "ಹುಲುಮಾನವರೇ, ಇವು ನನ್ನ ಚಿಂತನೆಗಳು. ಅವುಗಳನ್ನು ತಿಳಿದುಕೊಂಡು ಪಾವನರಾಗಿ" ಅಂತ ಹೇಳಿದವರಲ್ಲ. ಅವರು ಚಿಂತಕರೂ ಹೌದು, ಚಳುವಳಿಗಾರರೂ ಹೌದು. ಚಿಂತನೆಯಿಂದ ಚಟುವಟಿಕೆ ಮತ್ತು ಚಟುವಟಿಕೆಯಿಂದ ಚಿಂತನೆ ನಡೆಸಿ ಅಪಾರವಾದ ಅನುಭವವನ್ನು ಪಡೆದವರು. ಚಿಂತನೆ ಮತ್ತು ಚಳುವಳಿಗಳ ನಡುವಿನ ಕೊಡುಕೊಳ್ಳುವಿಕೆಯಿಂದ ಪಡೆದ ಜ್ಞಾನವನ್ನು ಅವರು ನಮ್ಮ ಮುಂದಿಟ್ಟು ಹೋಗಿದ್ದಾರೆ. ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರು ಬದುಕಿದ ಸಂದರ್ಭವನ್ನು ನಾವು ಗಮನಿಸಬೇಕು. ಅವರು ಸಮಾಜದ ಪ್ರಮುಖ ಸ್ಥಿತ್ಯಂತರ ಸಂದರ್ಭದಲ್ಲಿ ಬದುಕಿದವರು. ಮಾರ್ಕ್ಸ್ ಯುರೋಪ್‌ನಲ್ಲಿ ಊಳಿಗಮಾನ್ಯ ವ್ಯವಸ್ಥೆಯಿಂದ ಬಿಡುಗಡೆಗೊಳ್ಳುತ್ತ ಬಂಡವಾಳಶಾಹಿ ವ್ಯವಸ್ಥೆ ಘನೀಕರಣಗೊಳ್ಳುವ ಸಾಮಾಜಿಕ ಸಂದರ್ಭದಲ್ಲಿ ಬದುಕಿದ್ದರೆ, ನಮ್ಮಲ್ಲಿ ವಸಾಹತು ವ್ಯವಸ್ಥೆಯಿಂದ ಆಂದೋಲನಗಳ ಮೂಲಕ ಸ್ವಾತಂತ್ರ್ಯ ಪಡೆಯುವ ಸಂದರ್ಭದಲ್ಲಿ, ಅದರ ಭಾಗವಾಗಿ ಅಂಬೇಡ್ಕರ್ ಬದುಕಿದ್ದರು. ಅಲ್ಲಿ ಶೋಷಣೆಗೊಳಗಾದ ದುಡಿವ ವರ್ಗ ಮಾರ್ಕ್ಸ್‌ರವರ ಕಾಳಜಿಯಾಗಿದ್ದರೆ ಇಲ್ಲಿ ದುಡಿವ ವರ್ಗ, ಜೊತೆಗೆ ಅಸ್ಪೃಶ್ಯತೆಯಿಂದ ಬಳಲುತ್ತಿರುವ ವರ್ಗದ ಕುರಿತ ಕಾಳಜಿಗಳು ಅಂಬೇಡ್ಕರ್ ಮುಂದಿದ್ದವು. ಮಾರ್ಕ್ಸ್ ಅಂಥ ಸಂದರ್ಭದಲ್ಲಿ ಒಂದು ಮಾತನ್ನು ಹೇಳುತ್ತಾರೆ : "ತತ್ವಶಾಸ್ತ್ರಜ್ಞರು ಈ ಜಗತ್ತಿಗೆ ವಿಧವಿಧವಾದ ವ್ಯಾಖ್ಯಾನವನ್ನು ನೀಡಿದ್ದಾರೆ. ಆದರೆ ಇದನ್ನು ಬದಲಾಯಿಸಬೇಕು ಎಂಬುದು ಮುಖ್ಯ." ಹೀಗೆ ಈಗಿನ ಸಮಾಜವನ್ನು ಇನ್ನೂ ಉನ್ನತ ಮಟ್ಟಕ್ಕೆ ಕೊಂಡೊಯ್ಯುವ ಮಾರ್ಗದ ಕುರಿತು ಮಾರ್ಕ್ಸ್ ಚಿಂತಿಸುತ್ತಾರೆ. ಈ ನಿಟ್ಟಿನಲ್ಲಿ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಗುರಿ ಒಂದೇ ಆಗಿತ್ತು ಆದರೆ ಮಾರ್ಗ ಭಿನ್ನವಾಗಿತ್ತು, ಆಶಯದಲ್ಲಿ ಯಾವುದೇ ಭಿನ್ನತೆ ಇರಲಿಲ್ಲ. ಆದರೆ ನಮ್ಮಲ್ಲಿ ಕೆಲವು ವಿದ್ವಾಂಸರು ದುರುದ್ದೇಶದಿಂದ ಮಾರ್ಕ್ಸ್ ಮತ್ತು ಅಂಬೇಡ್ಕರ್ ಚಿಂತನೆಗಳ ಮಧ್ಯೆ ಕಂದಕವನ್ನು ಸೃಷ್ಟಿಸಿದ್ದಾರೆ. ನಮ್ಮ ರಾಜ್ಯದಲ್ಲಿ ಎಪ್ಪತ್ತರ ದಶಕದವರೆಗೂ ಅಂಥ ಕಂದಕಗಳಿರಲಿಲ್ಲ. ಕವಿ ಸಿದ್ಧಲಿಂಗಯ್ಯ, ಕೆ. ರಾಮಯ್ಯ ಮುಂತಾದವರು ಬರೆದ ಆ ಸಂದರ್ಭದ ಹೋರಾಟದ ಹಾಡುಗಳೇ ಇದಕ್ಕೆ ಸಾಕ್ಷಿ. ಆದರೆ ಎಂಬತ್ತರ ದಶಕದ ನಂತರ ಮಾರ್ಕ್ಸ್ ಮತ್ತು ಅಂಬೇಡ್ಕರ್ ಇಬ್ಬರನ್ನೂ ಎದಿರುಬದಿರಾಗಿ ನಿಲ್ಲಿಸುವ ಹುನ್ನಾರಗಳು ನಡೆದಿವೆ. "ಮಾರ್ಕ್ಸ್ ಕೇವಲ ಆರ್ಥಿಕ ವ್ಯವಸ್ಥೆ ಕುರಿತು ಮಾತಾಡ್ತಾರೆ, ನಮ್ಮದು ವರ್ಣಾಶ್ರಮ ವ್ಯವಸ್ಥೆಯ ಸಮಾಜ, ಮಾರ್ಕ್ಸ್ ನಮ್ಮ ದೇಶಕ್ಕೆ ಅಪ್ರಸ್ತುತ" ಎಂಬ ವಾದಸರಣಿ ಬೆಳೆಯುತ್ತ ಬಂದು ಕಮ್ಯುನಿಸ್ಟ್ ಚಳುವಳಿ ಮತ್ತು ದಲಿತ ಚಳುವಳಿಯ ಮಧ್ಯೆ ಇರಬೇಕಾದ ಅಂತರ್ ಸಂಬಂಧವನ್ನು ಕಡಿದುಹಾಕುವ ಕುತಂತ್ರಗಳು ನಡೆದಿವೆ. ಸ್ವಾವಲಂಬನೆ ಮತ್ತು ಸ್ವಾಭಿಮಾನ ಎರಡೂ ಅಂಶಗಳು ಅಂಬೇಡ್ಕರ್ ಅವರ ಪ್ರಧಾನ ಆಶಯಗಳಾಗಿದ್ದವು. ಆದರೆ ಸ್ವಾವಲಂಬನೆ ಮತ್ತು ಸ್ವಾಭಿಮಾನಗಳ ಮಧ್ಯೆ ವೈರುಧ್ಯ ಸೃಷ್ಟಿಸುವ ಕೃತ್ಯ ಕೆಲವು ಬುದ್ಧಿಜೀವಿಗಳಿಂದ ನಡೆದಿದೆ. ಮುಂಬೈನ ವಿಧಾನ ಪರಿಷತ್ತಿನಲ್ಲಿ ೧೯೨೮ರಲ್ಲಿ ಚಿಕ್ಕ ಹಿಡುವಳಿದಾರರ ಸಮಸ್ಯೆ ಕುರಿತು ಸದನದಲ್ಲಿ ಮಾತನಾಡುವಾಗ "ಸಾಮಾಜಿಕವಾಗಿ ಸ್ವತಂತ್ರರಲ್ಲದಿದ್ದರೂ ಆರ್ಥಿಕವಾಗಿ ಜನ ಸ್ವತಂತ್ರರಿರಲಿ" ಎಂದು ಅಂಬೇಡ್ಕರ್ ಹೇಳುತ್ತಾರೆ. ಹಾಗಂತ ಅಂಬೇಡ್ಕರ್ ಸಾಮಾಜಿಕ ಸ್ವಾತಂತ್ರ್ಯವನ್ನು ಬಯಸಿರಲಿಲ್ಲ ಎಂದು ಅರ್ಥವಲ್ಲ. ಹಾಗೇ ಕಮ್ಯುನಿಸ್ಟ್ ಪಕ್ಷದ ಕ್ರಾಂತಿಯಿಂದ 'ಶ್ರಮಜೀವಿಗಳು ತಮ್ಮ ದಾಸ್ಯ ಶೃಂಖಲೆಗಳನ್ನಲ್ಲದೇ ಬೇರೇನನ್ನೂ ಕಳೆದುಕೊಳ್ಳುವುದಿಲ್ಲ. ಆದರೆ ಗಳಿಸಲು ಅವರ ಮುಂದೆ ಜಗತ್ತೇ ಇದೆ' ಎಂದು ಮಾರ್ಕ್ಸ್, ಏಂಗೆಲ್ಸ್‌ರು ತಾವು ರಚಿಸಿದ ಕಮ್ಯುನಿಸ್ಟ್ ಪಾರ್ಟಿಯ ಪ್ರಣಾಳಿಕೆಯ ಕೊನೆಯ ಸಾಲುಗಳಲ್ಲಿ ಹೇಳುತ್ತಾರೆ. ಹೀಗೆ ಹೇಳಿ 'ಎಲ್ಲ ದೇಶಗಳ ಶ್ರಮಜೀವಿಗಳೇ ಒಂದಾಗಿರಿ' ಎಂದು ಕರೆ ಕೊಡುತ್ತಾರೆ. ಆ ಮಾತು ಭಾರತದ ಶ್ರಮಜೀವಿ ವರ್ಗಕ್ಕೂ, ಅದರಲ್ಲೂ ಶ್ರಮಜೀವಿ ವರ್ಗವೇ ಆದ ದಲಿತರಿಗೂ ಅನ್ವಯಿಸುತ್ತದೆ. ಭಾರತದ ದಲಿತರು ಅನುಭವಿಸುತ್ತಿರುವ ಜಾತಿದಾಸ್ಯವನ್ನೂ ಅದು ಒಳಗೊಳ್ಳುತ್ತದೆ. ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಆಶಯಗಳ ಮಧ್ಯೆ ಕಂದಕ ನಿರ್ಮಿಸುವವರು ಇತಿಹಾಸವನ್ನು ತಿರುಚಬಾರದು. ವರ್ತಮಾನದಲ್ಲಿ ನಿಂತು ಇತಿಹಾಸವನ್ನು ನೋಡಿ ಭವಿಷ್ಯವನ್ನು ರೂಪಿಸುವ ದೊಡ್ಡ ಜವಾಬ್ದಾರಿ ಮಾರ್ಕ್ಸ್‌ವಾದಿ ಮತ್ತು ಅಂಬೇಡ್ಕರ್‌ವಾದಿ ಚಿಂತಕರ ಮೇಲಿದೆ. ಇತಿಹಾಸದ ಮೆಲಕುಗಳು ಭವಿಷ್ಯಕ್ಕೆ ಬೆಳಕಾಗಬೇಕೇ ಹೊರತು ಬೆಂಕಿಯಾಗಬಾರದು. ಈ ಎಚ್ಚರ ಸಮತಾ ಸಮಾಜ ನಿರ್ಮಿಸುವ ಕನಸು ಹೊತ್ತ ಎಲ್ಲ ಚಿಂತಕರಿಗೂ, ಚಳುವಳಿಗಾರರಿಗೂ ಇರಬೇಕು. ಅಂಬೇಡ್ಕರ್ ಅವರಿಗೆ ಮಾರ್ಕ್ಸ್‌ವಾದದ ಕುರಿತು ಪ್ರಮುಖ ಅಂಶಗಳಲ್ಲಿ ಸಹಮತವಿದ್ದರೂ ಅವರ ಸಮಕಾಲೀನ ಸಂದರ್ಭದ ಮಾರ್ಕ್ಸ್‌ವಾದಿಗಳ ಕುರಿತು, ಕಮ್ಯುನಿಸ್ಟ್ ಪಕ್ಷದ ಕುರಿತು ಹಲವಾರು ಭಿನ್ನಮತಗಳಿದ್ದವು ಎಂಬುದು ಸತ್ಯ. ಮೊದಲ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷದ ಜೊತೆ ಚುನಾವಣೆ ಹೊಂದಾಣಿಕೆ ಮಾಡಿಕೊಳ್ಳಲು ಅಂಬೇಡ್ಕರ್ ಅವರು ಒಪ್ಪಲಿಲ್ಲ. ಪಿ.ಎಸ್.ಪಿ. ಜೊತೆ ಚುನಾವಣಾ ಮೈತ್ರಿ ಮಾಡಿಕೊಂಡ ಅಂಬೇಡ್ಕರ್ ಕಮ್ಯುನಿಸ್ಟ್ ಪಕ್ಷದಿಂದ ದೂರ ಉಳಿಯುತ್ತಾರೆ. ಅಂಬೇಡ್ಕರ್ ಅವರು ೧೯೩೦ರಲ್ಲಿ ಮೊದಲು ಆರಂಭಿಸಿದ ಪಕ್ಷದ ಹೆಸರೇ 'ಸ್ವತಂತ್ರ ಕಾರ್ಮಿಕ ಪಕ್ಷ.' ಪೂನಾ ಒಪ್ಪಂದದ ನಂತರ ಸ್ವಲ್ಪ ಕಾಲ ಅಂಬೇಡ್ಕರ್ ಕಾರ್ಮಿಕ ಸಂಘಟನೆಗಳನ್ನು ಕಟ್ಟುತ್ತಾರೆ. ಕಮ್ಯುನಿಸ್ಟರ ಜೊತೆ ಆ ಸಂದರ್ಭದಲ್ಲಿ ಚಳುವಳಿಗಳಲ್ಲಿ ತೊಡಗುತ್ತಾರೆ. ಆ ಸಂದರ್ಭದಲ್ಲಿಯೇ ಅವರಿಗೆ ಕಮ್ಯುನಿಸ್ಟ್ ಪಕ್ಷದ ಜೊತೆ ಹಲವು ಭಿನ್ನಾಭಿಪ್ರಾಯಗಳು ಬರುತ್ತವೆ. ಭಾರತ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಕಾರ್ಯಾಲಯ ಆಗ ಮುಂಬೈನಲ್ಲಿತ್ತು. ವೈಯಕ್ತಿಕವಾಗಿ ಮತ್ತು ಪತ್ರಗಳ ಮುಖೇನ ಹಲವಾರು ಸಂವಾದಗಳು ಅಂಬೇಡ್ಕರ್ ಹಾಗೂ ಕಮ್ಯುನಿಸ್ಟ್ ನಾಯಕರಾಗಿದ್ದ ಎಸ್. ಎ. ಡಾಂಗೆ, ಪಿ. ಸಿ. ಜೋಶಿ ಮುಂತಾದವರ ನಡುವೆ ಜರುಗಿವೆ. ಮುಂಬೈ ಪ್ರಾಂತೀಯ ಸರಕಾರದಲ್ಲಿ ಅಂಬೇಡ್ಕರ್ ಮೇಲ್ಮನೆ ಸದಸ್ಯರಾಗಿ ನೇಮಕಗೊಂಡ ನಂತರ ಕಾರ್ಮಿಕ ಸಂಘಟನೆಗಳಿಂದ ದೂರವಾದರು. ಕಾರ್ಮಿಕರನ್ನು ಸಂಘಟಿಸುವ ಸಂದರ್ಭದಲ್ಲಿ ವ್ಯಕ್ತಿಗತವಾದ, ಸಾಂದರ್ಭಿಕ ಭಿನ್ನಮತಗಳು ಅಂಬೇಡ್ಕರ್ ಅವರು ಕಮ್ಯುನಿಸ್ಟ್ ಪಕ್ಷದಿಂದ ದೂರವಿರಲು ಕಾರಣವಾಗಿರಬಹುದು. ಇಂಥ ಒಂದು ಉದಾಹರಣೆಯನ್ನು ತಮ್ಮ ಬದುಕಿನ ಕೊನೆಯ ದಿನಗಳನ್ನು ಬೆಂಗಳೂರಿನಲ್ಲಿ ಕಳೆದ ಮುನಿರತ್ನಂ ಎಂಬ ಹಿರಿಯ ಕಾರ್ಮಿಕ ನಾಯಕ ನನಗೆ ವಿವರಿಸಿದ್ದರು. ಮುನಿರತ್ನಂ ಸ್ವಾತಂತ್ರ್ಯ ಪೂರ್ವದಲ್ಲಿ ಮುಂಬೈ ಜವಳಿ ಗಿರಣಿ ಕಾರ್ಮಿಕರಾಗಿದ್ದವರು. ಕೆಲವು ಜವಳಿ ಗಿರಣಿಗಳ ಕ್ಯಾಂಟೀನ್‌ಗಳಲ್ಲಿ ಹಿಂದೂ ಚಾಯ್, ಹರಿಜನ ಚಾಯ್, ಮುಸ್ಲಿಂ ಚಾಯ್ ಎಂದು ಪ್ರತ್ಯೇಕ ಕೌಂಟರ್‌ಗಳಿದ್ದುವಂತೆ. ಕೆಲವು ದಲಿತ ನಾಯಕರು ಈ ವ್ಯವಸ್ಥೆಯ ವಿರುದ್ಧ ಹೋರಾಡಲು ಸ್ಥಳೀಯ ಟ್ರೇಡ್ ಯೂನಿಯನ್ ನಾಯಕರಿಗೆ ಹೇಳಿದಾಗ ಅವರು ಅದನ್ನು ಒಪ್ಪಲಿಲ್ಲ. ಕಾರಣ ಇದು ಕಾರ್ಮಿಕರ ಮಧ್ಯೆಯೇ ಅಂತರ್ ಸಂಘರ್ಷವನ್ನುಂಟುಮಾಡುತ್ತಿತ್ತು ಎಂಬುದು. ಮಾಲೀಕರು ಇಂಥ ಸಂಘರ್ಷವನ್ನು ಹುಟ್ಟುಹಾಕಿ ಕಾರ್ಮಿಕ ಸಂಘಟನೆಗಳನ್ನು ಮುರಿಯುವ ಪಿತೂರಿ ಹೂಡುತ್ತಿದ್ದರು. ಇಂಥ ಸಾಂದರ್ಭಿಕ ಭಿನ್ನತೆಗಳು ಹಲವಾರು ಬಾರಿ ತಾತ್ವಿಕ ಭಿನ್ನಾಭಿಪ್ರಾಯಕ್ಕೆ ಕಾರಣವಾಗುತ್ತಿದ್ದವು. ಚಳುವಳಿಯ ಸಂದರ್ಭದಲ್ಲಿ ಹಲವಾರು ಭಿನ್ನಾಭಿಪ್ರಾಯಗಳು, ಟೀಕೆಗಳು ಬರುವುದು ಸಹಜ. ಸ್ವತಃ ಬುದ್ಧನ ಮೇಲೆಯೇ ಆರೋಪಗಳಿದ್ದವು. ಬುದ್ಧನ ಸಂಘದಲ್ಲಿ ತಪುಸ್ಸಾ, ಭಲ್ಲಿಕಾ ಎಂಬ



ವ್ಯಾಪಾರಿಗಳಿದ್ದರು, ಯಸ ಎಂಬ ಶ್ರೀಮಂತನಿದ್ದ, ಅವರು ಹೆಚ್ಚಿನ ಸೌಲಭ್ಯ ಪಡೆಯುತ್ತಿದ್ದರು ಎಂಬ ಆರೋಪಗಳಿದ್ದವು. ಅದೇ ಸಂದರ್ಭದಲ್ಲಿ ಉಪಾಲಿ ಎಂಬ ನಾವಿಂದ ಬುದ್ಧನ ನಂತರ ಪ್ರಮುಖನಾಗಿದ್ದ ಎಂಬುದನ್ನೂ ಗಮನಿಸಬೇಕು. ಬಸವಣ್ಣನವರನ್ನು ಬ್ರಾಹ್ಮಣ ಎಂದು ಟೀಕಿಸಿದಾಗ 'ಮಾದಾರ ಚನ್ನಯ್ಯನ ಮಗ ನಾನು', 'ಶರಣರ ದಾಸ–ದಾಸಿಯರ ಅಕ್ರಮಕೂಟಕ್ಕೆ ಹುಟ್ಟಿದವನು' ಎಂದು ತಮ್ಮನ್ನು ತಾವೇ ಕೆಳವರ್ಣೀಕರಣಗೊಳಿಸಿಕೊಂಡು ಸ್ಪಷ್ಟೀಕರಣ ನೀಡಿದ್ದಾರೆ. ಅಂಬೇಡ್ಕರ್ ಅವರು ದುಂಡುಮೇಜಿನ ಸಭೆ ಮತ್ತು ಸೈಮನ್ ಕಮಿಶನ್‌ನಲ್ಲಿ ಭಾಗವಹಿಸಿದಾಗ ಅವರು ಬ್ರಿಟಿಷರ ಪರ ಎಂಬ ಟೀಕೆಗಳು ಬಂದವು. 'ಕ್ವಿಟ್ ಇಂಡಿಯಾ' ಚಳುವಳಿಯ ಸಂದರ್ಭದಲ್ಲಿ ಅಂಬೇಡ್ಕರ್ ಅವರ ಮೇಲೂ, ಕಮ್ಯುನಿಸ್ಟರ ಮೇಲೂ ಟೀಕೆಗಳು ಬಂದವು. ಇವೆಲ್ಲವನ್ನೂ ಅಂದಿನ ಸಂದರ್ಭದ ಹಿನ್ನೆಲೆಯಲ್ಲಿ ನೋಡಬೇಕೇ ಹೊರತು ಟೀಕೆಗಾಗಿ ಟೀಕೆ ಎಂಬರ್ಥದಲ್ಲಿ ನೋಡಬಾರದು. ಹಾಗೆಯೇ ಅಂಬೇಡ್ಕರ್ ಮತ್ತು ಅವರ ಸಮಕಾಲೀನ ಕಮ್ಯುನಿಸ್ಟ್ ನಾಯಕರ ನಡುವಿನ ಭಿನ್ನಾಭಿಪ್ರಾಯಗಳನ್ನು ಅಂದಿನ ಸಂದರ್ಭದ ಹಿನ್ನೆಲೆಯಲ್ಲಿ ನೋಡಬೇಕು. ಅಂಬೇಡ್ಕರ್ ಮಾರ್ಕ್ಸ್‌ವಾದಿಗಳ ಜೊತೆ ಭಿನ್ನಾಭಿಪ್ರಾಯ ಹೊಂದಿದ್ದರೂ ಅವರೊಬ್ಬ ಮಾರ್ಕ್ಸ್‌ವಾದಿಯಾಗಿದ್ದರು ಎಂಬುದಕ್ಕೆ ಮುಂಬೈ ಶಾಸನ ಸಭೆಯಲ್ಲಿ ಔದ್ಯಮಿಕ ವಿವಾದ ಮಸೂದೆ ಕುರಿತ ಚರ್ಚೆಯಲ್ಲಿ, "ಸ್ವಾತಂತ್ರ್ಯದ ಹಕ್ಕು ಎಂಬುದಕ್ಕೆ ಮುಷ್ಕರ ಎಂಬುದು ಇನ್ನೊಂದು ಹೆಸರು ಮಾತ್ರವಾಗುತ್ತದೆ" ಎಂದು ಕಾರ್ಮಿಕರ ಪರ ಮಾತನಾಡಿದ್ದು, ಖೋತಿ ವ್ಯವಸ್ಥೆಯ ವಿರುದ್ಧ ಹೋರಾಡಿ ಬಡರೈತರ ಪರ ನಿಂತದ್ದು, ಇಂಥ ಹಲವಾರು ಘಟನೆಗಳು ಸಾಕ್ಷಿಯಾಗುತ್ತವೆ. ಇದೇ ಸಂದರ್ಭದಲ್ಲಿ ಇನ್ನೂ ಒಂದು ಅಂಶವನ್ನು ಗಮನಿಸಬೇಕು. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದ ದಿನಗಳಲ್ಲಿ ವರ್ಗ ಹೋರಾಟಕ್ಕೆ ಹೆಚ್ಚು ಒತ್ತುಕೊಟ್ಟ ಕಮ್ಯುನಿಸ್ಟರು, ವರ್ಗ ಹೋರಾಟದಿಂದ ಆರ್ಥಿಕ–ರಾಜಕೀಯ ಬದಲಾವಣೆಗಳನ್ನು ತಂದಾಗ ವರ್ಣವ್ಯವಸ್ಥೆಯನ್ನು ಸಹಜವಾಗಿ ಬದಲಾಯಿಸಬಹುದು ಎಂದು ನಂಬಿದ್ದರು. ಇಂದು ಆ ನಂಬಿಕೆ ಹುಸಿಯಾಗಿದೆ. ಈಗ ಕಮ್ಯುನಿಸ್ಟರೂ ತಮ್ಮ ಪಕ್ಷದಲ್ಲಿಯೇ ದಲಿತ ವೇದಿಕೆಯನ್ನು ರಚಿಸಿ ವರ್ಗ ಸಂಘರ್ಷದ ಜೊತೆಗೆ ವರ್ಣಸಂಘರ್ಷದ ಕಾರ್ಯಕ್ರಮವನ್ನು ರೂಪಿಸಿದ್ದಾರೆ. ಇದಲ್ಲದೆ, ಭಾರತದ ವರ್ಣವ್ಯವಸ್ಥೆಯ ಕುರಿತು ಸಾಕಷ್ಟು ವಿದ್ವತ್‌ಪೂರ್ಣ ಕೃತಿಗಳು ಮಾರ್ಕ್ಸ್‌ವಾದಿಗಳಿಂದ ರಚನೆಯಾಗಿವೆ ಎಂಬುದನ್ನು ಗಮನಿಸಬೇಕು.

ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಬದುಕಿನ ಪಯಣವನ್ನು ಗಮನಿಸಿದರೆ ಹಲವಾರು ಸಾಮ್ಯತೆಗಳು ಕಂಡುಬರುತ್ತವೆ. ಮಾರ್ಕ್ಸ್ ೧೮೧೮ರಿಂದ ೧೮೮೩ರ ಅವಧಿಯಲ್ಲಿ ಬದುಕಿದ್ದರು. ಅವರ ನಂತರದ ಪೀಳಿಗೆಯವರಾಗಿ ಅಂಬೇಡ್ಕರ್ ೧೮೯೧ರಿಂದ ೧೯೫೬ರ ಅವಧಿಯಲ್ಲಿ ಬದುಕಿದ್ದರು. ಮಾರ್ಕ್ಸ್ ವಿದ್ಯಾಭ್ಯಾಸದ ಸಂದರ್ಭದಲ್ಲಿಯೇ ತಮ್ಮ ಲೇಖನಗಳಿಂದ ವ್ಯವಸ್ಥೆಯ ಕೆಂಗಣ್ಣಿಗೆ ಗುರಿಯಾದವರು. ಮುಂದೆ ತಾಯಿನಾಡು ಜರ್ಮನಿಯಿಂದ ಗಡೀಪಾರಾಗಿ ಪ್ಯಾರಿಸ್ ಬ್ರಸೆಲ್ಸ್, ಲಂಡನ್... ಹೀಗೆ ನಿರಾಶ್ರಿತರಾಗಿ ಕುಟುಂಬ ಸಹಿತ ವಿವಿಧ ದೇಶಗಳನ್ನು ಸುತ್ತುತ್ತಾರೆ. ಅಂಬೇಡ್ಕರ್ ಸ್ವಂತ ನೆಲದಲ್ಲಿಯೇ ಅಸ್ಪೃಶ್ಯರಾಗಿ ಅಲೆಯುತ್ತಾರೆ. ಬರೋಡ ಮಹಾರಾಜನ ಆಸ್ಥಾನದಲ್ಲಿ ಉನ್ನತ ಸ್ಥಾನದಲ್ಲಿದ್ದರೂ ವಾಸಕ್ಕೆ ಮನೆ ಸಿಗುವುದಿಲ್ಲ. ಕುಡಿವ ನೀರಿಗೂ ತೊಂದರೆ ಅನುಭವಿಸುತ್ತಾರೆ. ಉನ್ನತ ಸ್ಥಾನದಲ್ಲಿದ್ದರೂ ಅಸ್ಪೃಶ್ಯತೆಯ ಅನುಭವ ಅವರ ಕೆಳಗಿನ ಮೇಲುಜಾತಿ ಅಧಿಕಾರಿಗಳಿಂದಲೇ ಆಗುತ್ತದೆ. ಮಾರ್ಕ್ಸ್ (೧೮೪೨) ಆರಂಭದಲ್ಲಿ 'ರೈನಿಷ್ ಜೈತುಂಗ್' ಎಂಬ ಪತ್ರಿಕೆಯ ಮೂಲಕ ಸಾಮಾಜಿಕ ಚಳುವಳಿಗಿಳಿಯುತ್ತಾರೆ. ಅಂಬೇಡ್ಕರ್ ಅವರೂ 'ಮೂಕನಾಯಕ (೧೯೨೦)', 'ಬಹಿಷ್ಕೃತ ಭಾರತ (೧೯೨೭)' ಎಂಬ ಪತ್ರಿಕೆಗಳನ್ನು ಆರಂಭಿಸುತ್ತಾರೆ. ಮಾರ್ಕ್ಸ್ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ ಕಟ್ಟುತ್ತಾರೆ. ಅಂಬೇಡ್ಕರ್ ಸ್ವತಂತ್ರ ಕಾರ್ಮಿಕ ಪಕ್ಷವನ್ನು ಆರಂಭಿಸುವುದರ ಮೂಲಕ ರಾಜಕೀಯ ಹೋರಾಟ ನಡೆಸುತ್ತಾರೆ. ಎಂಗೆಲ್ಸ್ ಜೊತೆ ಸೇರಿ ಮಾರ್ಕ್ಸ್ ವಿಶ್ವವಿಖ್ಯಾತ ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆ ಸಿದ್ಧಪಡಿಸುತ್ತಾರೆ. ಅಂಬೇಡ್ಕರ್ ಸಂವಿಧಾನ ಸಮಿತಿ ಅಧ್ಯಕ್ಷರಾಗಿ ಭಾರತದ ಸಂವಿಧಾನ ಸಿದ್ಧಪಡಿಸುತ್ತಾರೆ. ಮಾರ್ಕ್ಸ್ ಮತ್ತು ಅಂಬೇಡ್ಕರ್ ಇಬ್ಬರೂ ಕಡುಬಡತನದ ಜೀವನ ನಡೆಸಿದ್ದಾರೆ. ಬಡತನದ ಕಾರಣಕ್ಕಾಗಿಯೇ ಕುಟುಂಬದ ಸದಸ್ಯರ ಸಾವುಗಳಲ್ಲಿ ಕೂಡ ಸಾಮ್ಯತೆಗಳಿವೆ.

## ಕಲಾವಿದ ಗಜಾನನ ಮಹಾಲೆ ನಿಧನ



ಧಾರವಾಡದ ಪ್ರಸಿದ್ಧ ಪ್ರಸಾಧನ ಕಲಾವಿದ ಗಜಾನನ ಮಹಾಲೆ ನಿಧನರಾಗಿದ್ದಾರೆ. ೮೪ ವರ್ಷದ ಗಜಾನನ ಮಹಾಲೆಯವರು ತಮ್ಮ ಬದುಕಿನ ಕೊನೆಯ ದಿನಗಳವರೆಗೂ ರಂಗಭೂಮಿಯಲ್ಲಿ ಕ್ರಿಯಾಶೀಲರಾಗಿದ್ದರು. ಧಾರವಾಡದ ಹಾಗೂ ರಾಜ್ಯದ ಬಹುತೇಕ ರಂಗ ತಂಡಗಳೊಂದಿಗೆ ನಿಕಟ, ಆತ್ಮೀಯ ಸಂಬಂಧ ಹೊಂದಿದ್ದ ಮಹಾಲೆ, ನಾಟಕ ತಂಡದೊಂದಿಗೆ ಬೆಂಗಳೂರಿಗೆ ಬಂದು ಮರಳಿ ಧಾರವಾಡಕ್ಕೆ ಹೋಗುವಾಗ ಹೃದಯಾಘಾತದಿಂದ ನಿಧನರಾಗಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದ ನಿರಂತರ ಕಾಯಕಜೀವಿ ಮಹಾಲೆಯವರ ನಿಧನಕ್ಕೆ 'ಹೊಸತು' ಸಂತಾಪ ವ್ಯಕ್ತಪಡಿಸುತ್ತದೆ. *–ಸಂ.*

ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಚಿಂತನೆಗಳಲ್ಲಿ ಸಹಮತವನ್ನು ಗುರ್ತಿಸುವುದು ಇಂದಿನ ಅವಶ್ಯಕತೆಯಾಗಿದೆ. ಈಗಾಗಲೇ ಹುಸಿ ಬುದ್ಧಿಜೀವಿಗಳು ಮಾರ್ಕ್ಸ್‌ವಾದಿಗಳ ಹಾಗೂ ಅಂಬೇಡ್ಕರ್‌ವಾದಿಗಳ ನಡುವೆ ಕಂದಕ ನಿರ್ಮಿಸಿರುವುದರಿಂದ ನಾನು ಅಂಬೇಡ್ಕರ್ ದೃಷ್ಟಿಕೋನದಲ್ಲಿಯೇ ಮಾರ್ಕ್ಸ್‌ನನ್ನು ಇಲ್ಲಿ ಪ್ರಸ್ತುತಪಡಿಸಲು ಇಚ್ಛಿಸುತ್ತೇನೆ. ಅಂಬೇಡ್ಕರ್ ಅವರು ಮಾರ್ಕ್ಸ್ ಕುರಿತು ಅಥವಾ ಕಮ್ಯುನಿಸಂ ಕುರಿತು ಹಲವಾರು ಸಂದರ್ಭದಲ್ಲಿ ವಿವಿಧ ರೀತಿಯ ವಿಶ್ಲೇಷಣೆಗಳನ್ನು ಕೊಟ್ಟಿದ್ದರೂ 'ಬುದ್ಧ ಅಥವಾ ಮಾರ್ಕ್ಸ್' ಎಂಬ ತಮ್ಮ ಲೇಖನದಲ್ಲಿ ಮಾರ್ಕ್ಸ್‌ನ ಮೂಲ ಚಿಂತನೆಗಳ ಕುರಿತು ತಮ್ಮ ಸಹಮತವನ್ನು ವ್ಯಕ್ತಪಡಿಸಿದ್ದಾರೆ. ಇತ್ತೀಚೆಗೆ ನನ್ನ ಒಂದು ಲೇಖನದಲ್ಲಿ ಅಂಬೇಡ್ಕರ್ ಅವರ ಈ ಲೇಖನದ ತಲೆಬರಹ 'ಬುದ್ಧ ಅಥವಾ ಮಾರ್ಕ್ಸ್' ಎಂಬುದನ್ನು 'ಬುದ್ಧ, ಮಾರ್ಕ್ಸ್ ಮತ್ತು ಅಂಬೇಡ್ಕರ್' ಎಂದು ಬದಲಾಯಿಸಿಕೊಂಡಿದ್ದೇನೆ. ಅಂಬೇಡ್ಕರ್ ಅವರು ಮಾರ್ಕ್ಸ್ ಅವರ ಮೂಲ ತತ್ವಗಳನ್ನು ಗ್ರಹಿಸಿ ತಮ್ಮ 'ಬುದ್ಧ ಅಥವಾ ಮಾರ್ಕ್ಸ್' ಲೇಖನದಲ್ಲಿ ಈ ಕೆಳಗಿನಂತೆ ದಾಖಲಿಸುತ್ತಾರೆ :

(೧) ತತ್ವಶಾಸ್ತ್ರದ ಮೂಲೋದ್ದೇಶ ಈ ವಿಶ್ವವನ್ನು ಪುನರ್ ರಚಿಸುವುದೇ ಹೊರತು ವಿಶ್ವದ ಹುಟ್ಟನ್ನು ಕುರಿತ ಸಿದ್ಧಾಂತಗಳ ವಿವರಣೆಯಲ್ಲಿ ಕಾಲ ಕಳೆಯುವುದಲ್ಲ.

(೨) ವರ್ಗ ವರ್ಗಗಳ ನಡುವಿನ ಹಿತಾಸಕ್ತಿಗಳ ಸಂಘರ್ಷ ನಡೆದಿದೆ.

(೩) ಖಾಸಗಿ ಆಸ್ತಿಯ ಮಾಲೀಕತ್ವ ಒಂದು ವರ್ಗಕ್ಕೆ ಅಧಿಕಾರವನ್ನೂ ಇನ್ನೊಂದು ವರ್ಗಕ್ಕೆ ಶೋಷಣೆಯ ಮೂಲಕ ದುಃಖವನ್ನೂ ತರುವುದಾಗಿದೆ.

(೪) ಆದ್ದರಿಂದ ಈ ದುಃಖವನ್ನು ನಿವಾರಿಸುವ ಸಲುವಾಗಿ ಖಾಸಗಿ ಆಸ್ತಿಯನ್ನು ತೆಗೆದುಹಾಕುವ ಮೂಲಕ, ಲೋಕದ ದುಃಖವನ್ನು ಶಮನ ಮಾಡುವುದು ಇಂದು ಅವಶ್ಯವಿದೆ.

ಮಾರ್ಕ್ಸ್‌ವಾದದ ಹಲವಾರು ಅಂಶಗಳ ಕುರಿತು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿಯೂ ಈ ಮೇಲಿನ ನಾಲ್ಕು ಅಂಶಗಳನ್ನು ದಾಖಲಿಸಿದ ಅಂಬೇಡ್ಕರ್ 'ಅವು ತುಂಬ ಮಹತ್ವವುಳ್ಳವಾಗಿವೆ ಎಂಬುದನ್ನು ಮರೆಯದಿರಬೇಕು' ಎಂಬ ಎಚ್ಚರಿಕೆಯನ್ನೂ ಕೊಡುತ್ತಾರೆ. ಮುಂದೆ ಬುದ್ಧ ಮತ್ತು ಮಾರ್ಕ್ಸ್‌ರ ಚಿಂತನೆಗಳ ತೌಲನಿಕ ಅಧ್ಯಯನಕ್ಕೆ ತೊಡಗುತ್ತಾರೆ. ಅಲ್ಲಿ ಮಾರ್ಕ್ಸ್ ಅವರ ಪ್ರಮುಖ ಚಿಂತನೆಗಳನ್ನು ಬುದ್ಧ ಭಾರತದಲ್ಲಿ ಆಗಲೇ ಹೇಳಿದ್ದ ಎನ್ನುವ ವಿಶ್ಲೇಷಣೆಗೆ ತೊಡಗುತ್ತಾರೆ. ಮಾರ್ಕ್ಸ್ ಮತ್ತು ಬುದ್ಧನ ಚಿಂತನೆಗಳ ನಡುವಿನ ಸಹಮತಗಳನ್ನು ಗುರ್ತಿಸಿದ ಅಂಬೇಡ್ಕರ್ ನೇಪಾಳದ ಕಠ್ಮಂಡುವಿನಲ್ಲಿ ನಡೆದ ಅಂತರರಾಷ್ಟ್ರೀಯ ಬೌದ್ಧ ಸಮ್ಮೇಳನದಲ್ಲಿ ಈ ಕೆಳಗಿನಂತೆ ಹೇಳುತ್ತಾರೆ :

"ಮೊದಲಿಗೆ, ಕಾರ್ಲ್ ಮಾರ್ಕ್ಸ್ ಬಡಜನತೆಯ ಶೋಷಣೆಯ ಬಗ್ಗೆ ಚರ್ಚಿಸುತ್ತ ತಮ್ಮ ಚಿಂತನೆಯನ್ನು ಮಂಡಿಸುತ್ತಾರೆ, ಬುದ್ಧ ಹೇಳಿದ್ದೇನು ? ಅವನೂ ೨೦೦೦ ಅಥವಾ ೨೫೦೦ ವರ್ಷಗಳಷ್ಟು ಹಿಂದೆಯೇ "ಈ ಜಗತ್ತಿನಲ್ಲಿ ದುಃಖ

ಎಂಬುದಿದೆ" ಎಂಬ ಇದೇ ಮಾತನ್ನು ಹೇಳಿದ್ದ." – ಇಲ್ಲಿ ಈ ಇಬ್ಬರು ಚಿಂತಕರೂ ಹೇಳಿರುವ ಮಾತುಗಳಲ್ಲಿರುವ ಸಾಮ್ಯತೆಯನ್ನು ಗಮನಿಸಬೇಕು. ಬುದ್ಧನ ಆರ್ಥಿಕ ಚಿಂತನೆಗಳ ಕುರಿತು ಪ್ರಸ್ತಾಪಿಸುವ ಖ್ಯಾತ ಮಾರ್ಕ್ಸ್‌ವಾದಿ ಚಿಂತಕರಾದ ರಾಹುಲ್ ಸಾಂಕೃತ್ಯಾಯನ, "ಅವನು ಭಿಕ್ಖುಗಳು ಮತ್ತು ಭಿಕ್ಖುಣಿಯರ ಸಮುದಾಯದಲ್ಲಿ ಆರ್ಥಿಕ ಸಮತಾವಾದ ವ್ಯವಸ್ಥೆಯನ್ನು ಜಾರಿಗೆ ತಂದಿದ್ದ" ಎಂದು ಹೇಳುತ್ತಾರೆ. ಇದನ್ನೇ ಅಂಬೇಡ್ಕರ್ ಬುದ್ಧನ ಸಂಘದಲ್ಲಿನ ಆಂತರಿಕ ಆರ್ಥಿಕ ವ್ಯವಸ್ಥೆಯನ್ನು ವಿಶ್ಲೇಷಿಸುವಾಗ ಬುದ್ಧ ಇದನ್ನು ಆಗಲೇ ಜಾರಿಗೆ ತಂದಿದ್ದ ಎಂದು ಹೇಳುತ್ತಾರೆ. ಇಲ್ಲಿ ಬುದ್ಧನ ಧರ್ಮದ ಶಿಸ್ತುಗಳು, ನೀತಿಸಂಹಿತೆಗಳು ಸಂಘದೊಳಗೆ ಆಚರಣೆಯಲ್ಲಿ ಇದ್ದವು ಎಂಬುದನ್ನು ಗಮನಿಸಬೇಕು. ಹಾಗೇ ೧೨ನೇ ಶತಮಾನದಲ್ಲಿ 'ಕಾಯಕ ಮತ್ತು ದಾಸೋಹ' ಎಂಬ ಉತ್ಪಾದನೆ ಹಾಗೂ ಉಪಭೋಗದ ವ್ಯವಸ್ಥೆ ಶರಣ ಸಂಕುಲದಲ್ಲಿತ್ತು. ಅವು ಇಡೀ ಸಮಾಜದ ಅಥವಾ ಪ್ರಭುತ್ವವನ್ನೊಳಗೊಂಡ ಆಚರಣೆಗಳಾಗಿರಲಿಲ್ಲ. ಇಂಥ ಒಂದು ವ್ಯವಸ್ಥೆಯನ್ನು ಮನಃಪರಿವರ್ತನೆಯ ಮೂಲಕ ಜಾರಿಗೆ ತರಬೇಕೆಂಬುದು ಬುದ್ಧ ಮತ್ತು ಬಸವಣ್ಣನವರ ಚಿಂತನೆಯಾಗಿತ್ತು. ಇದು ಬುದ್ಧನಿಂದ ಪ್ರಭಾವಿತರಾದ ಅಂಬೇಡ್ಕರ್ ಅವರ ಚಿಂತನೆಯೂ ಆಗಿತ್ತು. ಇಲ್ಲಿ ಪರೋಕ್ಷವಾಗಿ ಗಾಂಧೀಜಿಯವರ ಅಹಿಂಸಾ ನೀತಿಯೂ ಪ್ರಭಾವ ಬೀರಿರುವ ಸಾಧ್ಯತೆಗಳಿವೆ. ಮಾರ್ಕ್ಸ್ ನಾಸ್ತಿಕನಾಗಿದ್ದ. ಅದೇ ರೀತಿ ಬುದ್ಧ ಸಹಿತ ನಾಸ್ತಿಕನೇ ಆಗಿದ್ದ. ಬೌದ್ಧಧರ್ಮ ದೇವರಿಲ್ಲದ ಧರ್ಮ. ಮಾರ್ಕ್ಸ್ ಧರ್ಮವನ್ನು, ಧರ್ಮದ ಪಾತ್ರವನ್ನು ನಿರಾಕರಿಸಿರಲಿಲ್ಲ. ಧರ್ಮವನ್ನು 'ಹೃದಯಹೀನ ಜಗತ್ತಿನ ಹೃದಯ' ಎಂದು ಮಾರ್ಕ್ಸ್ ಗುರುತಿಸಿದ್ದ. ಶೋಷಿತ ಜನತೆಗೆ ತಮ್ಮ ನೋವು ಸಂಕಟಗಳ ನಿವಾರಣೆಗೆ ಒಂದು ವ್ಯವಸ್ಥೆ, ವೇದಿಕೆ ಇಲ್ಲದೆ ಇರುವಾಗ ಶೋಷಿತರು ಧರ್ಮದ ಮೊರೆ ಹೋಗುತ್ತಾರೆ ಎಂಬುದು ಇದರ ತಾತ್ಪರ್ಯ. ಇಂಥ ಒಂದು ವೇದಿಕೆಯನ್ನು ಬುದ್ಧ, ಬಸವ ಶೋಷಿತ ಜನತೆಗೆ ಒದಗಿಸಿಕೊಟ್ಟಿದ್ದರು. ಆದರೆ ಶೋಷಣೆಯ ವ್ಯವಸ್ಥೆಯ ನಿರ್ಮೂಲನೆಗೆ ಅವರು ಆಯ್ದುಕೊಂಡ ಮಾರ್ಗ ಶೋಷಕರ ಮನಃಪರಿವರ್ತನೆ, ಅದೂ ಅಹಿಂಸಾ ಮಾರ್ಗದಿಂದ. ಇಂಥ ಬದಲಾವಣೆಯನ್ನು ಅಂಬೇಡ್ಕರ್ ಅವರೂ ಬಯಸಿದ್ದರು. ಅದಕ್ಕೇ ಅವರು ಮಾರ್ಕ್ಸ್‌ವಾದ ಹಿಂಸೆಯನ್ನು ಬೆಂಬಲಿಸುತ್ತದೆ, ಅದಕ್ಕೆ ತಮ್ಮ ಸಹಮತವಿಲ್ಲ ಎಂಬುದನ್ನು ಪ್ರತಿಪಾದಿಸುತ್ತಾರೆ. ಮನಃಪರಿವರ್ತನೆಯ ವಿಷಯ ಬಂದಾಗ ಮಾರ್ಕ್ಸ್ ಅವರ ಒಂದು ಹೇಳಿಕೆಯನ್ನು ಗಮನಿಸಬೇಕು : "ಸಮಾಜ ಕೇವಲ ಬೌದ್ಧಿಕ ಕಸರತ್ತಿನಿಂದ ಬದಲಾಗುವುದಿಲ್ಲ, ಏಕೆಂದರೆ ಅಲ್ಲಿ ಭೌತಿಕ ಹಿತಾಸಕ್ತಿಗಳಿವೆ." ಇಂಥ ಭೌತಿಕ ಹಿತಾಸಕ್ತಿಯನ್ನು ಒಂದು ವ್ಯವಸ್ಥೆಯ ಮೂಲಕ, ಪ್ರಭುತ್ವದ ಮೂಲಕ ಸ್ಥಾಪಿಸಲಾಗುತ್ತದೆ, ಮುಂದುವರಿಸಲಾಗುತ್ತದೆ. ಬುದ್ಧನ ಕಾಲದ ಎರಡು ಘಟನೆಗಳನ್ನು ಇಲ್ಲಿ ಗಮನಿಸಬಹುದು. ಕೊಲೆಪಾತಕಿಯಾದ ಅಂಗುಲಿಮಾಲಾನ ಮನಃಪರಿವರ್ತನೆಯನ್ನು ಬುದ್ಧ ಮಾಡಿದ ಘಟನೆ ಪ್ರಸಿದ್ಧವಾದದ್ದು. ಇನ್ನೊಂದು ಘಟನೆ ಬುದ್ಧನ ಜೀವಿತಾವಧಿಯಲ್ಲಿಯೇ ನಡೆದದ್ದು. ಕೋಸಲದ ರಾಜ ಪಸೇನದಿಯ ಮಗ ಬುದ್ಧನ ಬುಡಕಟ್ಟಿನ ಮೇಲೆ ಯುದ್ಧ ಮಾಡಿ ಬುದ್ಧನ ಬಂಧುಬಾಂಧವರನ್ನು ಕೊಲ್ಲುತ್ತಾನೆ. ಕಣ್ಣ ಮುಂದೆಯೇ ನಡೆದ ಈ ಹತ್ಯಾಕಾಂಡವನ್ನು ಮನಃಪರಿವರ್ತನೆಯಿಂದ ತಡೆಯುವುದು ಬುದ್ಧನಿಗೆ ಸಾಧ್ಯವಾಗುವುದಿಲ್ಲ. ಯಾಕೆಂದರೆ ಅಲ್ಲಿ ಒಂದು ಪ್ರಭುತ್ವದ, ವ್ಯವಸ್ಥೆಯ ಹಿತಾಸಕ್ತಿ ಇದೆ. ಅಂಗುಲಿಮಾಲಾ ಒಂದು ಪ್ರಭುತ್ವದ, ವ್ಯವಸ್ಥೆಯ ಪ್ರತಿನಿಧಿ ಅಲ್ಲ. ಅದೇ ರೀತಿ ಬಿಜ್ಜಳನ ಸೇನೆ ಬಸವಣ್ಣ ಹಾಗೂ ಶರಣರ ಮೇಲೆ ದಾಳಿ ಮಾಡುವಾಗ ಅಲ್ಲಿ ವ್ಯವಸ್ಥೆಯ ಹಿತಾಸಕ್ತಿ ಇತ್ತು. ಬುದ್ಧನ ಸಂದರ್ಭದಲ್ಲಿ ಸಾಮ್ರಾಜ್ಯದ ವಿಸ್ತರಣೆಯ ಹಿತಾಸಕ್ತಿ ಇದ್ದರೆ ಬಸವಣ್ಣನ ಸಂದರ್ಭದಲ್ಲಿ ಸಾಮ್ರಾಜ್ಯದ ರಕ್ಷಣೆಯ ಹಿತಾಸಕ್ತಿ ಇದೆ. ಅಷ್ಟೇ ಏಕೆ, ೧೯೩೬-೧೯೩೮ರಲ್ಲಿ ಸ್ಪೇನ್ ದೇಶದ ಮಹಾಚುನಾವಣೆಯಲ್ಲಿ ಗೆಲುವು ಪಡೆದಿದ್ದ ಕಮ್ಯುನಿಸ್ಟ್ ಪಕ್ಷಕ್ಕೆ ಅಧಿಕಾರ ಕೊಡದೆ ಮಿಲಿಟರಿ ಅಧಿಕಾರಿ ಫ್ರಾಂಕೋಗೆ ಅಧಿಕಾರ ಕೊಡಲಾಯಿತು. ಅಂಬೇಡ್ಕರ್ ಅವರು ಮೆಚ್ಚಿಕೊಂಡಿದ್ದ ಅಮೆರಿಕಾ ಹಾಗೂ ಬ್ರಿಟನ್ ರಾಜಕೀಯ ವ್ಯವಸ್ಥೆಯ ಪ್ರಭುತ್ವಗಳು ಜನರಿಂದ ಚುನಾಯಿಸಲ್ಪಟ್ಟ ಪಕ್ಷದ ಜೊತೆಗಿರದೆ ಮಿಲಿಟರಿ ಅಧಿಕಾರಿ ಫ್ರಾಂಕೋ ಪರವಾಗಿದ್ದವು. ಇದೇ ಅಮೆರಿಕಾದ ಪ್ರಭುತ್ವ ಚಿಲಿಯಲ್ಲಿ ಚುನಾಯಿತ ಸರಕಾರದ ಅಧ್ಯಕ್ಷ ಸಾಲ್ವಡಾರ್ ಅಲೆಂಡೆಯನ್ನು ಕೊಲ್ಲಿಸಿ ತನ್ನ ಚೇಲಾ ಸರಕಾರವನ್ನು ಜಾರಿಗೆ ತಂದಿತು. ಇಲ್ಲೆಲ್ಲ ಮಾರ್ಕ್ಸ್ ಹೇಳುವ ಹಾಗೆ ಭೌತಿಕ ಹಿತಾಸಕ್ತಿ ಅಥವಾ ಪ್ರಭುತ್ವದ ಸ್ಥಾಪನೆ, ವಿಸ್ತರಣೆಯ ಹಿತಾಸಕ್ತಿಗಳಿದ್ದವು. ಮನಃಪರಿವರ್ತನೆ ಇಲ್ಲಿ ಕೇವಲ ಒಂದು ಆಶಯ ಅಥವಾ ಆದರ್ಶವಾಗಿ ಮಾತ್ರ ಉಳಿಯುತ್ತದೆ. ಪೂನಾ ಒಪ್ಪಂದದ ಸಂದರ್ಭದಲ್ಲಿ ಅಂಬೇಡ್ಕರ್ ಮಾನಸಿಕ ನೋವಿನಿಂದ ಬಳಲುತ್ತಾರೆ. ಗಾಂಧಿಯಂಥ ಒಬ್ಬ ಪ್ರಬುದ್ಧ ವ್ಯಕ್ತಿಯನ್ನು ತಮ್ಮ ಘನವಾದ ಉದ್ದೇಶಕ್ಕೆ ಪರಿವರ್ತನೆ ಮಾಡಲು ಸಾಧ್ಯವಾಗುವುದಿಲ್ಲ. ನನ್ನ ಅಭಿಪ್ರಾಯದಲ್ಲಿ ಇಲ್ಲಿಯೂ ವ್ಯವಸ್ಥೆಯ ಹಿತಾಸಕ್ತಿಯೇ ಕೆಲಸ ಮಾಡಿದೆ. ಅಂಬೇಡ್ಕರ್ ಅವರು ಹಿಟ್ಲರ್‌ನ ಯುದ್ಧವನ್ನು ವಿರೋಧಿಸುತ್ತ ಅನಿವಾರ್ಯ ಹಿಂಸೆಯ ಕುರಿತು ಈ ಮಹತ್ವದ ಹೇಳಿಕೆ ಕೊಟ್ಟಿದ್ದಾರೆ : "ಅಹಿಂಸಾವಾದ ಎಲ್ಲಿ ಸಾಧ್ಯ ಮತ್ತು ಹಿಂಸಾವಾದ ಎಲ್ಲಿ ಅನಿವಾರ್ಯ ಎಂಬ ತಾರತಮ್ಯದ ಎಚ್ಚರವಿರಬೇಕು." ಹಿಂಸೆ-ಅಹಿಂಸೆಗಳ ಕುರಿತು ವಾಸ್ತವದ ಹಿನ್ನೆಲೆಯಲ್ಲಿ ಹೇಳುತ್ತಾರೆ. ಈ ಮುಂಚೆ ಹೇಳಿದಂತೆ ಯಾವುದೇ ಹೇಳಿಕೆಗಳನ್ನು, ತೀರ್ಮಾನಗಳನ್ನು ಸಂದರ್ಭದ ಹಿನ್ನೆಲೆಯಲ್ಲಿ ನೋಡಬೇಕು. ಹಿಂಸೆಯಿಂದಲೇ ಕ್ರಾಂತಿಯನ್ನು ಪೂರೈಸಬೇಕೆಂದು ಮಾರ್ಕ್ಸ್‌ವಾದ ಎಲ್ಲಿಯೂ ಹೇಳಿಲ್ಲ. ಆದರೆ ಎಂಥ ಸಂದರ್ಭದಲ್ಲೂ ಅಹಿಂಸೆಯೇ ನಮ್ಮ ಮಾರ್ಗವಾಗಿರಬೇಕೆನ್ನುವುದನ್ನು ಅದು ಒಪ್ಪುವುದಿಲ್ಲ. ವ್ಯವಸ್ಥೆಯ ರಕ್ಷಕನಾಗಿರುವ ಪ್ರಭುತ್ವ ಮನಃಪರಿವರ್ತನೆಯಿಂದ ಬದಲಾದ ಉದಾಹರಣೆಗಳಿಲ್ಲ. ಅಶೋಕ ಚಕ್ರವರ್ತಿಯದು ವ್ಯಕ್ತಿಗತ ಪರಿವರ್ತನೆಯೇ ಹೊರತು ವ್ಯವಸ್ಥೆಯದಲ್ಲ. ಇಲ್ಲಿ ಬದಲಾವಣೆ ಎಂದರೆ ಕೇವಲ ಅಧಿಕಾರವಲ್ಲ, ಸಮಸ್ತ ಸಮಾಜದ ಉತ್ಪಾದನಾ ಸಾಧನಗಳ ಸಂಬಂಧಗಳ ಬದಲಾವಣೆ. ಧನದಾಹದ ಕುರಿತು ಬುದ್ಧನ ವಚನವೊಂದು ಹೀಗಿದೆ : "ಪ್ರಪಂಚದಲ್ಲಿ ಶ್ರೀಮಂತರು, ಅವರ ಸಂಪತ್ತು ಎಲ್ಲಾ ನೋಡುತ್ತಿರುವೆ. ಅವರು ಯಾರಿಗೂ ಏನನ್ನೂ ಕೊಡುವುದಿಲ್ಲ. ಇನ್ನೂ ಇನ್ನೂ ಶೇಖರಿಸಿಕೊಳ್ಳುವುದೇ ಅವರ ಆಶಯ. ಅದೇ ಅವರಿಗೆ ಸುಖ. ರಾಜನು ಎಷ್ಟೋ ರಾಜ್ಯಗಳನ್ನು ಗೆದ್ದಿದ್ದಾನೆ. ಆದರೆ ಅದು ಅವನಿಗೆ ಸಾಲದು. ಸಮುದ್ರ ತಟದವರೆಗೂ ವಿಸ್ತರಿಸಿಕೊಳ್ಳಬೇಕೆಂಬ ಆಸೆ ಅವನದು. ॥ ಸುತ್ತ ॥" (ಆಧಾರ : ಲೋಕಾಯತ).

ಈ ರೀತಿ ಭೂಗೋಲವನ್ನೇ ವ್ಯಾಪಿಸುವ ಕನಸು ಹೊತ್ತ ಸಾಮ್ರಾಜ್ಯಶಾಹಿಗಳಿಗೆ, ಭೂಪತಿಗಳಿಗೆ, ಮೂರು ಲೋಕದ ಒಡೆಯನಾಗಬೇಕೆಂಬುವವರಿಗೆ ಮನಃಪರಿವರ್ತನೆಯ ಮಂತ್ರ ಕೇವಲ ಬೌದ್ಧಿಕ ಕಸರತ್ತು ಎಂಬುದನ್ನು ಬುದ್ಧನಾದಿಯಾಗಿ ಮಾರ್ಕ್ಸ್, ಅಂಬೇಡ್ಕರ್ ಒಪ್ಪಿಕೊಂಡಿದ್ದಾರೆ. ಹೀಗಾಗಿ ಹಿಂಸೆ-ಅಹಿಂಸೆ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ನಡುವೆ ಭಿನ್ನಮತಕ್ಕೆ

## ಹೊಸತು

### ಬಿಡಿ ಪ್ರತಿ ಮತ್ತು ಚಂದಾ ದರ ಪರಿಷ್ಕರಣೆ

ಪ್ರಿಯ ಓದುಗರೆ ಮತ್ತು ಚಂದಾದಾರರೆ,

ಕಾಗದ ಮತ್ತು ಮುದ್ರಣ ವೆಚ್ಚಗಳ ಹೆಚ್ಚಳದಿಂದ ಅನಿವಾರ್ಯವಾಗಿ ಪತ್ರಿಕೆ ಮತ್ತು ಚಂದಾ ದರವನ್ನು ಪರಿಷ್ಕರಿಸಬೇಕಾಗಿದೆ.

**ಬಿಡಿ ಪ್ರತಿ : ₹ ೧೫/- ರಿಂದ ₹ ೨೦/-**

**ವಿಶೇಷ ಸಂಚಿಕೆ : ₹ ೪೫/- ರಿಂದ ₹ ೫೦/-**

**ವಾರ್ಷಿಕ ಚಂದಾ : ₹ ೨೦೦/- ರಿಂದ ₹ ೨೫೦/-**

**ಮೂರು ವರ್ಷಕ್ಕೆ : ₹ ೪೫೦/- ರಿಂದ ₹ ೫೦೦/-**

ಈ ಬದಲಾವಣೆಯು ಜನವರಿ ೨೦೧೬ರಿಂದ ಅನ್ವಯವಾಗಲಿದೆ.

ಜನವರಿ ೨೦೧೬ಕ್ಕೆ ಮತ್ತು ತದ ನಂತರ ಚಂದಾ ಅವಧಿ ಮುಗಿಯುವವರು ೩೧ ಡಿಸೆಂಬರ್ ೨೦೧೫ರೊಳಗೆ ಚಂದಾ ನವೀಕರಿಸಿದ್ದಲ್ಲಿ ಹಳೆಯ ದರದಲ್ಲೇ ಸ್ವೀಕರಿಸಲಾಗುವುದು.

– ವ್ಯವಸ್ಥಾಪಕ

ವಿಷಯವಾಗಬೇಕಿಲ್ಲ. ಕೊನೆಯದಾಗಿ, 'ಪ್ರಜಾಪ್ರಭುತ್ವ'ದ ವಿಷಯದಲ್ಲಿ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಚಿಂತನೆಗಳ ಮಧ್ಯೆ ಹುಸಿ ಅಂಬೇಡ್ಕರ್ ವಾದಿಗಳು ಕಂದಕ ಸೃಷ್ಟಿಸಿದ ವಿಷಯದ ಕುರಿತು ಗಮನ ಹರಿಸುವುದು ಒಳ್ಳೆಯದು. 'ಸ್ವಾತಂತ್ರ್ಯ, ಸಮಾನತೆ, ಸಹೋದರತೆ' ಫ್ರಾನ್ಸ್ ಕ್ರಾಂತಿಯ ಈ ಘೋಷವಾಕ್ಯ ಅಂಬೇಡ್ಕರ್ ಅವರಿಗೆ ಅತ್ಯಂತ ಮಹತ್ವದ ಘೋಷಣೆಯಾಗಿತ್ತು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧಿ ನಾಯಕತ್ವದ ಕಾಂಗ್ರೆಸ್, ಕಮ್ಯುನಿಸ್ಟರು, ಭಗತ್‌ಸಿಂಗ್ ಸಂಗಡಿಗರು, ಸುಭಾಷ್ ಚಂದ್ರ ಬೋಸ್, ಡಾ॥ ಬಿ. ಆರ್. ಅಂಬೇಡ್ಕರ್ ಹೀಗೆ ಅನೇಕ ಧೀಮಂತರು ಹೂಡಿದ್ದ ಹಲವಾರು ವಿಚಾರಧಾರೆಯ ಚಳುವಳಿಗಳಿದ್ದವು. ಈ ಭಿನ್ನ ವಿಚಾರಧಾರೆಗೆ ಮುಖ್ಯವಾದ ಕಾರಣ ಸ್ವಾತಂತ್ರ್ಯದ ಗುರಿ ಹಾಗೂ ಮಾರ್ಗವೇನಾಗಿರಬೇಕು ಮತ್ತು ಸ್ವಾತಂತ್ರ್ಯ ಯಾರಿಗೆ ಯಾವ ಅರ್ಥದಲ್ಲಿ ಬರಬೇಕೆನ್ನುವುದೇ ಆಗಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮತ್ತು ನಂತರ ಶೋಷಿತ ಜನತೆಗೆ ಅಧಿಕಾರ ದೊರಕುವುದೇ ನಿಜವಾದ ಸ್ವಾತಂತ್ರ್ಯ ಎನ್ನುವುದು ಕಮ್ಯುನಿಸ್ಟರ, ಭಗತ್ ಸಿಂಗ್ ಸಂಗಾತಿಗಳ ಹಾಗೂ ಅಂಬೇಡ್ಕರ್ ಅವರ ಅಭಿಪ್ರಾಯವಾಗಿತ್ತು. ಇದರರ್ಥ ಪ್ರಭುತ್ವವನ್ನು ನಿಯಂತ್ರಿಸುವುದು. ಅಂದರೆ ಶೋಷಿತ ಜನತೆಯ ಹಿತಾಸಕ್ತಿಗಾಗಿ ಬಳಸುವುದು. ಈ ದೇಶದ ಮೊದಲ ಸಾರ್ವತ್ರಿಕ ಚುನಾವಣೆಗಳ ಸಂದರ್ಭದಲ್ಲಿ ೨೭-೧೦-೧೯೫೧ರಂದು ಜಲಂಧರ್‌ನಲ್ಲಿ 'ರಾಜಕೀಯ ಅಧಿಕಾರವನ್ನು ನಮ್ಮದಾಗಿಸಿಕೊಳ್ಳುವ ದಿಶೆಯಲ್ಲಿ ನಾವು ಜಯಗಳಿಸಬೇಕು' ಎಂಬ ವಿಷಯ ಕುರಿತು ಮಾತನಾಡುತ್ತಾ ಅಂಬೇಡ್ಕರ್ ಅವರು, "ಆದರೆ ಅಧಿಕಾರ ಪಡೆದುಕೊಳ್ಳುವುದು ಅತ್ಯವಶ್ಯಕವಾಗಿದೆ. ಅದುವೇ ರಾಜಕೀಯ ಅಧಿಕಾರ. ಈ ದಿಶೆಯಲ್ಲಿ ನಾವು ವಿಜಯಿಗಳಾಗಲೇಬೇಕು. ಹೀಗೆ ರಾಜಕೀಯ ಅಧಿಕಾರ ನಮ್ಮ ಕೈಗೆ ಬಂದಿತೆಂದಾದರೆ ನಮ್ಮ ಜನರ ಹಿತಾಸಕ್ತಿಗಳನ್ನು ರಕ್ಷಿಸಲು ಸಾಧ್ಯವಾಗುತ್ತದೆ" ಎಂದು ಹೇಳುತ್ತಾರೆ (ಆಧಾರ : ದಸ್ ಸ್ಪೋಕ್ ಅಂಬೇಡ್ಕರ್ – ಸಂಪುಟ ೨) ನಾವು ರಾಜಕೀಯ ಅಧಿಕಾರವೆಂಬ ಅಸ್ತ್ರದ ಮೂಲಕ ನಮ್ಮ ಜನತೆಯ ಹಿತಾಸಕ್ತಿಯನ್ನು ಕಾಪಾಡಬಹುದು ಎಂದು ಅಂಬೇಡ್ಕರ್ ಅವರು ದಲಿತ ವರ್ಗವನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳಿದರೆ ಇದೇ ಆಶಯವನ್ನು ಭಿನ್ನ ಶಬ್ದಗಳಲ್ಲಿ ಮಾರ್ಕ್ಸ್ ಶ್ರಮಜೀವಿ ವರ್ಗದ ರಾಜಕೀಯ ಅಧಿಕಾರ ಕುರಿತು ಹೇಳುತ್ತಾರೆ : "ಕಮ್ಯುನಿಸ್ಟರ ಸದ್ಯದ ಗುರಿಯು ಇತರ ಎಲ್ಲ ಶ್ರಮಜೀವಿ ಪಕ್ಷಗಳ ಗುರಿಯೇ ಆಗಿದೆ : ಶ್ರಮಜೀವಿಗಳನ್ನು ಒಂದು ವರ್ಗವಾಗಿ ರೂಪಿಸುವುದು, ಬೂರ್ಷ್ವಾ ವರ್ಗದ ಪರಮಾಧಿಕಾರವನ್ನು ಉರುಳಿಸುವುದು, ಶ್ರಮಜೀವಿಗಳು ರಾಜಕೀಯ ಅಧಿಕಾರವನ್ನು ಸ್ವಾಧೀನಪಡಿಸಿಕೊಳ್ಳುವಂತೆ ಮಾಡುವುದು." (ಮಾರ್ಕ್ಸ್ – ಏಂಗೆಲ್ಸ್ : ಕಮ್ಯುನಿಸ್ಟ್ ಪಾರ್ಟಿಯ ಪ್ರಣಾಳಿಕೆ). ಶ್ರಮಜೀವಿ ವರ್ಗ ರಾಜಕೀಯ ಅಧಿಕಾರವನ್ನು ಕೈಗೆತ್ತಿಕೊಳ್ಳಬೇಕೆಂಬ ಮಾರ್ಕ್ಸ್ ಅವರ ಆಶಯ ಅಂಬೇಡ್ಕರ್ ಅವರಲ್ಲೂ ಇದೆ. ಅಂಬೇಡ್ಕರ್ ಅವರು ಹೇಳುವ 'ನಮ್ಮ ಜನ' ಎನ್ನುವುದು ಶ್ರಮಜೀವಿ ವರ್ಗವೇ ಆಗಿದೆ. ಭಾರತದಲ್ಲಿ ಅದು ಅಸ್ಪೃಶ್ಯ ಜನಾಂಗವೂ ಆಗಿದೆ. ಅಂಬೇಡ್ಕರ್ ಅವರಿಗಿಂತ ಸರಿಯಾಗಿ ಒಂದು ಶತಮಾನದ ಮುಂಚೆಯೇ ಮಾರ್ಕ್ಸ್ ಈ ಮಾತನ್ನು ಹೇಳಿದ್ದರೂ, ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಗುರಿ ಒಂದೇ ಆಗಿದ್ದರೂ ದಾರಿ ಬೇರೆಬೇರೆ ಇದೆ. ಇಬ್ಬರ ಚಿಂತನೆಗಳಲ್ಲೂ ಸಮಾಜವಾದಿ ಆಶಯಗಳೇ ಇದ್ದರೂ ಮಾರ್ಕ್ಸ್ ಹೇಳುವುದು ಸಮಾಜವಾದಿ ಪ್ರಭುತ್ವ, ಅಂಬೇಡ್ಕರ್ ಅವರು ಹೇಳುವುದು ಪ್ರಭುತ್ವ ಸಮಾಜವಾದ. ಭಾರತದ ಪ್ರಜಾಪ್ರಭುತ್ವದಲ್ಲಿ ಅಧಿಕಾರ ಪಡೆದು ತನ್ನ ಜನತೆಯ ವಿಮೋಚನೆಗಾಗಿ ಈ ರಾಜಕೀಯ ಅಸ್ತ್ರವನ್ನು ಬಳಸಬೇಕೆಂಬುದು ಅಂಬೇಡ್ಕರ್ ಅವರ ಆಶಯ. ಈ ಆಶಯಗಳನ್ನು ಅವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗುವ ಮೊದಲೇ, ಎಂದರೆ ೧೯೪೭ರಲ್ಲಿ ಭಾರತ ಪರಿಶಿಷ್ಟ ಜಾತಿಗಳ ಮಹಾಸಂಘದ ಪರವಾಗಿ ಘಟನಾ ಸಮಿತಿಗೆ ಸಲ್ಲಿಸಿದ, ಸಂವಿಧಾನದ ಕರಡು ರೂಪದ ಮನವಿ ಪತ್ರದಲ್ಲಿಯೇ ಕಾಣಬಹುದು. ಅಂದರೆ ಪ್ರಸ್ತುತ ಪ್ರಭುತ್ವದ ಮೂಲಕವೇ ಶೋಷಿತ ಜನತೆಯ ಹಿತಾಸಕ್ತಿಯನ್ನು ಲಭ್ಯವಾದ ರಾಜಕೀಯ ಅಧಿಕಾರದ ಮೂಲಕ ಕಾಪಾಡುವುದು ಅವರ ಆಶಯವಾಗಿತ್ತು.

ಆದರೆ ಮುಂದೆ ಅವರೇ ಸ್ವತಃ ಸಂವಿಧಾನ ಸಮಿತಿಯ ಅಧ್ಯಕ್ಷರಾದಾಗ ತಾವೇ ಸಲ್ಲಿಸಿದ್ದ ಕರಡು ಸಂವಿಧಾನದ ಅಂಶಗಳನ್ನು ಸಂಪೂರ್ಣವಾಗಿ ನಮ್ಮ ದೇಶದ ಸಂವಿಧಾನದಲ್ಲಿ ಅಡಕಗೊಳಿಸಲು ಸಾಧ್ಯವಾಗಲಿಲ್ಲ. ಕಾರಣ ನಮ್ಮ ದೇಶದ ಪ್ರಭುತ್ವ ದುಡಿವ ವರ್ಗದ ಪ್ರಭುತ್ವ ಆಗಿರಲಿಲ್ಲ. ಅಂಬೇಡ್ಕರ್ ಅವರ ಪ್ರಭುತ್ವ



ಸಮಾಜವಾದಕ್ಕೂ ಮಾರ್ಕ್ಸ್ ಹೇಳುವ ಸಮಾಜವಾದಿ ಪ್ರಭುತ್ವಕ್ಕೂ ವ್ಯತ್ಯಾಸವಿದೆ. ಅಂಬೇಡ್ಕರ್ ಅವರ ಪ್ರಭುತ್ವ ಸಮಾಜವಾದದಲ್ಲಿ ಪ್ರಭುತ್ವಕ್ಕೆ ಸಮಾಜವಾದದ ಆಶಯಗಳಿರಬಹುದು. ಇಂದಿನ ಜಾಗತೀಕರಣದ ಸಂದರ್ಭದಲ್ಲಿ 'ಸಮಾಜವಾದ'ದ ಆಶಯಗಳನ್ನು ಸಂಪೂರ್ಣವಾಗಿ ತೊಡೆದುಹಾಕಿ, ಸಮಾಜವಾದ ಎನ್ನುವ ಪದವನ್ನೂ ಕಿತ್ತು ಬಿಸಾಕುವ ಪ್ರಯತ್ನ ನಡೆದಿದೆ. ಆದರೆ ಮಾರ್ಕ್ಸ್ ಅವರ ಸಮಾಜವಾದಿ ಪ್ರಭುತ್ವದಲ್ಲಿ ಪ್ರಭುತ್ವದ ಗುರಿಯೇ ಸಮಾಜವಾದ. ಅದಕ್ಕೆ ಅವರು ಹಳೆಯ ಆಡಳಿತ ಯಂತ್ರವನ್ನು ಹುಡಿಮಾಡಿ ಶ್ರಮಜೀವಿ ವರ್ಗ ತನ್ನ ಹಿತಾಸಕ್ತಿಗೆ ಪೂರಕವಾದ ಹೊಸ ಆಡಳಿತ ಯಂತ್ರವನ್ನು ಸಿದ್ಧಪಡಿಸಿಕೊಳ್ಳಬೇಕೆಂದು ಹೇಳುತ್ತಾರೆ. ಮಾರ್ಕ್ಸ್‌ರವರ ಜೀವಿತಕಾಲದಲ್ಲಿಯೇ ೧೮೭೧ರಲ್ಲಿ ಪ್ಯಾರಿಸ್ ನಗರದ ಕಾರ್ಮಿಕರ ಕ್ರಾಂತಿ (ಪ್ಯಾರಿಸ್ ಕಮ್ಯೂನ್) ಹಾಗೂ ೭೦ ದಿನಗಳ ದುಡಿವವರ್ಗದ ಅಧಿಕಾರ ಅವರ ಈ ಹೇಳಿಕೆಯನ್ನು ಸಮರ್ಥಿಸಿತು. ಭಾರತದ ಪ್ರಜಾಪ್ರಭುತ್ವದ ಆಡಳಿತ ಯಂತ್ರಕ್ಕೆ ಅಥವಾ ಸಂವಿಧಾನಕ್ಕೆ ಸಮಾಜವಾದಿ ಆಶಯಗಳಿರಲಿಲ್ಲ, ಆದರೆ ಕೆಲವು ಸಮಾಜವಾದಿ ಘೋಷಣೆಗಳಿದ್ದವು. ಕೆಲವು ಕಲ್ಯಾಣ ರಾಜ್ಯದ ಕಾರ್ಯಕ್ರಮಗಳಿದ್ದವು. ಅಂಬೇಡ್ಕರ್ ಅವರು ರಾಜ್ಯಾಂಗ ರಚನಾ ಸಮಿತಿಗೆ ಸಲ್ಲಿಸಿದ ಮನವಿ, ಅಂದರೆ ಕರಡು ಸಂವಿಧಾನದ ಬಹುತೇಕ ಅಂಶಗಳು ಭಾರತದ ಸಂವಿಧಾನದಲ್ಲಿ ಜಾರಿಗೆ ಬರಲಿಲ್ಲ. ಉದಾಹರಣೆಗೆ, ಅವರ ಕರಡು ಸಂವಿಧಾನದ ಖಂಡ ೪ರಲ್ಲಿ 'ಆರ್ಥಿಕ ಶೋಷಣೆಯ ವಿರುದ್ಧ ರಕ್ಷಣೆ' ಕುರಿತ ಹತ್ತು ಅಂಶಗಳಲ್ಲಿ ಪ್ರಮುಖವಾದುವು ಹೀಗಿವೆ : "ಮೂಲಭೂತ ಕೈಗಾರಿಕೆಗಳು ಹಾಗೂ ಮುಂದೆ ಮೂಲಭೂತವೆಂದು ಘೋಷಿಸಬಹುದಾದ ಕೈಗಾರಿಕೆಗಳು ಸರಕಾರದ ಒಡೆತನದಲ್ಲಿದ್ದು ಸರಕಾರದಿಂದಲೇ ನಡೆಯತಕ್ಕದ್ದು. ...ಅತ್ಯಾವಶ್ಯಕ ಕೈಗಾರಿಕೆಗಳು ಸರ್ಕಾರದ ಒಡೆತನಕ್ಕೆ ಸೇರತಕ್ಕದ್ದು. ...ಕೃಷಿ ಒಂದು ಸರ್ಕಾರಿ ಕೈಗಾರಿಕೆಯಾಗತಕ್ಕದ್ದು, ಸಾಮೂಹಿಕ ಕೃಷಿ ಜಾರಿಗೆ ಬರತಕ್ಕದ್ದು. ಸಾಮೂಹಿಕ ಕೃಷಿ ಯೋಜನೆಯನ್ನು ಆದಷ್ಟು ಬೇಗ ಜಾರಿಗೊಳಿಸಬೇಕು, ಆದರೆ ಸಂವಿಧಾನ ಜಾರಿಗೆ ಬಂದ ಹತ್ತು ವರ್ಷದ ಅವಧಿಯೊಳಗೆ ಅದು ಜಾರಿಯಾಗತಕ್ಕದ್ದೇ ಹೊರತು ಯಾವುದೇ ಕಾರಣಕ್ಕಾಗಿ ಆ ಅವಧಿಯನ್ನು ವಿಸ್ತರಿಸಲಾಗದು" (ಆಧಾರ : ರಾಜ್ಯಗಳು ಮತ್ತು ಅಲ್ಪಸಂಖ್ಯಾತರು). ಕೃಷಿ ಮತ್ತು ಕೈಗಾರಿಕೆಯ ಸಮಾಜೀಕರಣದ ಅಂಬೇಡ್ಕರ್ ಅವರ ಈ ಆಶಯದ ಹಿಂದೆ ಊಳಿಗಮಾನ್ಯ ವ್ಯವಸ್ಥೆಯಡಿ, ಜಾತಿವ್ಯವಸ್ಥೆಯಲ್ಲಿ ನಲಗುತ್ತಿದ್ದ ಅಸ್ಪೃಶ್ಯ ಜನತೆಯ ಹಿತಾಸಕ್ತಿಯನ್ನೂ ಒಳಗೊಂಡು ಒಟ್ಟಾರೆ ದೇಶದ ಜನತೆ ಮತ್ತು ಆರ್ಥಿಕತೆ ಪ್ರಧಾನ ಉದ್ದೇಶವಾಗಿತ್ತು. ಇದು ಸಂವಿಧಾನದಲ್ಲಿ ಜಾರಿಯಾಗಲಿಲ್ಲ. ಬದಲು, ೧೯೯೦ರ ನಂತರ ಜಾಗತೀಕರಣ ಪ್ರಕ್ರಿಯೆಯಿಂದ ಇರುವ ಸಾರ್ವಜನಿಕ ಕೈಗಾರಿಕೆಗಳನ್ನು, ಸೇವಾವಲಯವನ್ನು ಮಾತ್ರವಲ್ಲ, ಸಾರ್ವಜನಿಕ ಸೇವೆಗಾಗಿ ಇರುವ ಸರಕಾರಿ ಇಲಾಖೆಗಳನ್ನೇ ಖಾಸಗೀಕರಿಸಲಾಗುತ್ತಿದೆ. ಸಾಮೂಹಿಕ ಕೃಷಿಯ ಬದಲು ಭೂಸ್ವಾಧೀನ ಮಾಡಿ ಬಹುರಾಷ್ಟ್ರೀಯ ಕಂಪನಿಗಳಿಗೆ ಕೊಡಲಾಗುತ್ತಿದೆ. ಭಾರತದ ಕೃಷಿಯನ್ನು ಸಹಿತ ಕಂಪನಿ ಕೃಷಿಯನ್ನಾಗಿಸುವ ಹುನ್ನಾರ ಇಂದು ನಡೆದಿದೆ. ಇದೇನೇ ಇರಲಿ, ಅಂಬೇಡ್ಕರ್ ಅವರ ಕರಡು ಸಂವಿಧಾನದ ಹಲವಾರು ಅಂಶಗಳು ಮಾರ್ಕ್ಸ್ ಮತ್ತು

ಏಂಗೆಲ್ಸ್ ರಚಿಸಿದ ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆಯಲ್ಲಿವೆ ಎಂಬುದನ್ನು ಗಮನಿಸಬೇಕು. ಅಂಬೇಡ್ಕರ್ ಅವರು ತಮ್ಮ ಕರಡು ಸಂವಿಧಾನದಲ್ಲಿ ಕೃಷಿ, ಕೈಗಾರಿಕೆ, ಸಾರ್ವಜನಿಕ ಆಸ್ತಿ ಕುರಿತು ೧೦ ಅಂಶಗಳನ್ನು ಹೇಳುತ್ತಾರೆ. ಅದೇ ರೀತಿ ಮಾರ್ಕ್ಸ್ ಮತ್ತು ಏಂಗೆಲ್ಸ್ ಪ್ರಣಾಳಿಕೆಯಲ್ಲಿ ೧೦ ಅಂಶಗಳನ್ನು ಸಮಾಜವಾದಿ ಪ್ರಭುತ್ವ ಆಸ್ತಿ ಕುರಿತು ಕೈಗೊಳ್ಳಬೇಕಾದ ಕಾರ್ಯಕ್ರಮ ಕುರಿತು ಹೇಳುತ್ತಾರೆ. ಅಂಬೇಡ್ಕರ್ ನಮ್ಮ ಪ್ರಜಾಪ್ರಭುತ್ವ ಇದನ್ನು ಮಾಡಬೇಕೆಂದು ನಿರೀಕ್ಷಿಸುತ್ತಾರೆ. ಮಾರ್ಕ್ಸ್ ಸಮಾಜವಾದಿ ಪ್ರಭುತ್ವ ಇದನ್ನು ಮಾಡಬೇಕೆಂದು ಕಾರ್ಯಕ್ರಮ ಕೊಡುತ್ತಾರೆ. ಯಾಕೆಂದರೆ ಅಲ್ಲಿ ಕ್ರಾಂತಿಕಾರಿ ಶ್ರಮಜೀವಿ ವರ್ಗ ಸಮಾಜವಾದಿ ಪ್ರಭುತ್ವದ ನಾಯಕತ್ವ ವಹಿಸಿರುತ್ತದೆ.

ಕಮ್ಯುನಿಸ್ಟ್ ಪಾರ್ಟಿಯ ಪ್ರಣಾಳಿಕೆಯಲ್ಲಿನ ಮಾರ್ಕ್ಸ್ – ಏಂಗೆಲ್ಸ್‌ರ ತತ್ವಗಳನ್ನು ವಿಶ್ವದ ಹಲವಾರು ಸಮಾಜವಾದಿ ದೇಶಗಳಲ್ಲಿ ಜಾರಿಗೆ ತರಲಾಗಿದೆ. ೧೯೧೭ರಲ್ಲಿ ಲೆನಿನ್ ನಾಯಕತ್ವದಲ್ಲಿ ನಡೆದ ರಷ್ಯನ್ ಕ್ರಾಂತಿ ೭೦ ವರ್ಷಗಳ ಕಾಲ ಸಮಾಜವಾದಿ ಪ್ರಭುತ್ವಕ್ಕೆ ಮಾದರಿಯಾಗಿತ್ತು. ಹಲವಾರು ಸಮಾಜವಾದಿ ದೇಶಗಳು ದುಡಿವ ವರ್ಗವೂ ಆಡಳಿತ ನಡೆಸಬಹುದು ಎಂದು ತೋರಿಸಿ ಕೊಟ್ಟಿವೆ. ಇಂದಿಗೂ ಹಲವಾರು ದೇಶಗಳಲ್ಲಿ ಸಮಾಜವಾದಿ ಪ್ರಭುತ್ವ ಜಾರಿಯಲ್ಲಿದೆ. ಅಂಬೇಡ್ಕರ್ ಅವರ ಆಶಯ ಅಲ್ಲಿ ಜಾರಿಯಲ್ಲಿದೆ. ಮಾರ್ಕ್ಸ್ ಸಮಾಜವಾದಿ ಪ್ರಭುತ್ವಕ್ಕೆ ಶ್ರಮಜೀವಿವರ್ಗದ ಸರ್ವಾಧಿಕಾರ ಎನ್ನುತ್ತಾರೆ. 'ಸರ್ವಾಧಿಕಾರ' ಎಂಬುದನ್ನು ಅಂಬೇಡ್ಕರ್ ತೀವ್ರವಾಗಿ ವಿರೋಧಿಸುತ್ತಾರೆ. ಶ್ರಮಜೀವಿ ವರ್ಗದ ಸರ್ವಾಧಿಕಾರ ಎಂದರೆ ಜನಸಾಮಾನ್ಯರ ಅಧಿಕಾರ ಎಂಬುದು ಅಂಬೇಡ್ಕರ್ ಅವರಂಥ ಮಹಾನ್ ಚಿಂತಕನಿಗೆ ಅರ್ಥವಾಗಿರಲಿಲ್ಲ ಎಂದು ಹೇಳುವ ಮೂರ್ಖತನವನ್ನು ನಾನು ಮಾಡುವುದಿಲ್ಲ. ಆದರೆ ಅಂಬೇಡ್ಕರ್ ಅವರು ಹೇಳುವ "ನಾವು ಅಧಿಕಾರ ಪಡೆದುಕೊಳ್ಳುವುದು ಅತ್ಯವಶ್ಯಕವಾಗಿದೆ. ಅದುವೇ ರಾಜಕೀಯ ಅಧಿಕಾರ" ಎಂಬ ಮಾತನ್ನು ಭಾರತದ ಮೊದಲ ಚುನಾವಣೆಯ ಸಂದರ್ಭದಲ್ಲಿ ಹೇಳಿದ್ದರೂ ಒಂದು ವರ್ಗವಾಗಿ ನಾನೂ ಅದೇ ಮಾತನ್ನು ಹೇಳಿದರೆ ಅದಕ್ಕೂ ಮಾರ್ಕ್ಸ್ ಅವರು ಹೇಳಿದ 'ಶ್ರಮಜೀವಿ ವರ್ಗದ ಸರ್ವಾಧಿಕಾರ' ಎನ್ನುವ ಮಾತಿಗೂ ಹೆಚ್ಚು ವ್ಯತ್ಯಾಸವಿಲ್ಲ ಎಂಬುದು ನನ್ನ ಅಭಿಪ್ರಾಯ.

ಮಾರ್ಕ್ಸ್‌ರವರ ಸಮಾಜವಾದಿ ಪ್ರಭುತ್ವದ ಚಿಂತನೆಗಳು ಹಾಗೂ ಅಂಬೇಡ್ಕರ್ ಅವರ ಪ್ರಭುತ್ವ ಸಮಾಜವಾದಿ ಚಿಂತನೆಗಳು ಪ್ರಯೋಗದಲ್ಲಿ, ಪ್ರಯೋಗದ ವಿಧಾನ ಗಳಲ್ಲಿ ಭಿನ್ನತೆಯನ್ನು ಹೊಂದಿದ್ದರೂ ಒಟ್ಟಾರೆ ದುಡಿವ ವರ್ಗದ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಸಾಮ್ಯತೆ, ಸಹಮತ ಹೊಂದಿವೆ ಎನ್ನುವುದನ್ನು ಗಮನಿಸಬೇಕು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಸಂದರ್ಭದಲ್ಲಿ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಅಂಬೇಡ್ಕರ್ ಹಲವಾರು ನಿರೀಕ್ಷೆಗಳನ್ನಿಟ್ಟುಕೊಂಡಿದ್ದರು. ಅದೇ ಸಂದರ್ಭದಲ್ಲಿ ಅವರಿಗೆ ಸಂಶಯಗಳೂ ಇದ್ದವು. ಅದಕ್ಕೇ ಅವರು ೨೫-೧೧-೧೯೪೯ರಂದು ಸಂಸತ್‌ನಲ್ಲಿ ಸಂವಿಧಾನ ಕುರಿತು ಮಾತನಾಡುತ್ತ, ಭಾರತೀಯರು ರಾಷ್ಟ್ರವನ್ನು ಮತ, ಸಿದ್ಧಾಂತಗಳಿಗಿಂತ ಶ್ರೇಷ್ಠ ಎಂದು ಪರಿಗಣಿಸುತ್ತಾರೋ ಅಥವಾ ಅವೇ ರಾಷ್ಟ್ರಕ್ಕಿಂತ ಶ್ರೇಷ್ಠ ಎಂದು ಪರಿಗಣಿಸುತ್ತಾರೋ?... ಎಂದು ಹೇಳುತ್ತಾರೆ. ಅವರ ಅನುಮಾನಗಳು ಇಂದು ನಿಜವಾಗಿವೆ. ಜಾತಿ ಮಾತ್ರವಲ್ಲ ಧರ್ಮ, ಹಣ, ತೋಳ್ಬಲ ಇಂದು ನಮ್ಮ ಚುನಾವಣಾ ವ್ಯವಸ್ಥೆಯನ್ನು ನಿಯಂತ್ರಿಸುತ್ತಿವೆ. ಅಂಬೇಡ್ಕರ್ ಅವರ ಪ್ರಜಾಪ್ರಭುತ್ವದ ಪ್ರೀತಿಯನ್ನು ಗೌರವಿಸುತ್ತಲೇ ಇಂದಿನ ವರ್ಗೀಕೃತ ಸಮಾಜದಲ್ಲಿ ಪ್ರಜಾಪ್ರಭುತ್ವವೆಂದರೆ 'ಯಾವ ಜನರಿಗಾಗಿ, ಯಾವ ಜನರಿಗೋಸ್ಕರ ?' ಎಂದು ಪ್ರಶ್ನೆ ಮಾಡುವ ವಾತಾವರಣ ಉಂಟಾಗಿದೆ. ಅವರು ಸಂಪತ್ತಿನ ಸಮಾಜೀಕರಣ ಈ ಪ್ರಜಾಪ್ರಭುತ್ವದಿಂದ ನಡೆಯಬೇಕು ಎಂದು ಆಶಿಸಿದ್ದರೆ ಇಂದು ಸಂಪತ್ತಿನ, ಉತ್ಪಾದನಾ ಹಾಗೂ ಸೇವಾವಲಯಗಳ ಖಾಸಗೀಕರಣ ತ್ವರಿತವಾಗಿ ನಡೆಯುತ್ತಿದೆ. ಇಂಥ ಸಂದರ್ಭದಲ್ಲಿ ಅಂಬೇಡ್ಕರ್‌ವಾದಿಗಳು ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಚಿಂತನೆಗಳನ್ನು ಜೊತೆಯಾಗಿ ಒಂದಕ್ಕೊಂದು ಪೂರಕವಾಗುವಂತೆ ವಿಸ್ತರಿಸಬೇಕಾದ ಅವಶ್ಯಕತೆ ಇದೆ. ಮಾರ್ಕ್ಸ್ ಭಾರತದಿಂದ ದೂರವಿದ್ದರೂ ತನ್ನ ಅಧ್ಯಯನದ ಮೂಲಕ ಭಾರತದ ಸ್ಥಿತಿಯ ಕುರಿತು 'ದಿ ಫ್ಯೂಚರ್ ರಿಸಲ್ಟ್ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ' ಎಂಬ ಲೇಖನದಲ್ಲಿ, "ಆ ದೇಶವು ಮಹಮದೀಯರು ಮತ್ತು ಹಿಂದೂಗಳ ನಡುವೆ ಮಾತ್ರ ವಿಭಾಗವಾಗಿಲ್ಲ. ವಿವಿಧ ಬುಡಕಟ್ಟುಗಳ ನಡುವೆ, ಜಾತಿ-ಜಾತಿಗಳ ನಡುವೆಯೂ ವಿಭಾಗವಾಗಿದೆ; ಪರಿಣಾಮವಾಗಿ ಸಮತೋಲನದ ಆಧಾರದ ಮೇಲೆ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ರಚಿತಗೊಂಡಿರುವ ಆ ಸಮಾಜದಲ್ಲಿ ಎಲ್ಲೆಡೆ ಜನಸಾಮಾನ್ಯರಲ್ಲಿ ಜುಗುಪ್ಸೆ ಮತ್ತು ಪ್ರತ್ಯೇಕತಾ ಮನೋಭಾವ ಬೇರೂರಿಬಿಟ್ಟಿವೆ" ಎಂದು ಹೇಳುತ್ತಾರೆ. ಮಾರ್ಕ್ಸ್ ಅಂದು ಹೇಳಿದ ಮಾತು ಇಂದಿಗೂ ಅನ್ವಯಿಸುತ್ತದೆ. ಇಂದು ಅಂಬೇಡ್ಕರ್‌ವಾದಿಗಳನ್ನು ಸಂತೋಷಗೊಳಿಸಲು ಇವೆರಡೂ ಸಿದ್ಧಾಂತಗಳ ನಡುವಿನ ಸಾಮ್ಯತೆಯನ್ನು ಹೆಕ್ಕಿ ತೆಗೆಯುವ ಅವಶ್ಯಕತೆಯಿಲ್ಲ. ಮಾರ್ಕ್ಸ್ ಮತ್ತು ಅಂಬೇಡ್ಕರ್ ಕೇವಲ ವ್ಯಕ್ತಿಗಳಲ್ಲ, ಅವರು ಶೋಷಿತ ವರ್ಗದ ಹೋರಾಟದ ಸಂಕೇತಗಳು. ಅಂಬೇಡ್ಕರ್ ಪ್ರಜಾಪ್ರಭುತ್ವ ವ್ಯವಸ್ಥೆಯ ಬಗ್ಗೆ, ಅಲ್ಲಿನ ವ್ಯಕ್ತಿಗಳ ಬಗ್ಗೆ ಅನುಮಾನಗಳ ಮಧ್ಯೆಯೂ ಗೌರವವನ್ನಿಟ್ಟುಕೊಂಡಿದ್ದರು. ಇಂದಿನ ಸಂದರ್ಭದಲ್ಲಿ ನಾವು ಅವರ ಚಿಂತನೆಗಳನ್ನು ಅಳವಡಿಸುವ ಮಾರ್ಗ ಹುಡುಕಬೇಕಿದೆ. ಆತಂಕಪಡಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ ಇಂದು ಅಂಬೇಡ್ಕರ್ ಅವರನ್ನು ಕೇವಲ ಒಂದು ಜಾತಿಯ ನಾಯಕ, ಹೆಚ್ಚೆಂದರೆ ದಲಿತವರ್ಗದ ನಾಯಕ ಎಂದು ಬಿಂಬಿಸಲಾಗುತ್ತಿದೆ. ಆದರೆ ಅಂಬೇಡ್ಕರ್ ಅಸ್ಪೃಶ್ಯರ ಪರವಾಗಿ ರಾಜಿರಹಿತ ಹೋರಾಟ ನಡೆಸಿದ್ದರೂ ಕಾರ್ಮಿಕರ, ಬಡರೈತರ, ಜನಸಾಮಾನ್ಯರ ಪರವಾಗಿ ಹಲವಾರು ಹೋರಾಟಗಳನ್ನು ನಡೆಸಿದ್ದಾರೆ. ಸುಸ್ಥಿರ ಪ್ರಜಾಪ್ರಭುತ್ವಕ್ಕೆ ಹಲವಾರು ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅವರ ಸ್ವಾಭಿಮಾನದ ಹೋರಾಟ ಅಸ್ಪೃಶ್ಯತೆಯ ವಿರುದ್ಧವಾಗಿದ್ದರೆ, ಸ್ವಾವಲಂಬನೆಯ ಹೋರಾಟ ಸಮಗ್ರ ಶೋಷಿತ ಜನತೆಯ ಪರವಾಗಿತ್ತು. ಹೀಗಿದ್ದೂ ಅವರನ್ನು ರಾಷ್ಟ್ರ ನಾಯಕರನ್ನಾಗಿ ನೋಡದೆ ಒಂದು ಜಾತಿಗೆ ಕಟ್ಟಿಹಾಕುವ ಹುನ್ನಾರಗಳು ನಡೆದಿವೆ. ಮೇಲ್ಜಾತಿಯ ಕುತ್ಸಿತ ಮನಸ್ಸುಗಳು ಇದಕ್ಕೆ ಕಾರಣವಾದರೆ ಅಂಬೇಡ್ಕರ್ ಅವರನ್ನು ಸೆಕ್ಟೇರಿಯನ್ ರೀತಿಯಲ್ಲಿ ಬಿಂಬಿಸುವ ಕೆಲವು ದಲಿತ ಬುದ್ಧಿಜೀವಿಗಳೂ ಕಾರಣರಾಗಿದ್ದಾರೆ.

ಜಾಗತೀಕರಣದ ಸಂದರ್ಭದಲ್ಲಿ ನಾವು ಸ್ವಾತಂತ್ರ್ಯವನ್ನು ಮತ್ತೆ ಕಳೆದುಕೊಂಡಿದ್ದೇವೆ. "ಹಸಿವಿನಿಂದ ನರಳುವಾಗ, ದಮನಕ್ಕೆ ಸಿಲುಕಿರುವಾಗ, ನೈತಿಕ ಬೆಳವಣಿಗೆ ಕುಂಠಿತವಾಗಿರುವಾಗ ನಾವೇನಾಗಬೇಕೆಂದು ಆಶಿಸುವುದನ್ನು ಪೂರೈಸಿಕೊಳ್ಳಲು ಸ್ವಾತಂತ್ರ್ಯವಿದೆ ಎಂಬುದು ಕುಹಕ" ಎಂಬ ಡಾ|| ಜಿ. ರಾಮಕೃಷ್ಣ ಅವರ ಮಾತು ನನಗೆ ಮುಖ್ಯವೆನಿಸುತ್ತದೆ. ಜಾಗತೀಕರಣ ವಿಶ್ವದ ಪ್ರಜೆಗಳನ್ನು ಇಂದು ಗ್ರಾಹಕರನ್ನಾಗಿಸಿದೆ. ಇಂಥ ಸಂದರ್ಭವನ್ನು ಎದುರಿಸಬೇಕಾದರೆ ಬುದ್ಧ, ಬಸವ, ಮಾರ್ಕ್ಸ್, ಅಂಬೇಡ್ಕರ್‌ರವರನ್ನೂ ಒಳಗೊಂಡು ವಿಶ್ವದ ಶೋಷಿತ ಜನರ ಪರವಾಗಿರುವ ಮಹಾನ್ ಚಿಂತಕರ ಚಿಂತನೆಯ ಬೆಳಕಿನಲ್ಲಿ ನಾವೆಲ್ಲ ಸಾಗಬೇಕಿದೆ. ಆಯಾ ಕಾಲಕ್ಕೆ, ಆಯಾ ಸಂದರ್ಭದಲ್ಲಿ ಅವರು ಹೇಳಿದ ಮಾತುಗಳು ಇಂದು ನಮಗೆ ಹೇಗೆ ಪ್ರಸ್ತುತ ಎಂಬುದನ್ನು ಕಂಡುಕೊಳ್ಳಬೇಕಿದೆ. ನಮ್ಮ ಚಿಂತನೆಯನ್ನೂ, ಅನುಭವಗಳನ್ನೂ ಸೇರಿಸಿ ಅವರ ಚಿಂತನೆಗಳನ್ನು ನಮ್ಮ ಕಾಲದಲ್ಲಿ ವಿಸ್ತರಿಸಬೇಕಿದೆ. ನಮ್ಮ ದಲಿತ ಗೆಳೆಯರು ಅಂಬೇಡ್ಕರ್ ಅವರ ಮೇಲಿನ ಪ್ರೀತಿಯಿಂದ ಈ ಹಾಡು ಹೇಳುತ್ತಾರೆ : 'ನೀ ಹೋದ ಮರುದಿನ ಮೊದಲಂಗೆ ನಂಬದುಕು ಆಗ್ಯಾದೋ ಬಾಬಾ ಸಾಹೇಬ'. ಈ ಹಾಡು ಕೇಳಿದಾಗಲೆಲ್ಲ ನನಗನ್ನಿಸುತ್ತದೆ, ಮತ್ತೆ ಬಾಬಾಸಾಹೇಬ್ ರಾಮಜಿಯವರ ಮನೆಯಿಂದಲೇ ಹುಟ್ಟಿಬರಬೇಕೇನೋ ಎಂದು. ಹಾಗಾಗಕೂಡದು. ನಾವೆಲ್ಲ ಬಾಬಾಸಾಹೇಬರಾಗುವ, ಬುದ್ಧ, ಬಸವ, ಕಾರ್ಲ್ ಮಾರ್ಕ್ಸ್ ಆಗುವ ಪ್ರಯತ್ನ ಮಾಡಬೇಕಿದೆ. ನಮ್ಮ ಸಂದರ್ಭವನ್ನು ನಾವೇ ನಿಭಾಯಿಸಬೇಕು. ಅವರು ನೀಡಿದ ಅರಿವಿನ ಬೆಳಕಿನಲ್ಲಿ.

ಅಂಬೇಡ್ಕರ್ ಅವರು ಕೊನೆಯ ದಿನಗಳಲ್ಲಿ (೧೯೫೬) 'ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ' ಸ್ಥಾಪಿಸುವ ತಯಾರಿ ನಡೆಸಿದ್ದರು. ಆ ಪಕ್ಷದ ಸಂವಿಧಾನ, ಗೊತ್ತುಗುರಿ ಗಳನ್ನು ಸಿದ್ಧಪಡಿಸಿದ್ದರು. ಆದರೆ ಪಕ್ಷ ಸ್ಥಾಪಿಸುವ ಮುಂಚೆಯೇ ಕೊನೆಯುಸಿರೆಳೆದರು. ಆರ್.ಪಿ.ಐ.ನ ಗುರಿ "ಮನುಷ್ಯನಿಂದ ಮನುಷ್ಯನ, ಒಂದು ವರ್ಗದಿಂದ ಇನ್ನೊಂದು ವರ್ಗದ, ಒಂದು ದೇಶದಿಂದ ಇನ್ನೊಂದು ದೇಶದ ಮೇಲೆ ನಡೆಯುವ ದಬ್ಬಾಳಿಕೆ ಹಾಗೂ ಶೋಷಣೆಗಳಿಂದ ಸಮಾಜವನ್ನ ವಿಮೋಚನೆಗೊಳಿಸುವುದು" ಎಂದು ಹೇಳುತ್ತಾರೆ. ಇದು ಕಾರ್ಲ್ ಮಾರ್ಕ್ಸ್ ಅವರನ್ನೂ ಒಳಗೊಂಡು ವಿಶ್ವದ ಎಲ್ಲ ಶೋಷಿತ ಜನತೆಯ ಪರವಾದ ಚಿಂತಕರ, ಹೋರಾಟಗಾರರ ಗುರಿಯಾಗಿದೆ. ಇಂದು ಈ ಗುರಿಯನ್ನು ತಲುಪುವ ಮಾರ್ಗವನ್ನು ನಾವು ಕಂಡುಕೊಳ್ಳಬೇಕಿದೆ.

ಡಾ|| ಸಿದ್ದನಗೌಡ ಪಾಟೀಲ
ಘಾಟೆಭವನ, ವೈಯಾಲಿಕಾವಲ್, ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ರಾಜಕಾರಣ
## (ಒಂದು ವಿಡಂಬನೆ)

**ಸುರೇಶ ಹಡಪದ**

ದಿಢೀರ್ ಶ್ರೀಮಂತರಾಗಬೇಕೆ ? ಹಾಗಾದರೆ ಬಯಸಿದ್ದನ್ನು ಕೊಡುವ ಮಂತ್ರದಂಡದಂತಿರುವ ರಾಜಕೀಯಕ್ಕೆ ಬನ್ನಿ. ರಾಜಕೀಯದಲ್ಲಿ ಸದಸ್ಯತ್ವವನ್ನು ಪಡೆಯಲು ಯಾವ ಅರ್ಹತೆಯೂ ಬೇಕಾಗಿಲ್ಲ. ಇಷ್ಟೇ ಓದಿರಬೇಕೆಂಬ ಪ್ರಶ್ನೆಯೇ ಬರುವುದಿಲ್ಲ. ನಡತೆ ಹೇಗಿದ್ದರೇನಂತೆ, ಬಣ್ಣದ ಮಾತುಗಳನ್ನಾಡಿ ನಂಬಿಸಿ ಮೋಸಮಾಡುವ ಕಲೆ ಕರಗತವಾಗಿದ್ದರೆ ಸಾಕು. ಕನ್ನಡದ ಶಬ್ದಗಳನ್ನು ಸರಿಯಾಗಿ ಉಚ್ಚರಿಸಲು ಬಾರದಿದ್ದರೂ ಪರವಾಗಿಲ್ಲ. ಇಲಿ ಹೋದರೆ ಹುಲಿ ಹೋಯಿತು ಎಂಬಂತೆ ಜನರಿಗೆ ಆಶ್ವಾಸನೆಗಳನ್ನು ಸ್ವಲ್ಪ ಜಾಸ್ತಿಯೇ ನೀಡಿದರಾಯಿತು. ನೀವು ರಾಜಕೀಯದಲ್ಲಿ ಮಿಂಚುವಿರಿ. ಹಾ ! ಮತ್ತೊಂದು ವಿಷಯ ಮರೆತಿದ್ದೆ.

ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬ ನಾಚಿಕೆಗೇಡಿತನ ಇದ್ದರೆ ಇನ್ನೂ ಚೆನ್ನ. ಇಲ್ಲಿಯವರೆಗಿನ ಆಡಳಿತವನ್ನು ಗಮನಿಸಿದಾಗ ಇಂತಹ ಸೂಕ್ಷ್ಮ ವಿಷಯಗಳು ಎಲ್ಲರಿಗೂ ತಿಳಿದಿರಬಹುದು. ಬಡವರು ಗಾಳಿ, ಚಳಿ, ಮಳೆ, ಬಿಸಿಲು ಎನ್ನದೆ ಬೆವರು ಸುರಿಸಿ ದುಡಿದರೂ ಮೂರು ಹೊತ್ತಿನ ಊಟಕ್ಕಾಗಿ ಪರಿತಪಿಸಬೇಕಾದ ಪರಿಸ್ಥಿತಿ ಸಾಮಾನ್ಯ. ಜನರ ಜೀವನದಲ್ಲಿ ರುದ್ರತಾಂಡವವಾಡಬೇಕಾದರೆ, ಅದೇ ನಮ್ಮೊಂದಿಗಿದ್ದ ಜನರು ಮಾತನಾಡುವ ಕಲೆ, ಸೌಜನ್ಯ ನಾಟಕೀಯತೆ, ಉಗುಳಿದರೂ ತಮಗೇನು ಅಲ್ಲ ಬಿಡು, ಎಂಬಂತಹ ಪ್ರವೃತ್ತಿಯನ್ನು ಹೊಂದಿದ ಜನ ರಾಜಕೀಯವನ್ನು ಸೇರಿದ ಕೆಲವೇ ವರ್ಷಗಳಲ್ಲಿ ಅಂತಸ್ತಿನ ಮೇಲೆ ಅಂತಸ್ತನ್ನು ಕಟ್ಟಿಸಿ ಆಗರ್ಭ ಶ್ರೀಮಂತರಾಗಿದ್ದಾರೆ. ಎಂದರೆ ಇದಕ್ಕೇನು ಅರ್ಥ ?

ಹುಡುಕಬೇಕೇ ? ಛೇ, ಛೇ, ವೋಟುಗಳನ್ನು ಕೇಳಲು ಮನೆ ಬಾಗಿಲಿಗೆ ಬರುವುದು ಸಾಕಲ್ಲವೇ? ಏನವರ ನಯ ವಿನಯ! ನೇರವಾಗಿ ಹೃದಯಕ್ಕೆ ನಾಟಿ ಹೃದಯವನ್ನೇ ಕರಗಿಸುವಂತಹ ಪ್ರೀತಿ ವಾತ್ಸಲ್ಯದ ಮಾತುಗಳು, ಭಾರತೀಯ ಸಂಸ್ಕೃತಿ ಎಲ್ಲವೂ ಇವರ ಮನದಲ್ಲಿ ಮನೆ ಮಾಡಿವೆಯೇನೋ ಎಂಬಂತೆ ಭಾಸವಾಗುತ್ತಿದೆ. ಮಾತುಗಳಿಂದಲೇ ಮಹಲುಗಳನ್ನು ಕಟ್ಟಿ ಮುಗ್ಧ ಜನರ ಮನಗಳನ್ನು ಕರಗಿಸಿ ಅವರ ಬಳಿ ಇರುವ ಮತವೆಂಬ ಮಾಣಿಕ್ಯವನ್ನು ಕಸಿದುಕೊಂಡ ಮೇಲೆ ಅತ್ತಕಡೆ ತಿರುಗಿಯೂ ನೋಡದಂತಹ ಜನಸಂದಣಿಯೇ ರಾಜಕೀಯವಾಗಿದೆ. ಚುನಾವಣೆಗಳು ಬಂದಾಗ ನೋಡಬೇಕು ಅವರ ಹೈಜಂಪ್, ಲಾಂಗ್‌ಜಂಪ್‌ಗಳನ್ನು, ಪಕ್ಷದಿಂದ ಪಕ್ಷಕ್ಕೆ ಮಂಗಗಳಂತೆ ಜಿಗಿದು ಆಟವಾಡುತ್ತಾರೆ. ಇದೇ ಇಂದಿನ ರಾಜಕಾರಣವಾಗಿಬಿಟ್ಟಿದೆ.

ಸ್ಥಾನ ಕೊಟ್ಟವರ ಮಾನವನ್ನೇ ಹರಾಜು ಹಾಕಿ ವೋಟು ಕೊಟ್ಟವರ ಬೋಟಿಯನ್ನು ಮುರಿದು ದೇಶವನ್ನೇ ಲೂಟಿ ಮಾಡಿ ಪರಕೀಯರಿಗೆ ಮಾರುವ ಜನ ಇವರು. ಶತಮಾನಗಳಿಂದಲೂ ವಿದೇಶಿಯರು ನಮ್ಮ ದೇಶವನ್ನು ದೋಚುತ್ತಲೇ ಬಂದಿದ್ದಾರೆ. ಆದರೂ ನಾವು ಸುಮ್ಮನಿದ್ದೇವೆ. ಏಕೆಂದರೆ ನಾವು ಭಾರತೀಯರು ಉದಾರ ಮನೋಭಾವದವರಲ್ಲವೆ !

ಬ್ರಿಟಿಷರ ಬೂಟಿನಡಿಯಲ್ಲಿ ಸಿಕ್ಕ ನಾವು ಅವರಿಂದ ಬಿಡಿಸಿಕೊಂಡು ಬರಬೇಕಾದರೆ ೩೦೦ ವರ್ಷಗಳೇ ಕಳೆದವು. ಆದರೆ ಈ ಭ್ರಷ್ಟ ರಾಜಕಾರಣಿಗಳಿಂದ ಬಿಡಿಸಿಕೊಳ್ಳಲು ಇನ್ನೂ ಎಷ್ಟು ವರ್ಷಗಳು ಬೇಕೋ ಏನೋ ! ಬಿಡಿಸಿಕೊಳ್ಳುವದಾದರೂ ಹೇಗೆ ? ಏಕೆ ? ಎಷ್ಟಾದರೂ ಅವು ನಮ್ಮವರ ಬೂಟುಗಳಲ್ಲವೇ ?

ರೈತರೇ ಭಾರತದ ಬೆನ್ನೆಲುಬೆಂದು ಕೂಗಿ ಅವರ ಬೆನ್ನ ಮೇಲೆಯೇ ಸವಾರಿ ಮಾಡುತ್ತಿರುವವರು ಈ ಜನ. ಆದ್ದರಿಂದಲೇ ರೈತರ ಆತ್ಮಹತ್ಯೆ ಸರಣಿ ಆಗಾಗ ನಡೆಯುತ್ತಲೇ ಇರುತ್ತದೆ. ಹೊಲದ ರಕ್ಷಣೆಗೆಂದು ಹಾಕಿದ ಬೇಲಿಯೇ ಹೊಲವನ್ನು ಮೇಯ್ದರೆ ಅದನ್ನೇ ನಂಬಿದ ಜನರ ಪಾಡೇನು ?
ಅದು ಅವರ ಕರ್ಮವೇ ?



ಹುಡುಕಬೇಕೇ ? ಛೇ, ಛೇ, ವೋಟುಗಳನ್ನು ಕೇಳಲು ಮನೆ ಬಾಗಿಲಿಗೆ ಬರುವುದು ಸಾಕಲ್ಲವೇ? ಏನವರ ನಯ ವಿನಯ! ನೇರವಾಗಿ ಹೃದಯಕ್ಕೆ ನಾಟಿ ಹೃದಯವನ್ನೇ ಕರಗಿಸುವಂತಹ ಪ್ರೀತಿ ವಾತ್ಸಲ್ಯದ ಮಾತುಗಳು, ಭಾರತೀಯ ಸಂಸ್ಕೃತಿ ಎಲ್ಲವೂ ಇವರ ಮನದಲ್ಲಿ ಮನೆ ಮಾಡಿವೆಯೇನೋ ಎಂಬಂತೆ ಭಾಸವಾಗುತ್ತಿದೆ. ಮಾತುಗಳಂದಲೇ ಮಹಲುಗಳನ್ನು ಕಟ್ಟಿ ಮುಗ್ಧ ಜನರ ಮನಗಳನ್ನು ಕರಗಿಸಿ ಅವರ ಬಳಿ ಇರುವ ಮತವೆಂಬ ಮಾಣಿಕ್ಯವನ್ನು ಕಸಿದುಕೊಂಡ ಮೇಲೆ ಅತ್ತಕಡೆ ತಿರುಗಿಯೂ ನೋಡದಂತಹ ಜನಸಂದಣಿಯೇ ರಾಜಕೀಯವಾಗಿದೆ. ಚುನಾವಣೆಗಳು ಬಂದಾಗ ನೋಡಬೇಕು ಅವರ ಹೈಜಂಪ್, ಲಾಂಗ್‌ಜಂಪ್‌ಗಳನ್ನು ಪಕ್ಷದಿಂದ ಪಕ್ಷಕ್ಕೆ ಮಂಗಗಳಂತೆ ಜಿಗಿದು ಆಟವಾಡುತ್ತಾರೆ. ಇದೇ ಇಂದಿನ ರಾಜಕಾರಣವಾಗಿಬಿಟ್ಟಿದೆ.

## ಅಭಿನಂದನೆಗಳು

ಬೆಂಗಳೂರಿನ ಕನ್ನಡ ಸಾಹಿತ್ಯ ಸಂವರ್ಧಕ ಟ್ರಸ್ಟ್ ಕೊಡಮಾಡುವ ಸಿದ್ಧಯ್ಯ ಪುರಾಣಿಕರ ಸ್ಮರಣೆಯಲ್ಲಿ ೨೦೧೪ರ ಪ್ರತಿಷ್ಠಿತ 'ಕಾವ್ಯಾನಂದ' ಪ್ರಶಸ್ತಿಯು ಎಂ. ಅಬ್ದುಲ್ ರೆಹಮಾನ್ ಪಾಷಾರವರ 'ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ' ಎಂಬ ಕೃತಿಗೆ ದೊರೆತಿದೆ.

ಹಾಗೂ, ದ. ರಾ. ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಕೊಡುವ ೨೦೧೩ರ ಬೇಂದ್ರೆ ಗ್ರಂಥ ಬಹುಮಾನವು ಡಾ|| ಕೆ. ಎಸ್. ಶುಭ್ರತಾ ಅವರ 'ಹಿಂಸೆ, ದೌರ್ಜನ್ಯಕ್ಕೊಳಗಾದ ಮಕ್ಕಳ ಮನೋವಿಕಾಸ' ಕೃತಿಗೆ ದೊರೆತಿದೆ. ಇವೆರಡೂ ಕೃತಿಗಳು ನವಕರ್ನಾಟಕ ಪ್ರಕಾಶನದಿಂದ ಪ್ರಕಟಗೊಂಡಿವೆ. ಇವರಿಬ್ಬರಿಗೂ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದ ಅಭಿನಂದನೆಗಳು.

ಚುನಾವಣೆಯ ಸಮಯದಲ್ಲಿ ಸಕಲ ಕಲೆಗಳನ್ನು ಬಳಸಿ ಜನರ ಮನಸ್ಸನ್ನು ಸೆಳೆದು ಅವರ ಮೂಳೆಗಳನ್ನು ಏಣಿಯಾಗಿಸಿಕೊಂಡು, ಅದರಿಂದಲೇ ಮೇಲೇರಿದ ಮೇಲೆ ಸಹಾಯ ಮಾಡಿದ ಏಣಿಯನ್ನೇ ಒದೆಯುವ ತಂತ್ರಗಾರಿಕೆಯನ್ನು ಹೊಂದಿರುವ ಚಾಣಾಕ್ಷರಿವರು. ಏಕೆಂದರೆ ಆ ಏಣಿಯಿಂದ ತಮ್ಮೆತ್ತರಕ್ಕೆ ಬೇರೆ ಯಾರೂ ಏರಬಾರದಲ್ಲವೇ! ಆ ಕಾರಣಕ್ಕೆ ನದಿಮೂಲ, ಕುದುರೆಯ ಮೂಲ, ಋಷಿಮೂಲ ಯಾರೂ ಅರಿತಿಲ್ಲಾ ಎಂದು ಹಿರಿಯರು ಹೇಳಿರುವದು. ಅದರ ಜೊತೆ ಜೊತೆಗೆ ರಾಜಕಾರಣಿಗಳ ಮೂಲವನ್ನು ಯಾರೂ ಅರಿಯ ಲಾಗುವದಿಲ್ಲ ಎಂದಿದ್ದರೆ, ಆ ಮಾತು ಇನ್ನಷ್ಟು ಪೂರ್ಣವಾಗುತ್ತಿತ್ತು, ಅಲ್ಲವೆ?

ಅಮಾಯಕರ ತಲೆಗಳನ್ನು ಇಟ್ಟಿಗೆಗಳನ್ನಾಗಿಸಿ ಕೊಂಡು ಅವರ ಮಾಂಸ, ರಕ್ತವನ್ನೇ ಸಿಮೆಂಟನ್ನಾಗಿಸಿ ಕೊಂಡು ತಮ್ಮ ಸುತ್ತಲೂ ಭದ್ರವಾದ ಕೋಟೆಯನ್ನು ಕಟ್ಟಿಕೊಳ್ಳುತ್ತಿದ್ದಾರೆ. ಆ ಕೋಟೆಯಲ್ಲಡಗಿದ ಅಮಾಯಕರ ಮೂಳೆ ತಲೆಬುರುಡೆಗಳು ಭೂತಗಳಾಗಿ ಇವರನ್ನು ಬಲಿತೆಗೆದುಕೊಳ್ಳುವದು ಯಾವಾಗ? ಮೇಲೆ ಆಕರ್ಷಕ ಮೈಮಾಟ, ಒಳಗೆ ಬರಿ ಹುಳುಗಳನ್ನು ತುಂಬಿಕೊಂಡಿರುವ ಹತ್ತಿ ಹಣ್ಣಿನಂತೆ ಈ ಜನರ ಮನಗಳು.

ಮನುಷ್ಯ ಕಾಲಕ್ಕೆ ತಕ್ಕಂತೆ ಬದಲಾಗುತ್ತಾನೆ ಎಂಬುದು ಕೇಳಿದ ಮತ್ತು ನಮ್ಮೆಲ್ಲರ ಅನುಭವಕ್ಕೆ ಬಂದಿರುವ ವಿಷಯ. ಆದರೆ ರಾಜಕಾರಣಿಯಾದ ಕೆಲವೇ ದಿನಗಳಲ್ಲಿ ಗಗನ ಚುಂಬಿ ಕಟ್ಟಡಗಳ ಒಡೆಯನಾಗಿ ನಿಲುಕದ ನಕ್ಷತ್ರವಾಗುತ್ತಾನೆ ಎಂಬ ಆಶ್ಚರ್ಯಕರ ಸಂಗತಿಯನ್ನು ತಿಳಿಯಬೇಕಾದರೆ, ಬನ್ನಿ ರಾಜಕೀಯವೆಂಬ ಮಾಯಾಬಜಾರಿಗೆ. ಅಡಿಯಿಂದ ಮುಡಿಯವರೆಗೆ, ಮುಡಿಯಿಂದ ಅಡಿಯ ವರೆಗೆ ಅಳೆದರೂ ಅವರ ಎತ್ತರ ಅಷ್ಟೆ, ಆದರೆ ಅವರ ಅಂಗಾಂಗಗಳು ಮಾತ್ರ ದೇವರಿಗೆ ಬಿಟ್ಟ ಕೋಣದಂತೆ ಕೊಬ್ಬಿರುತ್ತವೆ, ದೇಹವನ್ನು ಬಗೆದು ಹಣದ ಕಂತೆಗಳನ್ನು ಇಟ್ಟು ಹೊಲೆಯಲು ಬರುವಂತಿದ್ದರೆ, ಅವರು ತಮ್ಮ ದೇಹವನ್ನೇ ಕಪ್ಪು ಹಣವನ್ನಿಡುವ ಸ್ವಿಸ್ ಬ್ಯಾಂಕನ್ನಾಗಿಸಿಕೊಂಡುಬಿಡುತ್ತಿದ್ದರೇನೊ ಎನ್ನುವ ಅನುಮಾನ ನನ್ನನ್ನು ಕಾಡುತ್ತಿದೆ.

ರಾಜಕೀಯದ ಬಗ್ಗೆ ಹಲವಾರು ರಾಜ್ಯಶಾಸ್ತ್ರಜ್ಞರು ಹಲವಾರು ನುಡಿಮುತ್ತುಗಳನ್ನು ಬರೆದಿದ್ದಾರೆ. ಮತ್ತೆ ಅವುಗಳನ್ನು ಇಲ್ಲಿ ಪ್ರಸ್ತಾಪಮಾಡುವದು ಬೇಡ. ತಪ್ಪು ಮಾಡಿದವರಿಗೆ ನರಕದಲ್ಲಿ ಚಿತ್ರವಿಚಿತ್ರವಾದ ಶಿಕ್ಷೆಗಳನ್ನು ನೀಡುತ್ತಾರಂತೆ, ಆದರೆ ಅದನ್ನು ಯಾರೂ ಕಂಡಿಲ್ಲ, ನಾವು ರಾಜಕೀಯದ ಅಂತರಂಗವನ್ನು ಒಳಹೊಕ್ಕಾಗ ತಿಳಿಯುತ್ತದೆ ಆ ನರಕ ಇದೆ ಎಂದು. ಇಲ್ಲಿಯೂ ಶಿಕ್ಷೆ ನೀಡುತ್ತಾರೆ. ತಪ್ಪಿತಸ್ಥರಿಗಲ್ಲಾ! ಅಮಾಯಕರಿಗೆ, ಮುಗ್ಧರಿಗೆ, ಮೃದು ಸ್ವಭಾವದವರಿಗೆ.

ಹೆಸರಿಗೆ ಮಾತ್ರ ಪ್ರಜಾಪ್ರಭುತ್ವ. ಆದರೆ ಇಲ್ಲಿ ಯಾರು ಪ್ರಭುಗಳು, ಯಾರು ಪ್ರಜೆಗಳು ಎಂಬುದೇ ತಿಳಿಯುತ್ತಿಲ್ಲ. ಇದೊಂದು ಯಕ್ಷ ಪ್ರಶ್ನೆಯಾಗಿ ಪರಿಣಮಿಸಿದೆ. 'ರಾಜಕಾರಣಿಗಳೆಂದರೆ ಪ್ರಜಾ ಸೇವಕರು, ಅವರು ಪ್ರಜೆಗಳ ಸೇವೆಯನ್ನು ಮಾಡಬೇಕು' ಎಂಬ ಮಾತೊಂದಿದೆ. ಆದರೆ ಇಲ್ಲಿ ಸೇವಕರೇ ಶೀಟನ್ನೇರಿ ಒಡೆಯರನ್ನು ಜಾಡಿಸಿ ಒದೆಯುವ ಪ್ರವೃತ್ತಿ ಬೆಳೆದು ಬಂದಿದೆಯಲ್ಲಾ ಇದಕ್ಕೇನೆನ್ನಬೇಕು?

ಇಷ್ಟೆಲ್ಲಾ ವಂಚನೆ ನಡೆಯುತ್ತಿದ್ದರೂ ನಾವೇಕೆ ಸುಮ್ಮನಿದ್ದೇವೆ? ಅದೇ ಸೋಜಿಗದ ಸಂಗತಿ. ಯೋಚನೆ ಮಾಡಿ ಅವರ ವಿರುದ್ಧ ಸಿಡಿದೇಳುವ ಶಕ್ತಿ ನಮಗೆ ಇಲ್ಲವೋ? ಇದ್ದರೂ ಅದು ಪ್ರಯೋಜನಕ್ಕೆ ಬಾರದಾಗಿದೆಯೋ? ಇದೇ ಶಕ್ತಿ ಇತರ ಕೆಲವು ದೇಶಗಳಲ್ಲಿ ಹೇಗೆ ಸಾಧ್ಯವಾಗಿದೆ? ಅದು ನಮ್ಮಲ್ಲಿ ಸಾಧ್ಯವಾಗುವುದು ಯಾವಾಗ? ಬಡಜನರೆಲ್ಲರೂ ಅವರ ಎದೆ ನಡುಗುವಂತೆ ಗುಡುಗುವದು ಯಾವಾಗ? ಗುಡುಗು ಸಿಡಿಲಾಗಿ ಭ್ರಷ್ಟ ರಾಜಕಾರಣಿಗಳನ್ನು ಗಡೀಪಾರು ಮಾಡುವದು ಯಾವಾಗ? – ಇಂತಹ ಹಲವಾರು ಪ್ರಶ್ನೆಗಳಿಗೆ ಸೂಕ್ತ ಉತ್ತರ ದೊರೆಯುವದು ಎಲ್ಲಾ ಪ್ರಜ್ಞಾವಂತ ಯುವಕ ಯುವತಿಯರು ರಾಜಕೀಯವೆಂಬ ಅಖಾಡಕ್ಕೆ ಇಳಿದಾಗ ಮಾತ್ರ.

ಹೀಗೆಂದ ಮಾತ್ರಕ್ಕೆ ರಾಜಕಾರಣದಲ್ಲಿ ಉತ್ಸಾಹಿ, ಪ್ರಾಮಾಣಿಕ, ಸಾತ್ವಿಕ ರಾಜಕಾರಣಿಗಳಿಲ್ಲ ಎಂದರ್ಥವಲ್ಲ. ಭ್ರಷ್ಟಾಚಾರವೆಂಬ ಎಲೆಗಳ ಮಧ್ಯೆ ಅಡಗಿರುವ ಕಾಯಿಗಳಂತಿದ್ದಾರೆ. ಈ ಎಲೆಗಳನ್ನು ಸರಿಸಿ ಕಾಯಿಯನ್ನು ಮಾಗಲು ಬಿಟ್ಟು ಅದರ ಸವಿಯನ್ನು ದೇಶಕ್ಕೆ ಉಣಬಡಿಸುವ ಕಾರ್ಯ ನಮ್ಮದಾಗಬೇಕಾಗಿದೆ.

ನೋಡಿ, ಒಂದೆಡೆ "ಭಾರತ ಪ್ರಕಾಶಿಸುತ್ತಿದೆ, ಇನ್ನೊಂದೆಡೆ, ಸಾಧನೆಯ ಅರ್ಧ ಹಾದಿ ಮುಗಿದಿದೆ" ಎನ್ನುವ ಡಂಭಾಚಾರದ ಲಾಭಾಕಾಂಕ್ಷೆಯ ಅಣಿಮುತ್ತುಗಳು ರಾಜಕಾರಣಿಗಳಿಂದ ಉದುರುತ್ತವೆ. ಒಟ್ಟಿನಲ್ಲಿ, ದೇಶ ರಾಜಕಾರಣವಾಗುತ್ತಿದೆ. ಪ್ರಶ್ನೆ ಕೇಳಬೇಕೆ? ಉತ್ತರ ಹುಡುಕಬೇಕೆ? ಎಲ್ಲಿ? ಯಾರನ್ನು? ಒಮ್ಮೆ ನೀವು ತಲೆ ಕೆರೆದುಕೊಳ್ಳಿ.

**ಸುರೇಶ ಹಡಪದ**
ಬಳಗಾನೂರು, ತಾ|| ಸಿಂಧನೂರು, ಜಿ|| ರಾಯಚೂರು

ಹೆದ್ದಾರಿಗಳಿನ್ನು ಹಸಿರು!
ಹಸಿರು ಹೆದ್ದಾರಿ ನೀತಿ
'ಹಸಿರು ಗ್ಲಾಸ್' ಹಾಕಿರುವ ವಾಹನದಲ್ಲಿ ಕುಳಿತು ರಸ್ತೆಯಲ್ಲಿ ಸಂಚರಿಸೋಣ ಬಿಡಿ!




ರಾಧಾ ಟೇಕಲ್

# ಮೂರ್ತಿ ಚಿಕ್ಕದಾದರೂ...

ಮಿಸೆಸ್ ಶ್ರೀನಾಥ್‌ಗೆ ರಾತ್ರಿಯೆಲ್ಲಾ ಜ್ವರ. ಆದ್ದರಿಂದ ಬಡಬಡಿಸುತ್ತಲೇ ಇದ್ದರೆಂದು ನಮ್ಮ ನೆರೆಮನೆಯಲ್ಲಿದ್ದ ಸೆಕ್ಯೂರಿಟಿ ಆಫೀಸರ್ ಶ್ರೀನಾಥ್ ನರ್ಸಿಂಗ್ ಹೋಂಗೆ ಕರೆದುಕೊಂಡು ಬಂದಿದ್ದರು. ಅವರ ತಪಾಸಣೆ ಇನ್ನೇನು ಮುಗಿಯಬೇಕೆನ್ನುವಾಗ, ಮೊಬೈಲ್ ರಿಂಗಾಯ್ತು. ಅವರನ್ನು ಕುರ್ಚಿಯಲ್ಲಿ ಕುಳಿತುಕೊಳ್ಳಿರೆಂದು ಸನ್ನೆ ಮಾಡಿ 'ಹಲೋ' ಎಂದೆ. "ಮಮ್ಮಿ, ನೀನೊಬ್ಬೇ ಇದೀಯಾ?" ಸ್ವರದಲ್ಲಿ ಆತಂಕವಿತ್ತು. "ಜೊತೇಲಿ ಪೇಷೆಂಟ್ಸ್ ಇರೋ ಸಮಯ ಅಲ್ವಾ ಇದು?"



"ನಿನ್ಹತ್ರ ಅರ್ಜೆಂಟಾಗಿ ಮಾತಾಡ್ಬೇಕಿತ್ತು, ಇನ್ನರ್ಧ ಘಂಟೆ ಬಿಟ್ಟು ಫೋನ್ ಮಾಡ್ತೀನಿ, ಸ್ವಲ್ಪ ಫ್ರೀ ಮಾಡ್ಕೋಮ್ಮ." ಈಗಲೇ ಮಾತಾಡಲೇಬೇಕು ಎಂಬ ಕಾತರವನ್ನು ಅವಳ ಧ್ವನಿಯಲ್ಲೇ ಗುರುತಿಸಿದೆ. "ಆಗಲಿ" ಎಂದು ಕೆಳಗಿಟ್ಟೆ ನನ್ನ ಮೊಬೈಲನ್ನು. ಆದರೂ ಏನೋ ಕಳವಳ. ಹೊರರೋಗಿಗಳ ತಪಾಸಣೆ ಮುಂದುವರಿದಿದ್ದರೂ ಮನದಲ್ಲಿ ತುಮುಲ ನಡೆದೇ ಇತ್ತು.

"ಬಿ.ಪಿ. ಮೊದಲಿಗಿಂತ ಜಾಸ್ತಿಯಾಗಿದೆ. ಮಗನ ವಿಷ್ಯಾನೇ ತಲೆ ತುಂಬ. ಹೆಚ್ಚು ಚಿಂತೆ ಮಾಡ್ಬೇಡಿ" ಎಂದು ಭುಜ ಸವರಿದೆ. "ಚಿಂತೆ ಮಾಡೋದು ಬಿಟ್ಟು ಬೇರೇನಿದೆ ಹೇಳಿ, ತಾಯಿಗೆ" ಎಂದು ಒಣ ನಗೆ ಬೀರಿದರು ಗಿರಿಜ, ಶಂಕರನಾರಾಯಣರ ಪತ್ನಿ. "ಗಿರಿಜ, ಚಿಂತೆ ಅನ್ನೋದು ಪ್ರತಿಯೊಬ್ಬರಿಗೂ ಇರುತ್ತೆ, ನಿಜ. ಈಗ್ತಾನೇ ವಿಮಲಾಗೂ ಹೇಳಿಕಳಿಸಿದೀನಿ. ಚಿಂತೆ ಮಾಡಿ, ಆದ್ರೆ ನಿಮ್ಮ ಆರೋಗ್ಯವನ್ನು ಹಾಳುಮಾಡಿಕೊಳ್ಳುವಷ್ಟು ಚಿಂತೆ ಬೇಡ. ಬಿ.ಪಿ. ಜಾಸ್ತಿ ಆದ್ರೆ ಆಗೋ ಅನಾಹುತ ಗೊತ್ತಲ್ವಾ; ಸ್ವಲ್ಪ ಕಂಟ್ರೋಲ್ ಮಾಡ್ಕೊಳ್ಳಿ."

"ಅದ್ಹೇಗೆ ಡಾಕ್ಟ್ರೆ?" ಕಣ್ಣಲ್ಲಿ ನೀರು ಜಿನುಗಿತ್ತು. ಒಬ್ಬನೇ ಮಗ. ಹೊರದೇಶದಲ್ಲಿ ಓದಲೆಂದು ಹೋಗಿ, ಅಲ್ಲಿ ಯಾವುದೋ ವ್ಯವಹಾರದಲ್ಲಿ ಸಿಲುಕಿ ಕೊಲೆ ಆಗಿದ್ದ.

"ನಿಮ್ಮ ಮನಸ್ಸನ್ನು ಬೇರೆ ಕಡೆ ಹಾಯಿಸಿ. ಹೊಲಿಗೆ, ತೋಟದ ಉಸ್ತುವಾರಿಕೆ ಅಥವಾ ಯಾವುದಾದರೂ ಲೈಬ್ರರಿಗೆ ಸೇರಿ ಪುಸ್ತಕಗಳನ್ನು ಓದಿ, ಮನಸ್ಸು ಮಾಡಿದರೆ, ಖಂಡಿತ ಇದೆಲ್ಲಾ ಮಾಡುವುದು ಕಷ್ಟ ಅಲ್ಲ. ಹಾಗೆ ಮಾಡಿನೋಡಿ. ಆಮೇಲೆ ಮಾತ್ರೆಗಳು ನುಂಗೋದು ಎಷ್ಟೋ ಕಡಿಮೆಯಾಗಿಬಿಡುತ್ತೆ." ಮಾತುಗಳಲ್ಲಿ ಸಾಂತ್ವನ ನೀಡಬಲ್ಲೆ, ಅಷ್ಟೆ. ನನ್ನ ಸಾಂತ್ವನದ ಮಾತುಗಳು

ಕಷ್ಟಜೀವಿ ರಂಗಜ್ಜನಿಗೆ ಕಾಯಿಲೆ, ಸಾಮಾನ್ಯವಾದ ಔಷಧಿಗಳಿಂದ ಗುಣಪಡಿಸಲಾಗುವಂಥದ್ದಲ್ಲ. ಇಲ್ಲೇ ಹತ್ತು – ಹದಿನೈದು ವಾರಗಳಿದ್ದರೆ ಹೇಗೋ ತಹಬಂದಿಗೆ ತರಬಹುದು. ಆದರೆ ಅವನು ಒಪ್ಪುತ್ತಿಲ್ಲ. ರಂಗಜ್ಜನ ಮೊಮ್ಮಗಳು ಬಲು ಚೂಟಿ. ಆಸ್ಪತ್ರೆಯಲ್ಲಿ ತಾತ ಇರುವಷ್ಟು ದಿನವೂ ಅವನೊಂದಿಗೇ ಮಲಗಿದ್ದ ಇತರ ರೋಗಿಗಳಿಗೂ ಗಂಗ ಆಪ್ತಳಾಗಿ ಬಿಟ್ಟಳು. ಅವರಿಗೆ ಬೇಕಾದ ನೀರು, ಹಾಲು, ತಂದುಕೊಡುವುದು ಮುಂತಾದ ಕೆಲಸಗಳನ್ನು ಒಬ್ಬ ನುರಿತ ದಾದಿಗಿಂತ ಚೆನ್ನಾಗಿ ಮಾಡುತ್ತಿದ್ದಳು. ನನ್ನೊಂದಿಗೆ ಮಿತಾಲಿಯೂ ನರ್ಸಿಂಗ್ ಹೋಂಗೆ ಬರುತ್ತಿದ್ದಳಾಗಿ, ಗಂಗ ಮಿತಾಲಿ ಒಳ್ಳೆಯ ಸ್ನೇಹಿತರಾಗಿ ಬಿಟ್ಟರು. ಆ ಪುಟ್ಟ ಪೋರಿ, ಬಹಳ ದೊಡ್ಡವಳಂತೆ ಮಿತಾಲಿಯನ್ನು ಮುದ್ದಿಸುತ್ತಿದ್ದಳು. ಆ ವಯಸ್ಸಿಗೆ ಬೇಕಾದ ಜೊತೆಗಾರಿಕೆಯೋ ಅಥವಾ ಗಂಗಳಲ್ಲಿ ಅದೇನು ಮೋಡಿ ಇತ್ತೋ, ಅವಳು ರಂಗಜ್ಜನೊಂದಿಗೆ ಹೊರಟುನಿಂತಾಗ, ತಾಯಿಯನ್ನು ಬಿಟ್ಟಾಗಲೂ ಅಳದಿದ್ದ ಮಿತಾಲಿ, ಜೋರಾಗಿ ಅಳುವುದಕ್ಕೆ ಶುರು ಮಾಡಿದಳು. ಯಾರು ಸಮಾಧಾನ ಮಾಡಿದರೂ ಜಗ್ಗಲಿಲ್ಲ.

ಆಕೆಯ ಕಣ್ಣು ತೋಯಿಸಿತು. ನಸುನಗುತ್ತಾ ಔಷಧಿ ಬರೆದುಕೊಟ್ಟೆ. "ಮಾತ್ರೆಗಳನ್ನು ನುಂಗುವಾಗ ತೊಗೋಬೇಕಲ್ಲಪ್ಪಾಂತ ತೊಗೋಬೇಡಿ. ಇದ್ರಿಂದ ಖಂಡಿತ ನೀವು ಅಪಾಯದಿಂದ ಆಚೆ ಬರ್ತೀರಿ ಅಂತ ಅಂದ್ಕೊಂಡು ತೊಗೊಳ್ಳಿ. ಮನಸ್ಸನ್ನು ನಾವು ಹತೋಟೀಲಿ ಇಟ್ಕೋಬೇಕು; ಅದರ ಹತೋಟೀಲಿ ನಾವಿರಬಾರದು ಯಾವಾಗ್ಲೂ."

"ಇನ್ಮೇಲೆ ದಿನಾ ಒಂದರ್ಧ ಘಂಟೆ ನಿಮ್ಹತ್ರ ಬಂದು ಮಾತಾಡ್ಕೊಂಡು ಹೋಗ್ತೀನಿ" ಎಂದರು ಆಕೆ. ಕಣ್ಣುಗಳಲ್ಲಿ ಒಂದು ರೀತಿಯ ಆತ್ಮಸ್ಥೈರ್ಯ ಕಂಡಿತ್ತು. "ಖಂಡಿತ ಬನ್ನಿ" ಎನ್ನುತ್ತಾ ಆಕೆಯನ್ನು ಕಳಿಸಿಕೊಟ್ಟೆ.

ಹೊರಗಡೆ ರೋಗಿಗಳು ಯಾರೂ ಇರಲಿಲ್ಲ. ಬೇರೆಯವರು ಬರುವಷ್ಟರಲ್ಲಿ ವಿಜಿಗೆ ಫೋನ್ ಮಾಡೋಣವೆಂದು ಡಯಲ್ ಮಾಡಿದೆ.

"ಏನು ವಿಜಿ, ಬೆಳಿಗ್ಗೆ ಬೆಳಿಗ್ಗೇನೇ ಮಾಡಿದ್ದೆ ?" ಅವಳು ಸಾಧಾರಣವಾಗಿ ಮಾಡೋದೇ ರಾತ್ರಿ, ಅವಳ ಕೆಲಸವೆಲ್ಲಾ ಮುಗಿದ ಮೇಲೆ.

"ಮಮ್ಮಿ, ತುಂಬ ಟೆನ್ಷನ್ ಆಗ್ಹೋಗಿದೆ. ಇದಕ್ಕೆ ನಿನ್ನಿಂದಲೇ ಪರಿಹಾರ ಆಗ್ಬೇಕೂಂತ ನಿನ್ನಳಿಯ ಹೇಳ್ತಿದಾರೆ."

"ಎರಡನೆಯ ಮಗುವಿನ ಆಗಮನವೇ ? ಕೆಲಸದ ಒತ್ತಡದಲ್ಲಿ ಅದು ಬೇಡವೆನ್ನಿಸಿದೆಯೇ? ಅದರ ಬಗ್ಗೆ ನಾನೇನು ಪರಿಹಾರ ನೀಡಬಲ್ಲೆ. ಅವರವರ ಸ್ವಂತ ವಿಷಯ..."

"ಯಾಕೆ ? ಏನಂಥ ಸಮಸ್ಯೆ?"

"ನಮ್ಮತ್ತೆ ಮಾವ ಇಬ್ರೂ ಒಂದಾರು ತಿಂಗಳಿಗೆ ನ್ಯೂಯಾರ್ಕ್‌ನಲ್ಲಿ ಇರುವ ಮಗಳ ಹತ್ರ ಹೊರಟಿದಾರೆ."

"ಅದಕ್ಕೇನೀಗ?" ತಲೆಬುಡ ಅರ್ಥವಾಗಲಿಲ್ಲ ಒಂದು ಕ್ಷಣ. ಅಷ್ಟರಲ್ಲೇ ಹೊಳೆಯಿತು– ಮಿತಾಲಿಯ ಸಂರಕ್ಷಣೆ ಬಗ್ಗೆ.

"ಮಗಳನ್ನು ನೋಡ್ಕೊಳ್ಳೋದೇ ಸಮಸ್ಯೆ. ಇಲ್ಲಿ ಆ ಥರಾ ಕೆಲಸದವರು ಯಾರೂ ಸಿಗಲ್ಲ. ಸಿಕ್ರೂ ನಂಗೆ ಭಯ ಯಾರ ಹತ್ರ ಬಿಡೋಕ್ಕೂ, ಅದಕ್ಕೆ ಒಂದಾರು ತಿಂಗಳು ನೀನೂ ಡ್ಯಾಡಿ ನೋಡ್ಕೋತೀರಾಂತ ಕೇಳಕ್ಕೆ. ನೀನು 'ಹ್ಞೂಂ' ಅಂದ್ರೆ ಮುಂದಿನ ಭಾನುವಾರದಿಂದ ಒಂದು ವಾರ ರಜೆ ಕೇಳಬಹುದು.

ನಾನೇನೂ ಮಾತನಾಡಲಿಲ್ಲ.

"ನೀನು ಉಹ್ಞೂಂ ಅನ್ಬೇಡ ಮಮ್ಮಿ. ನಂಗೊತ್ತು ನರ್ಸಿಂಗ್ ಹೋಂ ಕೆಲಸದಲ್ಲಿ ಅವಳನ್ನ ನೋಡ್ಕೊಳ್ಳೋದು ಸುಲಭ ಅಲ್ಲಾಂತ. ಅದಕ್ಕೇ ಯಾರಾದ್ರೂ ಬೇಬಿಸಿಟ್ಟರ್‌ನ ನೋಡು ಮಮ್ಮಿ, ನಿಂಗೆಷ್ಟೊಂದು ಜನ ಗೊತ್ತು. ಯಾರಾದ್ರೂ ಮಾಡಿಕೊಡ್ತಾರೆ. ಆ ಖರ್ಚೆಗೆಲ್ಲಾ ನಾನು ದುಡ್ಡು ಕಳಿಸ್ತೀನಿ, ಮಮ್ಮಿ, ಯಾಕೆ ಏನೂ ಮಾತಾಡ್ತಾ ಇಲ್ಲ."

ಕೈ ತುಂಬ ಸಂಪಾದಿಸುತ್ತಿರುವ ಈಗಿನ ಪೀಳಿಗೆಗೆ ತಮ್ಮಂತೆ, ತಂದೆ ತಾಯಿ ಖರ್ಚು ಮಾಡಲ್ಲ. ಜಿಪುಣರು ಅಂತಾನೋ, ಕೈಲಾಗದವರು ಅಂತಾನೋ ಒಂದು ರೀತಿಲಿ ಮಾತು.

"ಮಿತಾಲೀನ ಕರ್ಕೊಂಡು ಯಾವಾಗ ಬರ್ತೀಯ?" ಎಂದು ನಾನು ಕೇಳಿದ್ದೇ ತಡ ಹೈ ಜಂಪ್ ಮಾಡಿದವಳಂತಿತ್ತು ಅವಳ ಧ್ವನಿಯಲ್ಲಿದ್ದ ಸಂತೋಷ.

"ಯು ಆರ್ ಚೋ ಚ್ವೀಟ್ ಮಮ್ಮಿ – ನೀನು ಇಲ್ಲಾಂತ ಹೇಳೋದಿಲ್ಲ ಅಂತ ನಂಗೆ ನಂಬಿಕೆ ಇತ್ತು. ಮುಂದಿನ ಶುಕ್ರವಾರ ಬರ್ತೀನಿ. ಶನಿವಾರ, ಭಾನುವಾರ ಇದ್ದು ಸೋಮವಾರ ಬೆಳಿಗ್ಗೆ ವಾಪಸ್ ಬಂದ್ಬಿಡ್ತೀನಿ" ಎಂದು ಫೋನ್ ಕೆಳಗಿಟ್ಟಳು.

ಮಕ್ಕಳೆಲ್ಲಾ ಅಷ್ಟೇ. ಅವರ ಮೂಗಿನ ನೇರಕ್ಕೆ ಹೋದರೆ, ಯು ಆರ್ ಚೋ ಚ್ವೀಟ್. ಸ್ವಲ್ಪ ತಡೆದರೂ, "ಓಹ್ ! ನೀನು ನನ್ನ ಸ್ವಂತ ತಾಯಿನೇ ಅಲ್ಲ" ಎಂದು ಕೂಗಾಡಿ, ರೇಗಾಡಿ ಅಳೋದು.

ಮಿತಾಲಿ ಬಂದವಳೇ ಕುತ್ತಿಗೆಗೆ ಜೋತು ಬಿದ್ದಳು. ಅವಳ ಮುದ್ದು ಮುಖ, ಮಾತುಗಳು ಮನಸ್ಸಿಗೆ ಮುದ ನೀಡಿತ್ತು.

ವಿಜಿ ಎಲ್ಲಿದ್ದರಲ್ಲಿ ಮಾತಿನ ಮಳೆ; ನಗುವಿನ ಹೊಳೆ. ರಾತ್ರಿ ಮಲಗುವಾಗ, "ನಿಮ್ಮ ಆಯಾಗಳ್ಗೇ ಯಾರ್ಗಾದ್ರೂ ಹೇಳು ಮಮ್ಮಿ, ದುಡ್ಡು ನಾನು ಕೊಡ್ತೀನಿ" ಎಂದವಳೇ ನನ್ನ ಮುಖವನ್ನು ನೋಡಿ, "ನಿಂಗೆ ಕೊಡೋಕ್ಕಾಗಲ್ಲ ಅಂತಲ್ಲ ಮಮ್ಮಿ, ನನ್ನ ಹತ್ರಾನೇ ಇದ್ದಿದ್ರೂ, ನಾನು ಕೊಡ್ಬೇಕಾಗ್ತಿತ್ತು ತಾನೇ". ಎಂದಳು ಸಮಜಾಯಿಷಿ ನೀಡುವಂತೆ.

ಮಗಳನ್ನು ಬಿಟ್ಟು ಹೊರಡುವಾಗ, ಮಗಳೇ ಸಮಾಧಾನ ಮಾಡುತ್ತಿದ್ದಳು. "ನೀನೇನೂ ಅಳ್ಬೇಡ ಮಮ್ಮಿ, ನಾನಿಲ್ಲಿ ಅಮ್ಮಮ್ಮಗೆ ಕಷ್ಟವಾಗದ ಹಾಗೆ ಇರ್ತೀನಿ. ಒಂದ್ ಸ್ವಲ್ಪಾನೂ ಗಲಾಟೆ ಮಾಡಲ್ಲ" ಎಂದು ಅಮ್ಮನ ಕೆನ್ನೆ ಸವರುತ್ತಿದ್ದಳು.

ಹಿರಿಯೂರಿನಲ್ಲಿ ಚಿಕ್ಕಪ್ಪನೇ ತಂದೆ– ತಾಯಿಯಾಗಿ ನನ್ನನ್ನು ಬೆಳೆಸಿದ ದಿನಗಳು ನೆನಪಿಗೆ ಬಂತು. ನಾನು ಮೆಡಿಕಲ್ ಸೇರಲು ಬೆಂಗಳೂರಿಗೆ ಬಂದದ್ದು, ಅಲ್ಲಿ ತನ್ನ ಸೀನಿಯರ್ ರಘು ಪರಿಚಯವಾಗಿ ಪರಿಣಯದವರೆಗೂ ಹೋಗಿದ್ದು, ನಂತರ, ತಾನೂ ತನ್ನ ಸಂಸಾರ, ಪುಟ್ಟ ಮಗು ವಿಜಯ ಹುಟ್ಟಿದಾಗ ಮನೆಯಲ್ಲಿ ನೋಡಿಕೊಳ್ಳಲು ದೊಡ್ಡವರಿಲ್ಲದ ಕೊರತೆ ನರ್ಸಿಂಗ್ ಹೋಂಗೆ ಹೋಗಲಾಗದಂತಹ ಅಸಹಾಯಕತೆ, ಹೊರಟಾಗ ಅವಳನ್ನೂ ಎತ್ತಿಕೊಂಡೇ ಹೊರಟದಿನಗಳು... ಎಲ್ಲಾ ನೆನಪಿನ ಸುರುಳಿ.

ಮಿತಾಲಿ ಮುದ್ದಿನ ಖನಿ. ಅವಳೊಂದಿಗೆ ಕಾಲ ಕಳೆಯುವಾಗ ಕೆಲವೊಮ್ಮೆ ನಾನೂ ಚಿಕ್ಕವಳಾದೆ, ಎಷ್ಟೋ ಸಲ ನರ್ಸಿಂಗ್ ಹೋಂಗೆ ಹೋಗದೆ ಉಳಿದದ್ದೂ ಉಂಟು. ಇದು ನಿತ್ಯವೂ ಆಗಬಾರದೆಂದು ಕೆಲಸದವಳಿಗಾಗಿ ಹುಡುಕಾಟ ನಡೆಸಿದರೂ ಯಾರೂ ಸರಿ ಬರಲಿಲ್ಲ.

ಇದೇ ಸಮಯದಲ್ಲಿ ನನ್ನ ತವರೂರಿನಿಂದ ಬಾಲ್ಯ ಗೆಳತಿ ರಮಾ, ಅವಳ ಗಂಡ ರಾಜಣ್ಣ, ದಿಢೀರನೆ ಬಂದರು. ಜೊತೆಯಲ್ಲಿ ರಂಗಜ್ಜ, ನಮ್ಮ ಓರಗೆಯವನೇ ಆಗಿದ್ದ ವೆಂಕನ ತಂದೆ ! ನಮ್ಮ ಪ್ರೈಮರಿ ಶಾಲೆಯ ಸಹಪಾಠಿ; ಅದಕ್ಕಿಂತ ಮಿಗಿಲಾಗಿ ನಮ್ಮೆಲ್ಲರಿಗೂ ಎಲ್ಲಾ ರೀತಿಯಲ್ಲಿ ಬಲಗೈ, ಓದೊಂದು ಬಿಟ್ಟು. ಮಾವು, ಪೇರಲೆ, ಹುಣಿಸೆ ಕಿತ್ತು ತಂದು, ನಮ್ಮೆಲ್ಲರಿಗೂ ಕೊಡುತ್ತಿದ್ದ. ಎಳನೀರು ಕೀಳಲು ಹೋಗಿ ಕೆಳಗೆ ಬಿದ್ದದ್ದಂತೂ ಲೆಕ್ಕವೇ ಇಲ್ಲ. ನಾನು ಬೆಂಗಳೂರು ಸೇರಿದ ಮೇಲೆ ಅವನ ನೆನಪೂ ಸರಿದಿತ್ತು. ಈಗ ಅವನಿಲ್ಲ, ಅವನ ಮಗಳು ರಂಗಜ್ಜನ ಜೊತೆ. ಹನ್ನೆರಡು ವರುಷದ ಗಂಗಳ ಸಂರಕ್ಷಣೆ ರಂಗಜ್ಜನ ಪಾಲಿಗೆ. ಇಷ್ಟೆಲ್ಲಾ ಅನುಕೂಲವಿರುವ, ಹೆಣ್ಣಾದ ನನಗೇ ಮೊಮ್ಮಗಳನ್ನು ನೋಡಿಕೊಳ್ಳುವುದು ಕಷ್ಟವೆನಿಸುವಾಗ, ಪಾಪ ರಂಗಜ್ಜ ಅದ್ಹೇಗಾದರೂ ಸುಧಾರಿಸುತ್ತಿದ್ದಾನೊ!

ಕಷ್ಟಜೀವಿ ರಂಗಜ್ಜನಿಗೆ ಕಾಯಿಲೆ, ಸಾಮಾನ್ಯವಾದ ಔಷಧಿಗಳಿಂದ ಗುಣಪಡಿಸಲಾಗುವಂಥದ್ದಲ್ಲ. ಇಲ್ಲೇ ಹತ್ತು – ಹದಿನೈದು ವಾರಗಳಿದ್ದರೆ ಹೇಗೋ ತಹಬಂದಿಗೆ ತರಬಹುದು. ಆದರೆ ಅವನು ಒಪ್ಪುತ್ತಿಲ್ಲ. ರಂಗಜ್ಜನ ಮೊಮ್ಮಗಳು ಬಲು ಚೂಟಿ. ಆಸ್ಪತ್ರೆಯಲ್ಲಿ ತಾತ ಇರುವಷ್ಟು ದಿನವೂ ಅವನೊಂದಿಗೇ ಮಲಗಿದ್ದ ಇತರ ರೋಗಿಗಳಿಗೂ ಗಂಗ ಆಪ್ತಳಾಗಿ ಬಿಟ್ಟಳು. ಅವರಿಗೆ ಬೇಕಾದ ನೀರು, ಹಾಲು, ತಂದುಕೊಡುವುದು ಮುಂತಾದ ಕೆಲಸಗಳನ್ನು ಒಬ್ಬ ನುರಿತ ದಾದಿಗಿಂತ ಚೆನ್ನಾಗಿ ಮಾಡುತ್ತಿದ್ದಳು. ನನ್ನೊಂದಿಗೆ ಮಿತಾಲಿಯೂ ನರ್ಸಿಂಗ್ ಹೋಂಗೆ ಬರುತ್ತಿದ್ದಳಾಗಿ, ಗಂಗ ಮಿತಾಲಿ ಒಳ್ಳೆಯ ಸ್ನೇಹಿತರಾಗಿಬಿಟ್ಟರು. ಆ ಪುಟ್ಟ

೨೦೧೫ನೇ ಸಾಲಿನ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದವರ ಸಾಲಿನಲ್ಲಿ ಪ್ರೊ॥ ಅಬ್ದುಲ್ ಅಜೀಜ್ (ವಿಜ್ಞಾನ), ಎ. ಎಸ್. ಕಿರಣ್‌ಕುಮಾರ್ [ಇಸ್ರೋ] (ವಿಜ್ಞಾನ), ಅಪ್ಪಗೆರೆ ತಿಮ್ಮರಾಜು (ಜಾನಪದ), ಎಚ್. ಎಸ್. ಈಶ್ವರ್ (ಮಾಧ್ಯಮ), ನಾಗಮಣಿ ಎಸ್. ರಾವ್ (ಮಾಧ್ಯಮ), ನ್ಯಾಯಮೂರ್ತಿ ಎ. ಜೆ. ಸದಾಶಿವ (ನ್ಯಾಯಾಂಗ), ಎಚ್. ಎಲ್. ಕೇಶವಮೂರ್ತಿ (ಸಾಹಿತ್ಯ), ಎಚ್. ಜಿ. ಸೋಮಶೇಖರ ರಾವ್ (ರಂಗಭೂಮಿ) ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದ ಹಾರ್ದಿಕ ಅಭಿನಂದನೆಗಳು.

ಪೋರಿ, ಬಹಳ ದೊಡ್ಡವಳಂತೆ ಮಿತಾಲಿಯನ್ನು ಮುದ್ದಿಸುತ್ತಿದ್ದಳು. ಆ ವಯಸ್ಸಿಗೆ ಬೇಕಾದ ಜೊತೆಗಾರಿಕೆಯೋ ಅಥವಾ ಗಂಗಳಲ್ಲಿ ಅದೇನು ಮೋಡಿ ಇತ್ತೋ, ಅವಳು ರಂಗಜ್ಜನೊಂದಿಗೆ ಹೊರಟುನಿಂತಾಗ, ತಾಯಿಯನ್ನು ಬಿಟ್ಟಾಗಲೂ ಅಳದಿದ್ದ ಮಿತಾಲಿ, ಜೋರಾಗಿ ಅಳುವುದಕ್ಕೆ ಶುರು ಮಾಡಿದಳು. ಯಾರು ಸಮಾಧಾನ ಮಾಡಿದರೂ ಜಗ್ಗಲಿಲ್ಲ. ಒಂದೇ ಹಟ, ಗಂಗ ಇಲ್ಲೇ ಇರಬೇಕು ಎಂದು. ಅವಳ ಕಣ್ಣೀರಿಗೆ ಕರಗಿಯೋ ಏನೋ ರಂಗಜ್ಜ ಹೇಳಿದ, "ಡಾಕ್ಟ್ರಮ್ಮನ ಋಣ ತೀರಿಸೋಕ್ಕೆ ಈ ಜನುಮದಲ್ಲಿ ನಮಗಂತೂ ಆಗಲ್ಲ; ಹೋಗ್ಲಿ ಬಿಡವ್ವ, ಆ ಪಾಪೂ ಆಸೆ ಹಂಗೆ ಇಲ್ಲೇ ಸ್ವಲ್ಪ ದಿನ ಇದ್ದು ಬಾ. ಇನ್ನೊಂದಾರು ತಿಂಗಳಲ್ಲಿ ಆ ಪಾಪೂನೂ ಇಲ್ಲಿರಲ್ಲ. ಹೊಂಟೋಗುತ್ತೆ. ನೀನೂ ಬರ್ತೀಯಂತೆ" ಕೇಳಬೇಕೆನ್ನಿಸಿತೋ ಏನೋ, ಗಂಗ ಇರಲು ಒಪ್ಪಿದಳು.

ಗಂಗ ಉಳಿದದ್ದು ಮಿತಾಲಿಗೆ ಸಂಭ್ರಮವೋ ಸಂಭ್ರಮ! ಮನೆಯ ಮೂಲೆಮೂಲೆಯನ್ನೂ ತೋರಿಸಿದಳು. ತನ್ನ ಸಾಮಾನುಗಳನ್ನೆಲ್ಲಾ ತೋರಿಸಿದಳು. ಅವಳ ಸಂತೋಷ ಹೇಳತೀರದು.

ರಾತ್ರಿ ತನ್ನ ಜೊತೆಯಲ್ಲಿ ಮಂಚದ ಮೇಲೆ ಮಲಗಲು ಒತ್ತಾಯಿಸಿದಳು. ಆದರೆ ಗಂಗ ನಯವಾಗಿ ಅವಳನ್ನು ರಮಿಸಿ, ಮಲಗಿಸಿ ತಾನು ಕೆಳಗೆ ಚಾಪೆ ಹಾಸಿಕೊಂಡು ಮಲಗಿದಳು. ತನ್ನ ತಟ್ಟೆ, ಲೋಟ, ಬಟ್ಟೆಗಳ ಗಂಟನ್ನು ಯಾರಿಗೂ ಕಾಣದಂತೆ ಮೂಲೆಯಲ್ಲಿಟ್ಟು ಮಲಗಿದಳು.

ಮರುದಿನ ವಿಜಯ ಫೋನಾಯಿಸಿದಾಗ ಅವಳ ಎಲ್ಲಾ ಪ್ರಶ್ನೆಗಳಿಗೂ ಉತ್ತರವಾಗಿ, "ಒಳ್ಳೆಯ ಗೆಳತಿ ಸಿಕ್ಕಿದ್ದಾಳೆ" ಎಂದೆ. "ಅದ್ಯಾರಮ್ಮಾ? ಸಂಬಳ ಎಷ್ಟು?" ಅವಳ ಧ್ವನಿಯಲ್ಲಿ ಸಂತೋಷ, ತವಕ ಎಲ್ಲ ತುಂಬಿತ್ತು. ಅವಳಿಗೆ ರಂಗಜ್ಜನ ಬಗ್ಗೆ ಗಂಗಳನ್ನು ಮಿತಾಲಿ ಹಚ್ಚಿಕೊಂಡ ಬಗ್ಗೆ ಎಲ್ಲಾ ಹೇಳಿದೆ.

"ಅಮ್ಮ ಹಾಗಾದ್ರೆ, ಅವಳಿಗೆಷ್ಟು ಸಂಬಳ ಹೇಳು. ನಾನು ಕಳಿಸ್ತೀನಿ." ಮತ್ತೆ ಅಹಂಭಾವ! "ಅವಳು ದುಡ್ಡಿಗಾಗಿ ಬಂದಿಲ್ಲ ವಿಜಯ, ನಿನ್ನ ಮಗಳ ಮೇಲೆ ಅನುಕಂಪದಿಂದ ಬಂದಿದ್ದಾಳೆ; ಪ್ರೀತಿಯಿಂದ ಬಂದಿದಾಳೆ."

"ಕೆಲಸದವಳಿಗೆ ಪ್ರೀತಿ, ಅನುಕಂಪ ಅದೆಲ್ಲಾ ರಬ್ಬಿಷ್, ನೀನಿನ್ನೂ ಹಳೇ ಕಾಲದಲ್ಲಿ ಇದೀಯ ಮಮ್ಮಿ. ಹೋಗ್ಲಿ ಬಿಡು, ಮನೇಲಿ ಮಿತಾಲಿಗೆ ಜೊತೆಯಾಗಿ ಎಲ್ಲಾ ಮಾಡ್ತಾಳೆ ಅಂತೀಯ. ಮಿತಾಲೀದು ಸರ, ಬಳೆ ಎಲ್ಲಾ ನಿನ್ನ ಲಾಕರ್‌ನಲ್ಲಿ ಇಟ್ಟಿಡಮ್ಮಾ. ನಿಂದೂ ಅಷ್ಟೇ, ಜೋಪಾನ."

ಇನ್ನು ಹೆಚ್ಚಿಗೆ ಮಾತನಾಡುವ ಮನಸ್ಸಾಗಲಿಲ್ಲ. ಸದಾ ಹಣದ ಹಿಂದೆ ಓಡುವ ಈ ಕಾಲದವರಿಗೆ ಒಳ್ಳೆಯತನದ ಬಗ್ಗೆ ಗೊತ್ತೇ ಇಲ್ಲವೇನೋ? ಎಲ್ಲದರಲ್ಲೂ, ಎಲ್ಲರಲ್ಲೂ ಅನುಮಾನವೇ!

ಮಿತಾಲಿಯ ಜೊತೆಗೆ ಗಂಗಳನ್ನೂ ಶಾಲೆಗೆ ಸೇರಿಸಿದೆ. ಹೊಸ ಯೂನಿಫಾರಂ, ಪುಸ್ತಕಗಳು ಕಾಲಿಗೆ ಷೂಸ್ ಇವೆಲ್ಲಾ ನೋಡಿ, ಅವಳ ಕಣ್ಣಲ್ಲಿ

## ನನಗೆ ದೇವರು ಬೇಕು

ಕಲ್ಲಿನಿಂದ
ಕಬ್ಬಿಣದಿಂದ
ಕಟ್ಟಿಗೆಯಿಂದ
ಇಟ್ಟಿಗೆಯಿಂದ
ಪ್ಲಾಸ್ಟಿಕ್‌ನಿಂದ
ಪಂಚಲೋಹಗಳಿಂದ
ಪಂಚಭೂತಗಳಿಂದ
ತಯಾರಾದ
ದೇವರು ಬೇಕಾಗಿಲ್ಲ

ಅಪ್ಪಟ ಮನುಷ್ಯರ
ವೀರ್ಯಾಣು
ಅಂಡಾಣು
ಸಂಯೋಗದಿಂದ
ಜನಿಸಿದ
ಅಥವಾ ಹಾದರಕ್ಕಾದರೂ
ಸರಿ






ಯಾವುದೇ ಜಾತಿ
ಧರ್ಮ ಇಲ್ಲದಿದ್ದರೂ
ಸರಿ
ಕೇವಲ ಮನುಷ್ಯರಿಗೆ
ಹುಟ್ಟಿದ
ಮನುಷ್ಯತ್ವ
ಹೊಂದಿರುವ
ದೇವರು ಬೇಕು.

**ಸುನೀಲಕುಮಾರ ಸುಧಾಕರ**
ಪಿ.ಡಬ್ಲ್ಯೂ.ಡಿ.ಆಫೀಸ್ ಕಾಂಪೌಂಡ್ ಹಿಂದೆ,
ವಿಜಯಪುರ – ೫೮೬ ೧೦೧

ಸಂತೋಷ ಮೂಡಿದ್ದು ಒಂದೇ ಕ್ಷಣ. "ಅಮ್ಮಾ ಇದೆಲ್ಲಾ ಹಾಕ್ಕೊಳ್ಳೇಬೇಕಾ? ನನ್ನ ಬಟ್ಟೆ ಹಾಕ್ಕೊಂಡು ಹೋದ್ರೆ ಬಿಡಲ್ವಾ? ನಾನು ಸ್ಕೂಲಿಗೆ ಹೋಗೋದು ಬೇಡ ಬಿಡಿ ಅಮ್ಮ. ಮನೇಲೇ ಇರ್ತೀನಿ" ಅಂದಳು.

"ಗಂಗ, ನೀನೂ ಸ್ಕೂಲಿಗೆ ಹೋಗಿ ಚೆನ್ನಾಗಿ ಓದಿಕೊಂಡ್ರೆ ನಿಮ್ ತಾತಂಗೆ ಒಳ್ಳೊಳ್ಳೆ ಔಷಧಿ ಕೊಡೋಕ್ಕೆ ಗೊತ್ತಾಗುತ್ತೆ. ಓದ್ಕೊಂಡು ಕೆಲ್ಸ ಮಾಡಿ ಸಂಪಾದಿಸಿ ತಾತನ್ನ ಚೆನ್ನಾಗಿ ನೋಡ್ಕೋ ಬಹುದಲ್ವಾ?" ಎಂದು ಪುಸಲಾಯಿಸಿದಾಗ ತಾತನಿಗಾಗಿ ಓದಲು ಒಪ್ಪಿಕೊಂಡಂತಿತ್ತು.

ಓದಿನಲ್ಲಿ ಶ್ರದ್ಧೆ. ಮಿತಾಲಿಗೂ ನಿತ್ಯವೂ ಪದ್ಯಗಳನ್ನು ಹೇಳಿಕೊಡುವುದು, ಮಗ್ಗಿ ಬಾಯಿಪಾಠ ಮಾಡಿಸುವುದು, ಇಂಗ್ಲಿಷ್ ಕಲಿಯೋದು ಕಷ್ಟವಾಗಲಿಲ್ಲ. ನಮ್ಮಿಬ್ಬರಿಗಂತೂ ಅವಳು ಅಚ್ಚುಮೆಚ್ಚಾದಳು. ರಘುನಾಥ್ ಅಂತೂ, ಅವಳನ್ನು ಡಾಕ್ಟ್ರು ಮಾಡಿಬಿಡುವ ಆಸೆ, ಮಿತಾಲಿ ಅವಳಮ್ಮನ ಮನೆಗೆ ಹೋದರೂ ಗಂಗ ನಮ್ಮಲ್ಲೇ ಉಳಿಯಲಿ ಎಂಬಷ್ಟಾಯಿತು.

"ಗಂಗ, ನೀನ್ಯಾಕೆ ಗಿಡದ ಕಡ್ಡೀಲಿ ಉಜ್ಜೀಯ? ಅಜ್ಜೀಗೆ ಹೇಳಿ ನಿಂಗೂ ಬ್ರಷ್ ಕೊಡಿಸ್ತೀನಿ."

"ಇಲ್ಲ ಪುಟ್ಟಿ, ನಂಗಿದೇ ಅಭ್ಯಾಸ ಆಗ್ಬಿಟ್ಟಿದೆ."

"ಗಂಗ, ನಮ್ಮ ಬಟ್ಟೆಗಳ ಜೊತೇಗೆ ನಿಂದೂ ಬೀರೂಲಿಡು."

"ಇಲ್ಲ ಪುಟ್ಟಿ, ನನ್ ಬಟ್ಟೆಗಳು ಮೊದ್ಲಿಂದ ಹೀಗೆ ಮಡಿಚಿ ಕೆಳಗಿಟ್ಕೊಳ್ಳೇದೇ ಕಲಿಸಿದಾರೆ ನಮ್ ತಾತ."

"ನಾನೂ ಹಾಗೇ ಕೆಳಗೇ ಇಟ್ಕೋತೀನಿ."

"ಹಾಗಲ್ಲ ಮರಿ, ನಾನು ನಮ್ಮ ತಾತ ಹೇಳಿದ್ದಂಗೆ ಕೇಳ್ತೀನಿ, ನೀನು ನಿಮ್ಮಮ್ಮ ಹೇಳ್ಕೊಟ್ಟಾಗೆ ಕಲೀಬೇಕು." ಎಂದು ಹೇಗೋ ಮಾಡಿ ಒಪ್ಪಿಸುತ್ತಿದ್ದಳೇ ಹೊರತು ಒಂದು ದಿನವಾದರೂ ಹೌದು, ಇಷ್ಟೊಂದು ಸ್ಥಳವಿದೆಯಲ್ಲಾ ತಾನ್ಯಾಕೆ ತನ್ನ ವಸ್ತುಗಳನ್ನೂ ಅಲ್ಲಿಡಬಾರದೆಂದು ಯೋಚಿಸಿದಂತಿಲ್ಲ.

ಊಟ ಮಾಡುವಾಗ, ಅವಳಿಗೆ ಟೇಬಲ್ ಬಳಿ ಕುರ್ಚಿ ಹಾಕಿ ಕೂಡಿಸಿ ತಿನ್ನಿಸುತ್ತಿದ್ದಳಾಗಲಿ, ಒಂದು ದಿನವೂ ತಾನಲ್ಲಿ ಕುಳಿತವಳಲ್ಲ. ಅವಳಿಗೆ ಬಿಸಿ

ಬಿಸಿಯಾಗಿ ದೋಸೆ, ಇಡ್ಲಿ ಕೊಟ್ಟರೂ ನಾವೆಲ್ಲಾ ತಿಂದು ಮುಗಿಸುವವರೆಗೂ ಮುಟ್ಟುತ್ತಿರಲಿಲ್ಲ.

ಗಂಗಳೇ ಅವಳ ಗುರು, ಸ್ನೇಹಿತೆ ಎಲ್ಲವೂ.

ತಾನು ಬಡವಿ ಎಂದು ಒಂದು ದಿನವಾದರೂ ಸಪ್ಪೆ ಮುಖ ಹಾಕಲಿಲ್ಲ; ಮಿತಾಲಿಗೆ ಎಲ್ಲಾ ಇದೆ, ತನಗೇನೂ ಇಲ್ಲ ಎಂದು ಈರ್ಷ್ಯೆಯನ್ನೂ ತೋರಿದ್ದಿಲ್ಲ.

ಮಿತಾಲಿಗೆ ಬೆಳಿಗ್ಗೆ ಬ್ರೆಡ್‌ಗೆ ಬೆಣ್ಣೆ ಹಚ್ಚಿ, ಅದರ ಮೇಲೆ ಪೀನಟ್ ಪೇಸ್ಟ್ ಒಂದು ಕಡೆ, ಮತ್ತೊಂದು ಕಡೆ ಸಕ್ಕರೆ ಅಥವಾ ಜ್ಯಾಮ್ ಹಾಕಿಕೊಡುವುದೇ ಅಭ್ಯಾಸ. ಮಿತಾಲಿಗೆ ಕೊಟ್ಟಾಗ ಇವಳಿಗೂ ಕೊಡ ಹೋದರೆ, "ಅಮ್ಮಾ, ರಾತ್ರಿ ಅನ್ನಕ್ಕೆ ಒಂದಿಷ್ಟು ಮಜ್ಜಿಗೆ ಸುರಿಯಿರಿ. ಇಲ್ಲಾಂದ್ರೆ ಮೆಣಸಿನಕಾಯಿ ಹಚ್ಕೊಂಡು ತಿಂತೀನಿ" ಎಂದಾಗ ನನಗೆ ಮುಖ ಕಿವುಚುವಂತಾಯ್ತು. ಬ್ರೆಡ್, ಜ್ಯಾಮ್ ತಿಂದು ಅಭ್ಯಾಸವಿಲ್ಲದ ಹಳ್ಳಿಯ ಹುಡುಗಿ ಇಲ್ಲಿ ಇದೆಲ್ಲಾ ಸಿಕ್ಕಿದಾಗ ಸಂತೋಷದಿಂದ ತಿಂದಾಳೆಂದುಕೊಂಡೆ, ಆದರೆ ತನ್ನ ಮಿತಿ ಮರೆಯುವವಳಲ್ಲ ಗಂಗ. ಮಿತಾಲಿಗೆ ಹೊಸ ಬಟ್ಟೆ ತಂದಾಗ ತನಗೂ ತರುವುದಾಗಿ ಹೇಳಿ ಮೊದಲ ಬಾರಿ ಕೊಟ್ಟಾಗಲೇ ಹೇಳಿಬಿಟ್ಟಳು, "ನಂಗಿಂಥದ್ದೆಲ್ಲಾ ಉಟ್ಟು ರೂಢಿ ಇಲ್ಲ. ಬೇಡಮ್ಮ." ವಯಸ್ಸಿನಲ್ಲಿ ಇರಬಹುದಾದ ಆಸೆಯನ್ನು ಅಷ್ಟು ಅದುಮಿಡಲು ಸಾಧ್ಯವೇ?




ಮೂರು ತಿಂಗಳು ಕಳೆಯುವಷ್ಟರಲ್ಲಿ ಮಿತಾಲಿಗೆ ಮಾತ್ರವಲ್ಲ, ನನಗೂ ಗಂಗ ಇಲ್ಲದೆ ಸಾಧ್ಯವೇ ಇಲ್ಲ ಎನ್ನುವಷ್ಟು ಹತ್ತಿರವಾಗಿಬಿಟ್ಟಳು. ಬೆಳಿಗ್ಗೆ ಎದ್ದಾಗಿನಿಂದ ಶಾಲೆಗೆ ಹೋಗುವವರೆಗೂ, ನನಗೆ ಸಹಾಯ, ಬಂದ ಮೇಲೆ ಮಿತಾಲಿಗೆ ತಿನ್ನಿಸಿ, ಮಲಗಿಸಿ, ಸಂಜೆ ಪಾರ್ಕಿನಲ್ಲಿ ಆಟ, ರಾತ್ರಿ ಓದು, ಬರಹ, ಊಟವಾದ ಮೇಲೆ ಪಾತ್ರೆಗಳ ಚೊಕ್ಕಟ. ಒಂದೇ ಎರಡೇ !...?

ರಂಗಜ್ಜನಿಗೆ ಮೈ ಸರಿಯಿಲ್ಲವೆಂದು ಗಂಗ ಅವನನ್ನು ನೋಡುವುದು ಈಗ ಅತ್ಯಗತ್ಯವೆಂದು ರಮಳಿಂದ ಫೋನ್ ಬಂತು. ಶನಿವಾರ, ಭಾನುವಾರ ಶಾಲೆಗೆ ರಜವಿದ್ದುದರಿಂದ ಶುಕ್ರವಾರ ಬೆಳಿಗ್ಗೆ ಹೇಳಿದೆ: "ಇವತ್ತು ಸಂಜೆ ಊರಿಗೆ ಹೋಗಿ ಬರೋಣ ನಾವೆಲ್ಲಾ".

"ಎಲ್ಲಿಗೆ?" ಎಂದಳು ಮಿತಾಲಿ. "ಅಮ್ಮಾ ಹಾಗಾದ್ರೆ ಅಜ್ಜನ್ನ ನೋಡಿಬರ್ತೀನಿ ಕಳ್ಸಿಕೊಡಿ, ನೀವು ಊರಿಗೆ ಬರೋ ಹೊತ್ಗೆ ನಾನೂ ಬಂದುಬಿಡ್ತೀನಿ" ಎಂದು ಅಂಗಲಾಚುವಂತೆ ಕೇಳಿದಳು. ಅವಳ ಕಡೆ ನೋಡಿ, ನಸುನಗುತ್ತಾ, "ನಾವೀಗ ಹೋಗೋದೇ ಅಲ್ಲಿಗೆ. ರಮಳ ಮನೇಲಿ ಪೂಜೆಯಂತೆ ಹೋಗೋಣ. ಇವತ್ತೇ ಸಂಜೆಗೆ" ಎನ್ನುತ್ತಲೇ ಅವಳ ಮುಖ ಊರಗಲವಾಯಿತು.

ಬೆಳಿಗ್ಗೆ ಎದ್ದಾಗ ತನ್ನ ಪುಟ್ಟ ಗಂಟನ್ನು ಹೊತ್ತು ಕಾರಿನ ಡಿಕ್ಕಿಯಲ್ಲಿಟ್ಟಳು. "ಇಷ್ಟೇನಾ, ಬೇರೆ ಹೊಸ ಡ್ರೆಸ್ ತರಲ್ವಾ" ಎಂದು ಮಿತಾಲಿ ಕೇಳಿದಾಗ, "ಬೇಡ ಪುಟ್ಟಿ, ಅಲ್ಲಿ ನನ್ನ ಜೊತೇವ್ರಿಗೆ ಇಂಥಾ ಬಟ್ಟೆಗಳಿಲ್ವಲ್ಲಾ, ನನ್ಹತ್ರ ಮಾತ್ರ ಇದ್ರೆ ಅವ್ರಿಗೆಲ್ಲಾ ಬೇಜಾರಾಗುತ್ತೆ. ಅದಕ್ಕೆ ಇಲ್ಲೇ ಇರ್ಲಿ" ಎಂದಳು.

"ನಿಂಗೆ ಬೇಡ ಅಂದ್ರೆ ನಂಗೂ ಬೇಡ" ಎಂದು ಹಠಮಾಡಿದವಳನ್ನು ಗಂಗಳ ಕೈಲಿ ಮಾತ್ರವೇ ಸಮಾಧಾನಗೊಳಿಸಲಾಗಿದ್ದು. ಅದೇನು ಮೋಡಿ ಹಾಕಿದಳೋ !

ದಾರಿಯುದ್ದಕ್ಕೂ ತನ್ನ ಊರು, ತನ್ನಜ್ಜ ತನ್ನ ಗೆಳತಿಯರು... ಅವರ ಕಥೆಗಳೇ, ತಮಾಷೆಯಾಗಿ ಮಾತಾಡುತ್ತಾ ದಾರಿ ಸವೆದದ್ದೇ ತಿಳಿಯದಂತೆ ಮಾತುಗಳು!

ಊರು ಸೇರಿದ ಕೂಡಲೇ ಛಂಗನೆ ಹಾರಿ, "ಅಮ್ಮಾ, ನಾನು ಅಜ್ಜನ್ನ ನೋಡೋಕ್ಕೆ ಹೋಗ್ತೀನಿ, ಪುಟ್ಟೀನ ನೀವೇ ನೋಡ್ಕೋಬೇಕು. ರಾತ್ರಿ ಊಟ ಮಾಡೋವಾಗ ಕೈ ತುತ್ತು ಹಾಕಿದ್ರೇನೆ ಪಾಪು ಹೊಟ್ಟೆ ತುಂಬ ತಿನ್ನೋದು" ಎನ್ನುತ್ತಾ ತನ್ನ ಗಂಟು ಹೊತ್ತು ಓಡಿದಳು. ಮರುದಿನ ಬೆಳಿಗ್ಗೆ ರಮಳ ಜೊತೆಯಲ್ಲಿ ಅವರ ಮನೆಗೆ ಹೊರಟಾಗ ಆತಂಕವಿದ್ದೇ ಇತ್ತು. ಇಂಜೆಕ್ಷನ್ ಬಗ್ಗೆ ಯೋಚಿಸಿ ಸಿದ್ಧಪಡಿಸಿಕೊಂಡೇ ಹೊರಟಿದ್ದೆ. ಒಬ್ಬನೆ ! ಮನೆಯ ಸುತ್ತ ನೊಣ, ಸೊಳ್ಳೆ ಖಂಡಿತ ಮುತ್ತಿರುತ್ತೆ, ಎಂದುಕೊಂಡೇ ಹೋದವಳಿಗೆ ಅಚ್ಚರಿ. ಸುತ್ತ ಗುಡಿಸಿ, ಸಾರಿಸಿ ಹೊಂಗೆಯ ಹೂವಿನ ಹಾಸಿಗೆಯನ್ನು ದಾಟಿ ಒಳಹೊಕ್ಕಾಗಲೂ, ಮನೆಯ ಒಳಗೂ ಶುಭ್ರ ವಾತಾವರಣ. ನಿಂಗನ ಬೀಡಿಯ ವಾಸನೆಯಾಗಲಿ, ಕಮಲಿಯ ಕಮಟು ವಾಸನೆಯ ಸೀರೆಯಾಗಲಿ ಕಾಣಲಿಲ್ಲ. ರಂಗಜ್ಜನ ಹಾಸಿಗೆ ಸಹ ಶುಭ್ರಗೊಳಿಸಿ ಮನೆಯೊಳಗೆ ಕರ್ಪೂರ ಹಾಗೂ ಊದುಗಡ್ಡಿಯ ವಾಸನೆ! ದೊಡ್ಡ ಹೆಂಗಸಿನಂತೆ, ಜಡೆಯನ್ನು ಗಂಟು ಸುತ್ತಿ, ಅಜ್ಜನಿಗೆ ಗಂಜಿ ಕುಡಿಸುವ ಪ್ರಯತ್ನ ಮಾಡುತ್ತಿದ್ದಾಳೆ. ರಂಗಜ್ಜನೂ ಅವಳನ್ನೇ ಪ್ರೀತಿಯಿಂದ ನೋಡುತ್ತಾ ಅವಳ ಮಾತು ಕೇಳುತ್ತಿದ್ದಾನೆ. ನುರಿತ ದಾದಿಗಿಂತ ಶುಭ್ರವಾಗಿಟ್ಟಿದ್ದಾಳೆ ಅಜ್ಜನ ಪರಿಸರವನ್ನು 'ವ್ಹಾಹ್ ! ಗಂಗ, ಪುಟವಿಟ್ಟ ಚಿನ್ನ ನೀನು. ನಿನ್ನನ್ನು ಖಂಡಿತ ಡಾಕ್ಟರ್ ಓದಿಸಲೇಬೇಕು' ಎಂದು ಮನಸ್ಸಿನಲ್ಲೇ ಅಂದುಕೊಂಡೆ.

ನಿಂಗ, "ಅವ್ವ, ತಾಯಿ, ಅದೇನು ಮಾಟ ಮಾಡಿಬಿಟ್ಲು ಕಣವ್ವ, ಚಿಕ್ಕಪ್ಪ ಏನೂ ಕುಡೀತಿದ್ದಿಲ್ಲ, ಈಗ್ನೋಡಿ ಗಂಜಿ ತಗೋತವ್ನೆ" ಎಂದು ಗಂಗಳನ್ನು ಮೆಚ್ಚಿ ನುಡಿದ. ರಮಳೂ ಮೆಚ್ಚಿದಳು. ನಾನು ರಂಗಜ್ಜನನ್ನು ಪರೀಕ್ಷಿಸಿ, ಒಂದು ಇಂಜೆಕ್ಷನ್ ಕೊಟ್ಟೆ. ಅತಿ ಪ್ರಯಾಸದಿಂದ ಹತ್ತು ನಿಮಿಷ ಕುಳಿತು ನಂತರ ಮನೆಗೆ ಹೊರಟೆವು. ಎರಡು ದಿನಗಳಿಗೆ ಆಗುವಷ್ಟು ಟ್ಯಾಬ್ಲೆಟ್ಸ್‌ಅನ್ನು ಗಂಗಳ ಕೈಯಲ್ಲಿಟ್ಟು, "ನಾಳೆ ಹೊರಡುವಾಗ ರಂಗಜ್ಜನ್ನೂ ಕರ್ಕೊಂಡು ಹೋಗೋಣ. ಅಲ್ಲಿ ಚೆನ್ನಾಗಿ ಆರೈಕೆ ಮಾಡೋಣ. ನೀನು ಯೋಚನೆ ಮಾಡಬೇಡ" ಎಂದು ಅವಳ ಗಲ್ಲ ತಟ್ಟಿದೆ. ಹೊಟ್ಟೆಯಲ್ಲಿದ್ದ ದುಃಖವೆಲ್ಲಾ ಒಮ್ಮೆಗೇ ನುಗ್ಗಿ ಬಂತು ಗಂಗಳಿಗೆ. ನಿಶ್ಶಬ್ದವಾಗಿ ರೋದಿಸಿದಳು. ತಾತನಿಗೆ ಕೇಳಿಸಿದರೆ ವ್ಯಥೆಗೊಂಡಾನೆಂದು.

ಮರುದಿನ ಸಂಜೆ ಹೊರಡಬೇಕೆನ್ನುವಾಗ ರಂಗಜ್ಜನನ್ನೂ ಹತ್ತಿಸಿಕೊಳ್ಳಲು, ಅವರ ಮನೆಯ ಮುಂದೆ ಕಾರು ನಿಲ್ಲಿಸಬೇಕು, ಅಷ್ಟರಲ್ಲಿ ಗಂಗಳ ಗೆಳತಿಯರು ಲಚ್ಚಿ, ಅಂಜಿ, ಗೌರಿ, ಶಿವಿ ಎಲ್ಲರೂ ಬಂದರು. ಮಿತಾಲಿಗೆ ಹಣ್ಣು, ಹೂಗಳು ಬುಟ್ಟಿಗಳ ತುಂಬ ! ಎಲ್ಲವನ್ನೂ ಡಿಕ್ಕಿಯಲ್ಲಿಡಲು ಆದೇಶಿಸಿದವಳು ಗಂಗಳೇ. ಗಂಗ ಎಂದರೆ ಅವರಿಗೆ ಲೀಡರ್.

"ಕಾರು ಹತ್ತು" ಎಂದಾಗ ಗಂಗ, "ಅಮ್ಮಾ, ನಾನು ಬರಲ್ಲ. ಯಾಕೇಂದ್ರೆ ನಮ್ ಅಜ್ಜ ಈ ಊರು ಬಿಟ್ಟು ಬರಲ್ಲ ಅಂತ ನಂಗೊತ್ತು. ಅಜ್ಜ ಬರ್ಲಿಲ್ಲಾ ಅಂದ್ರೆ ನಾನೂ ಇಲ್ಲ. ಮಗೂನಿಂದ ನನ್ನನ್ನ ನೋಡ್ಕೊಂಡವ್ನು ನನ್ನಜ್ಜ. ಒಂದು ದಿನಾನೂ ಬೇಜಾರು ಮಾಡ್ಕೊಳ್ದೆ ನನ್ ಕೆಲಸಾ ಮಾಡಿದಾನೆ. ನಾನ್ ಹಟ ಮಾಡಿದ್ರೆ, ಮುದ್ದು ಮಾಡಿ ಊಟ ಮಾಡ್ಸಿದಾನೆ. ಅಂಥ ಅಜ್ಜ ಹೀಗೆ ನರಳ್ತಾ ಇರೋವಾಗ ಅವನನ್ನು ಬಿಟ್ಟು ನಾನು ಬರೋದಿಲ್ಲಮ್ಮ. ಮಿತಾಲಿ ಪಾಪೂಗೆ ನಾನಿಲ್ಲಾಂದ್ರೆ ಬೇರೆ ಯಾರಾದ್ರೂ ಸಿಗ್ತಾರೆ ನೋಡ್ಕೊಳ್ಳೋಕ್ಕೆ. ಆದ್ರೆ ನಮ್ಮಜ್ಜನ್ನ ನೋಡ್ಕೊಳ್ಳೋಕ್ಕೆ ನಾನಲ್ದೆ ಬೇರೆ ಯಾರೂ ಇಲ್ಲ. ಹುಟ್ಟಿದಾಗ್ನಿಂದ ಇಷ್ಟು ಚೆನ್ನಾಗಿ ನೋಡಿಕೊಂಡ ತಾತನ್ನ, ಅವ್ನ ಪಾಡಿಗೆ ಅವನ್ನ ಬಿಟ್ಟುಬರಕ್ಕೆ ನಂಗೆ ಮನಸಾದ್ರೂ ಹೇಗೆ ಬಂದೀತಮ್ಮಾ !" ಎಂದಳು.

"ಉಡೋಕ್ಕೆ ಒಳ್ಳೆ ಬಟ್ಟೆ, ತಿನ್ನೋಕ್ಕೆ ಒಳ್ಳೆ ಊಟ ಸಿಗಬಹುದು. ಆದ್ರೆ ಅಜ್ಜ ಸಿಗಲ್ಲ. ಅಜ್ಜ ಇಲ್ದೆ ನಾನಿರಲ್ಲ, ನಾನಿಲ್ದೆ ಅಜ್ಜ ಇರಲ್ಲ. ಕ್ಷಮ್ಸೀಮ್ಮ" ಎಂದು ಅಳುತ್ತಾ ಕಾಲಿಗೆರಗಿದಳು !

"ನಿಂ ತಾತ ಇನ್ನೆಷ್ಟು ದಿವ್ಸ ಇರ್ತಾನೆ? ನೀನಲ್ಲಿದ್ದು ಒಳ್ಳೇ ಓದು ಓದ್ಕೊಂಡು ಸಂಪಾದಿಸೋದು ಬಿಟ್ಟು ಇದೇನ್ ಮಾತು ನಿಂದು ?" ಎಂದು ಗದರುವಂತೆ ನುಡಿದಳು ರಮಾ.

"ಇಲ್ಲಕ್ಕಾ, ನನ್ ತಾತನ್ನ ನಾನು ಬದುಕಿಸ್ಕೋತೀನಿ. ಅವ್ನು ಬದುಕಿರೋಷ್ಟು ದಿನಾನೂ ಅವ್ನ ಜೊತೇಲಿರ್ತೀನಿ" ಎಂದು ಹಿಂತಿರುಗಿ ನೋಡದೆ ಮನೆಯೊಳಗೆ ಓಡಿದಳು. ಎಲ್ಲರೂ ಬೆಪ್ಪಾಗಿ ಬೆರಗಾಗಿ ನಿಂತೆವು.

**ರಾಧಾ ಟೇಕಲ್**
ನಂ. ೧೧೧, 'ಮಾರುತಿ ನಿಲಯ', ೩ನೇ 'ಎ' ಅಡ್ಡರಸ್ತೆ, ೬ನೇ ಮುಖ್ಯರಸ್ತೆ, ೭ನೇ ಬ್ಲಾಕ್,
೨ನೇ ಹಂತ, ನಾಗರಭಾವಿ, ಬೆಂಗಳೂರು – ೫೬೦ ೦೭೨

ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ನಟಿಯರಾಗಿ, ಕಂಪನಿ ಮಾಲೀಕರಾಗಿ ಮಿಂಚಿದ ಮುಸ್ಲಿಂ ಮಹಿಳೆಯರ ಸಂಖ್ಯೆ ಸಾಕಷ್ಟಿದೆ. ಹಿಂದೂ ಮಹಿಳೆಯರಿಗಿಂತ ಹೆಚ್ಚಿನ ಕಟ್ಟುಪಾಡುಗಳಿಗೆ ಒಳಗಾಗಿರುವ ಮುಸ್ಲಿಂ ಮಹಿಳೆಯರು ರಂಗಭೂಮಿಯಲ್ಲಿ ಮಾಡಿದ ಸಾಧನೆ ಒಂದು ವಿಸ್ಮಯವೇ ಸರಿ. ಕೆಲವರು ಬಡತನದ ಕಾರಣದಿಂದ, ಕೆಲವರು ಸಂಗೀತ ಪ್ರೇಮದಿಂದ, ಕೆಲವರು ನಟನೆಗೇ ಮನಸೋತು ರಂಗಭೂಮಿಯಲ್ಲಿ ತಮ್ಮ ಕೊನೆ ಉಸಿರಿನ ತನಕ ಉಳಿದು ಬೆಳೆದಿದ್ದಾರೆ. ಇವರಲ್ಲಿ ಜನ್ನತ್ ಬೇಗಂ ಬದಾಮಿ, ಅಜಮತ್ ಬೇಗಂ, ಮಮತಾ ಗುಡೂರು, ಪ್ರಮೀಳಮ್ಮ ಗುಡೂರು, ಜುಬೇದಾಬಾಯಿ ಸವಣೂರು, ಅಮೀರಬಾಯಿ ಕರ್ನಾಟಕಿ, ಆಶಾರಾಣಿ ಬಿಜಾಪುರ, ಜನ್ನತಬಿ ಮುಲ್ಲಾ, ಹಫೀಜಾ ಬೇಗಂ ಮುರ್ತುಸಾಬ ಪ್ರಮುಖರು (ಇವರಲ್ಲಿ ಕೆಲವರ ಹೆಸರುಗಳು ಹಿಂದೂಗಳದ್ದು ಎಂದೆನಿಸಿದರೂ ಅವು ಕಂಪನಿ ಮಾಲೀಕರು ಕೊಟ್ಟ ಹೆಸರುಗಳು. ಇವರೆಲ್ಲ ಮುಸ್ಲಿಂ ಮಹಿಳೆಯರೇ).

# ರಂಗಕರ್ಮಿಗಳಾಗಿ ಮುಸ್ಲಿಂ ಮಹಿಳೆಯರು...

**ಎಸ್. ಮಾಲತಿ**


ಮಮತಾ ಗುಡೂರು

ಜನ್ನತ್ ಬೇಗಂ ಬದಾಮಿ, "ಧರ್ಮದವರು ಅಡ್ಡಿಪಡಿಸಿದರೂ ಬಣ್ಣ ಹಚ್ಚೂದು ಬಿಟ್ಟಿಲ್ಲ. ದೈವದವರಿಗೆ 2000 ರೂಪಾಯಿ ದಂಡ ತೆತ್ತಿದ್ದೇನೆ" ಎನ್ನುತ್ತಾರೆ. ಈಕೆ ಹಲವಾರು ಕಂಪನಿಗಳಲ್ಲಿ 1970ರಿಂದ ನಟಿಯಾಗಿ ಮಿಂಚಿ, 'ರೇಣುಕಾ ನಾಟ್ಯ ಸಂಘ-ಇಲಕಲ್' ಎಂಬ ಕಂಪನಿ ಕಟ್ಟಿ, ಮೂರು ವರ್ಷ ಕಂಪನಿ ಮಾಲೀಕಳಾಗಿ ಕಾರ್ಯ ನಿರ್ವಹಿಸಿದ ದಿಟ್ಟೆ.

ಈ ಮುಸ್ಲಿಂ ಮಹಿಳೆಯರು, ಅಕ್ಕಮಹಾದೇವಿ, ದ್ರೌಪದಿ, ಸೀತೆ, ಭಾನುಮತಿ ಮುಂತಾದ ಹಿಂದೂ ಪೌರಾಣಿಕ ಪಾತ್ರಗಳನ್ನು ರಂಗದ ಮೇಲೆ ಯಶಸ್ವಿಯಾಗಿ ನಿರ್ವಹಿಸಿ, ಚಪ್ಪಾಳೆ ಗಿಟ್ಟಿಸಿಕೊಳ್ಳುತ್ತಿದ್ದರು. ಇದೇ ಅಲ್ಲವೇ ಧರ್ಮ ಸಾಮರಸ್ಯ ?

ಜನ್ನತ್ ಬೇಗಂಗೆ 2003ರಲ್ಲಿ ನಾಟಕ ಅಕಾಡೆಮಿ ಪ್ರಶಸ್ತಿ ಸಿಕ್ಕಿದೆ. ಇವರು ಈಗಲೂ ನಾಟಕವನ್ನೇ ನಂಬಿ, ಇಲಕಲ್‌ನಲ್ಲಿ ನೆಲೆಯೂರಿದ್ದಾರೆ.

ಅಜಮತ್ ಬೇಗಂ 12ನೇ ವರ್ಷಕ್ಕೆ ಬಣ್ಣ ಹಚ್ಚಿದವರು. ಇವರು ಮೂಲತಃ ಡ್ಯಾನ್ಸರ್. 3 ವರ್ಷ ಗದಗದ ವಿಜಯಕಲಾ ನಾಟ್ಯ ಸಂಘ, 8 ವರ್ಷ ವೀರೇಶ್ವರ ನಾಟ್ಯ ಸಂಘಗಳಲ್ಲಿ ಅಭಿನಯಿಸಿ, ಈಗ ಹದಿನೈದು ವರ್ಷಗಳಿಂದ ರಂಗಭೂಮಿಯಿಂದ ದೂರವಾಗಿ, ಮಗಳು ಮುನ್ನಿಯೊಂದಿಗೆ ಇಳಕಲ್‌ನಲ್ಲಿ ನೆಲೆಸಿದ್ದಾರೆ. ಮಗಳು ಮುನ್ನಿ ಶಾಲಾ ಶಿಕ್ಷಕಿ. ಇವಳಿಗೆ ತನ್ನ ತಾಯಿ ರಂಗನಟಿಯಾಗಿದ್ದಳು ಎಂದು ಹೇಳಿಕೊಳ್ಳಲು ಸಂಕೋಚ, ಧರ್ಮದವರ ಭಯ.

ತಂದೆ ಪಕ್ರುಸಾಬ, ತಾಯಿ ಇಮಾಮುಬೂ - ಇವರಿಗೆ ಜನಿಸಿದ ಮಮತಾ ಗುಡೂರು 5 ವರ್ಷಕ್ಕೇ ರಂಗಪ್ರವೇಶ ಮಾಡಿದರು. ಹಲವು ಕಂಪನಿಗಳಲ್ಲಿ 45 ವರ್ಷ ವಿವಿಧ ಪಾತ್ರಗಳಲ್ಲಿ ಮಿಂಚಿದರು. "ರಂಗಭೂಮಿ ತಾಯಿ ನಮಗೆ ಕಲೆಯನ್ನು ದೇಣಿಗೆಯಾಗಿ ನೀಡಿದ್ದಾಳೆ. ಅವಳಿಗೆ ನಾವು ನಿಷ್ಠೆಯಿಂದ ನಡಕೋಬೇಕು" ಎನ್ನುವ ಮಮತಾ ಈಗ 20 ವರ್ಷಗಳಿಂದ ಅಭಿನಯದಿಂದ ದೂರವಾಗಿ ಮಕ್ಕಳೊಂದಿಗೆ ನೆಮ್ಮದಿಯಿಂದಿದ್ದಾರೆ.

ಫಾತಿಮಾ ಅರಿಶಿನಗೋಡಿಯವರ ಕಂಪನಿ ಸೇರಿದ ಮೇಲೆ ಪ್ರಮೀಳ ಆದರು. ಬಾಲ್ಯದಿಂದಲೇ ಸಂಗೀತದ ಹುಚ್ಚು ಹತ್ತಿಸಿಕೊಂಡ ಪ್ರಮೀಳ ಗುಡೂರು, ಹನ್ನೊಂದು ವರ್ಷಕ್ಕೇ ರಂಗಪ್ರವೇಶ ಮಾಡಿದರು. ಬಡತನವೂ ಇದಕ್ಕೊಂದು ಕಾರಣ. ಕಂಚಿನ ಕಂಠದ ಪ್ರಮೀಳ 'ರಕ್ತರಾತ್ರಿ'ಯಲ್ಲಿ ದುರ್ಯೋಧನನ ಪಾತ್ರ ಮಾಡಿದರೆ ಚಪ್ಪಾಳೆ ಬೀಳುತ್ತಿದ್ದುವಂತೆ, ಇವರಿಗೆ 'ಭಾವ ಭಾಗ್ಯಶ್ರೀ', 'ನಾಟ್ಯ ಸರಸ್ವತಿ' ಹಾಗೂ ನಾಟಕ ಅಕಾಡೆಮಿಯ ಪ್ರಶಸ್ತಿಗಳು ಸಂದಿವೆ. ಈಗ 80ರ ಅಂಚಿನಲ್ಲಿರುವ ಪ್ರಮೀಳ 'ಮುತ್ತಿನ ತೋರಣ' ಎಂಬ ಟಿ.ವಿ. ಧಾರಾವಾಹಿ, 'ಗುಲಾಬಿ ಟಾಕೀಸ್' ಸಿನಿಮಾಗಳಲ್ಲಿ ನಟಿಸಿದ್ದಾರೆ.

ಜುಬೇದಾಬಾಯಿ ಸವಣೂರು 1931ರಲ್ಲಿ ಜನಿಸಿದರು. ಸ್ಥಿತಿವಂತ ಕುಟುಂಬದವಳಾದರೂ, ಬಾಲ್ಯದಲ್ಲಿಯೇ ತಂದೆ-ತಾಯಿಯರನ್ನು ಕಳೆದುಕೊಂಡು ಜುಬೇದಾ ಬಡ ಅಜ್ಜ-ಅಜ್ಜಿಯರ ಆಶ್ರಯದಲ್ಲಿ ಬೆಳೆದರು. ಬಾಲ್ಯದಲ್ಲಿಯೇ ಸಂಗೀತದ ಗೀಳು



ಜುಬೇದಾಬಾಯಿ ಸವಣೂರು



ಅಮೀರಬಾಯಿ ಕರ್ನಾಟಕಿ



ಗೋಹರ್ ಜಾನ್ ಕರ್ನಾಟಕಿ

ಅಂಟಿಸಿಕೊಂಡು, ಹಿರಿಯರ ಕಣ್ತಪ್ಪಿಸಿ ನಾಟಕ ನೋಡಲು ಹೋಗುತ್ತಿದ್ದರು. ಹಿರಿಯರನ್ನು ಧಿಕ್ಕರಿಸಿ ನಾಟಕ ಕಂಪನಿ ಸೇರಿದರು. ಪಂಚಾಕ್ಷರಿ ಗವಾಯಿಗಳ ಶಿಷ್ಯ ಧಿರೇಂದ್ರಾಚಾರ್ ಅವರಲ್ಲಿ ಸಂಗೀತಾಭ್ಯಾಸ ಮಾಡಿ, ರಂಗಭೂಮಿಯ ಕೋಗಿಲೆ ಎನ್ನಿಸಿಕೊಂಡರು. ಕುರುಕ್ಷೇತ್ರದ ದ್ರೌಪದಿ, ರೇಣುಕಾ ಮಹಾತ್ಮೆಯ ರೇಣುಕಾ, ಹೇಮರೆಡ್ಡಿ ಮಲ್ಲಮನ ಪಾತ್ರಗಳನ್ನು ಅತ್ಯದ್ಭುತವಾಗಿ ಅಭಿನಯಿಸಿದ ಕೀರ್ತಿ ಇವರದು. ರಂಗಭೂಮಿಗಾಗಿ ಸಮಾಜವನ್ನೇ ಧಿಕ್ಕರಿಸಿ ನಿಂತ ಈಕೆ 1993ರಲ್ಲಿ ಧಾರವಾಡದಲ್ಲಿ ನಿಧನರಾದರು.

ಅಮೀರ್ ಜಾನ್ ಕರ್ನಾಟಕಿ ಅದ್ಭುತ ಕಂಠಸಿರಿಯ ಸ್ಫುರದ್ರೂಪಿ ಮುಸ್ಲಿಂ ಹೆಣ್ಣುಮಗಳು. ಇವಳ ಕಲಾಜೀವನ ಆರಂಭವಾದದ್ದೇ ರಂಗಭೂಮಿಯಿಂದ. 40ರ ದಶಕದಲ್ಲಿ ಬಂದ 'ಆವಾರಾ', 'ಕಿಸ್ಮತ್' ಹಿಂದಿ ಚಲನಚಿತ್ರಗಳ ಗೀತೆಗಳನ್ನು ಹಾಡಿ ಪಡ್ಡೆ



ಆಶಾರಾಣಿ ಬಿಜಾಪುರ

ಹುಡುಗರ ನಿದ್ದೆಗೆಡಿಸಿದ ಕಂಠಸಿರಿ ಇವಳದ್ದೇ. ಅಮೀರಬಾಯಿಯ ವೃತ್ತಿಜೀವನ ಆರಂಭವಾದದ್ದು ಗದುಗಿನ ರಂಗಭೂಮಿಯಿಂದ. ಹುಟ್ಟಿದ್ದು ಬೀಳಗಿಯಾದರೂ ಇವಳಿಗೆ ಬದುಕು ಕೊಟ್ಟಿದ್ದು ಮುಂಬೈ ಶಹರ.

ಆಶಾರಾಣಿ ಬಿಜಾಪುರ ತನ್ನ 14ನೇ ವಯಸ್ಸಿಗೆ, ಮನೆಯವರಿಗೆ ಗೊತ್ತಿಲ್ಲದಂತೆ ಹೋಗಿ ನಾಟಕದಲ್ಲಿ ಬಾಲ ಪರಶುರಾಮನ ಪಾತ್ರವನ್ನು ಮಾಡಿದ್ದಳಂತೆ. ನಂತರ ಕಂಪನಿಯಿಂದ ಕಂಪನಿಗೆ ಚಲಿಸುತ್ತ ನನ್ನ ಗಂಡನ ಹೆಂಡತಿ, ಎಚ್ಚರ ತಂಗಿ ಎಚ್ಚರ, ವಿಧಿಯ ಕೈವಾಡ, ರೈತನ ಮಕ್ಕಳು ಮುಂತಾದ ನಾಟಕಗಳಲ್ಲಿ ವಿಲನ್, ನಾಯಕಿ, ಹಾಸ್ಯಪಾತ್ರ ಎಲ್ಲದರಲ್ಲೂ ಸೈ ಅನ್ನಿಸಿಕೊಂಡಾಕೆ. ಈಗ ಆಶಾರಾಣಿಗೆ ಇಬ್ಬರು ಗಂಡುಮಕ್ಕಳು, ಒಬ್ಬ ಮಗಳು ಇದ್ದಾರೆ. ರಂಗಭೂಮಿ ಕಲಾವಿದ ಪತಿ ಬಸವರಾಜರ ಪ್ರೋತ್ಸಾಹ ತನಗಿದೆ ಎನ್ನುತ್ತಾಳೆ ಆಶಾರಾಣಿ.

ಜನ್ನತ್‌ಬಿ ಮುಲ್ಲಾ(ಬಿಜಾಪುರ) ಬಾಲ್ಯದಿಂದಲೇ ನಟನೆಯ ಗೀಳು ಅಂಟಿಸಿಕೊಂಡು, ಮನೆಬಿಟ್ಟು ಓಡಿಹೋಗಿ ಕಂಪನಿ ಸೇರುತ್ತಾರೆ. ಮನೆಯವರು ಹುಡುಕುತ್ತ ಬಂದಾಗ, ಅಣ್ಣ ಕೆನ್ನೆಗೆ ಬಾರಿಸಿದಾಗ ಬೆದರದೆ ಕಂಪನಿಯಲ್ಲೇ ಉಳಿದರು. ಕಲಾವಿದ ವೆಂಕಟೇಶ ಹೆಗ್ಡೆಯವರನ್ನು ಮದುವೆಯಾದರು. ಜನ್ನತ್‌ಬಿಯ ಹಾಸ್ಯಪಾತ್ರದಿಂದ, ಅವರು ಯಾವುದೇ ಕಂಪನಿಗೆ ಹೋದರೂ ಕಲೆಕ್ಷನ್ ಚೆನ್ನಾಗಿ ಆಗುತ್ತಿತ್ತು. ಈಗ 60ರ ಅಂಚಿನಲ್ಲಿದ್ದರೂ ಉತ್ಸಾಹದ ಚಿಲುಮೆಯಂತಿದ್ದಾರೆ ಜನ್ನತ್‌ಬಿ.

ಹಫೀಜಾ ಬೇಗಂ ಮುರ್ತುಸಾಬ ಕಲಿತದ್ದು 9ನೇ ತರಗತಿಯವರೆಗೆ ಮಾತ್ರ. ಇಳಕಲ್ಲಿನ ಕಲಾವಿದ ಖಾಜಾಸಾಬ ಜಂಬಗಿಯವರ ಕೈಹಿಡಿದು ಇವರು ರಂಗಭೂಮಿಗೆ ಬಂದರು. ಚಿತ್ತರಗಿಯ ಶ್ರೀ ಪಂಚಾಕ್ಷರಿ ವಿಜಯ ನಾಟ್ಯ ಸಂಘ, ಹಾನಗಲ್ಲಿನ ಕುಮಾರೇಶ್ವರ ನಾಟ್ಯಸಂಘ, ಸಂಗಮೇಶ್ವರ ನಾಟ್ಯಸಂಘ, ಕೆ. ಬಿ. ಆರ್. ಡ್ರಾಮಾ ಮುಂತಾದ ಕಂಪನಿಗಳಲ್ಲಿ ತಾಳಿಯ ತಕರಾರು, ಕೈಲಾಗದ ಗಂಡ ಕೈಲಾಸ ಕಂಡ, ಹೇಮರೆಡ್ಡಿ ಮಲ್ಲಮ್ಮ, ಜಗಜ್ಯೋತಿ ಬಸವೇಶ್ವರ ಮುಂತಾದ ನಾಟಕಗಳಲ್ಲಿ ತಮ್ಮ ಶ್ರೇಷ್ಠ ಅಭಿನಯ ನೀಡಿ, ಈಗ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯರಾಗಿದ್ದಾರೆ.

ಇನ್ನೂ ದಾಖಲೆಗೆ ಸಿಗದ ಎಷ್ಟು ಮುಸ್ಲಿಂ ಕಲಾವಿದೆಯರಿದ್ದಾರೋ ಏನೋ ? ಧಾರ್ಮಿಕ, ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ, ಹಿಂದೂ ಪೌರಾಣಿಕ ಪಾತ್ರಗಳ ಅಂತರಂಗವನ್ನು ಅರಿತು ಇವರು ಅಭಿನಯಿಸಿರುವುದು ವಿಸ್ಮಯವೇ ಸರಿ.

(ಆಕರ ಗ್ರಂಥ – 'ವೃತ್ತಿರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ'– ಡಾ॥ ದೇವಕನ್ನಿಕಾ ಡಿ. ನಗರಕರ)


ಎಸ್. ಮಾಲತಿ
'ಮಹಾಲಸ ನಿಲಯ', ಜೋಗ್ ರಸ್ತೆ
ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ


## ವಿದ್ಯಾವಂತಿಕೆ

ಓದೋಕೆ, ಬರೆಯೋಕೆ
ಅರಿತಿರದ ಕೋಳಿಗಳ
ಮೈ ತುಂಬ
ಎಷ್ಟೊಂದು
ರೆಕ್ಕೆಯ ಲೇಖನಿಗಳು ?


ಡಾ॥ ವಿ. ಪುಗಳೇಂದಿ
ಬಳ್ಳಾರಿ



ಕೆ. ಪಿ. ಶರ್ಮ ಓಲಿ          ಬಿದ್ಯಾ ಭಂಡಾರಿ

## ನೇಪಾಳ ಈಗ ಜಾತ್ಯತೀತ ಪ್ರಜಾಪ್ರಭುತ್ವ ರಾಷ್ಟ್ರ

ಹಿಮಾಲಯ ಪರ್ವತಗಳ ತಪ್ಪಲಿನಲ್ಲಿರುವ ಪುಟ್ಟ ದೇಶ ನೇಪಾಳ. ಸುಮಾರು ಒಂದೂವರೆ ಲಕ್ಷ ಕಿಲೋಮೀಟರುಗಳ ವಿಸ್ತೀರ್ಣವುಳ್ಳ, ಮೂರುಕೋಟಿ ಜನಸಂಖ್ಯೆಯ ಈ ದೇಶ ಸಾಕಷ್ಟು ದೀರ್ಘಕಾಲ ಗೂರ್ಖಾ ರಾಜವಂಶದ ಆಡಳಿತದಲ್ಲಿದ್ದ ಏಕೈಕ ಹಿಂದೂ ರಾಷ್ಟ್ರ. ಈ ವರ್ಷ ಸೆಪ್ಟೆಂಬರ್ ತಿಂಗಳಲ್ಲಿ ಅನುಮೋದಿಸಲಾದ ಸಂವಿಧಾನದ ಪ್ರಕಾರ ನೇಪಾಳ ಈಗ ಜಾತ್ಯತೀತ ಪ್ರಜಾಪ್ರಭುತ್ವ ಗಣರಾಜ್ಯ. ನೇಪಾಳದ ಹಿರಿಯ ಕಮ್ಯುನಿಸ್ಟ್ ನಾಯಕ ಕೆ. ಪಿ. ಶರ್ಮ ಓಲಿ ದೇಶದ ಪ್ರಧಾನಿಯಾಗಿ ಆಯ್ಕೆಗೊಂಡಿದ್ದಾರೆ. ಹಾಗೆಯೇ ಈ ಗಣರಾಜ್ಯಕ್ಕೆ ಕಮ್ಯುನಿಸ್ಟ್ ಪಕ್ಷದ ಉಪಾಧ್ಯಕ್ಷರಾಗಿರುವ ಬಿದ್ಯಾ ಭಂಡಾರಿ ನೇಪಾಳದ ಮೊದಲ ಮಹಿಳಾ ರಾಷ್ಟ್ರಪತಿಯಾಗಿ ಆಯ್ಕೆಗೊಂಡಿದ್ದಾರೆ. ಹೊಸ ಸರಕಾರದ ಮುಂದೆ ಹಲವು ಕಠಿಣ ಸವಾಲುಗಳಿವೆ. ಮುಖ್ಯವಾಗಿ ಅವು ದೇಶದ ಸುಭದ್ರತೆ ಮತ್ತು ಐಕ್ಯತೆಗೆ ಸಂಬಂಧಪಟ್ಟವು ಹಾಗೂ ಭಾರತದೊಂದಿಗೆ ಸಂಬಂಧಗಳನ್ನು ಬೆಸೆಯುವುದರ ಕುರಿತಾಗಿವೆ.

ಅನುಮೋದನೆಯಾಗಿರುವ ಸಂವಿಧಾನ ನೇಪಾಳದ ಪಾರ್ಲಿಮೆಂಟಿನಲ್ಲಿ ಶೇ. ೮೫ರಷ್ಟು ಬಹುಮತದಿಂದ ಅನುಮೋದನೆಯಾಗಿದ್ದರೂ ಭಾರತದ ಗಡಿಗೆ ಲಗತ್ತಾಗಿರುವ ತೆರಾಯ್ ಭಾಗದಲ್ಲಿ ವಾಸಿಸುತ್ತಿರುವ ಮಾದೇಶಿ ಜನಾಂಗದವರಲ್ಲಿ ಅತೃಪ್ತಿ ಉಂಟುಮಾಡಿದೆ. ತಮ್ಮನ್ನು ಸಂವಿಧಾನ ಕಡೆಗಣಿಸಿದೆ ಎನ್ನುವುದೇ ಮಾದೇಶಿ ಜನಾಂಗದವರ ಆರೋಪ. ಹೊಸ ಸಂವಿಧಾನ ಅನುಮೋದನೆಯಾಗುತ್ತಿದ್ದಂತೆಯೇ ಮಾದೇಶಿ ಜನಾಂಗದವರು ಪ್ರಬಲವಾದ ಹೋರಾಟವನ್ನು ಪ್ರಾರಂಭಿಸಿದ್ದಾರೆ. ಭಾರತದೊಂದಿಗೆ ಸಾಂಸ್ಕೃತಿಕವಾಗಿ ನಿಕಟ ಸಂಬಂಧ ಹೊಂದಿರುವ ಈ ಜನಾಂಗ ಹಿಂದಿ ಮಾತನಾಡುವವರು ಮತ್ತು ಮೊದಲಿನಿಂದಲೂ ಕಡೆಗಣಿಸಲ್ಪಟ್ಟಿರುವವರು. ಸಮಾನ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಿರುವ ಇವರಿಗೆ ಭಾರತದ ಬೆಂಬಲ ಕೂಡ ಇದೆ. ತೆರಾಯ್ ಪ್ರದೇಶದಲ್ಲಿ ನಡೆಯುತ್ತಿರುವ ಹೋರಾಟದಿಂದಾಗಿ ಭಾರತ–ನೇಪಾಳ ನಡುವೆ ವ್ಯಾಪಾರ ಸ್ಥಗಿತಗೊಂಡಿದೆ. ಗಡಿಯಲ್ಲಿ ಒಂದು ರೀತಿಯ ಪ್ರತಿಬಂಧ ಇರುವ ಕಾರಣ ಭಾರತದಿಂದ ನೇಪಾಳಕ್ಕೆ ಸರಕುಗಳನ್ನು ಕೊಂಡೊಯ್ಯುತ್ತಿರುವ ಸಾವಿರಾರು ಟ್ರಕ್ಕುಗಳು ಸಾಲಾಗಿ ನಿಂತಿವೆ. ಈ ಅನಧಿಕೃತ ಬ್ಲಾಕೇಡಿನಿಂದಾಗಿ ನೇಪಾಳ–ಭಾರತ ಸಂಬಂಧಗಳಿಗೆ ಕಿರಿಕಿರಿಯಾಗಿದೆ. ಇದರ ಬಗ್ಗೆ ಪರಸ್ಪರ ದೋಷಾರೋಪಣೆಗಳಾಗುತ್ತಿವೆ. ಆದರೆ ಭಾರತದೊಂದಿಗೆ ವ್ಯಾಪಾರ ವಹಿವಾಟಿನ ಸ್ಥಗಿತತೆಯಿಂದಾಗಿ ತೊಂದರೆಗೀಡಾಗಿರುವವರು ನೇಪಾಳದ ಜನಸಾಮಾನ್ಯರು.



ಕಳೆದ ಏಪ್ರಿಲ್ ತಿಂಗಳಲ್ಲಿ ಸಂಭವಿಸಿದ ಭಾರಿ ಭೂಕಂಪನದ ಅನಾಹುತದಿಂದ ಚೇತರಿಸಿಕೊಳ್ಳುತ್ತಿರುವಾಗಲೇ ತೆರಾಯ್ ವಲಯದಲ್ಲಿ ಮಾದೇಶಿಗಳು ನಡೆಸುತ್ತಿರುವ ಆಂದೋಳನದಿಂದಾಗಿ ನೇಪಾಳದ ಜನ ಅಗತ್ಯ ವಸ್ತುಗಳಿಗಾಗಿ ಪರದಾಡುವಂತಾಗಿದೆ. ಭಾರತದಿಂದ ಪೆಟ್ರೋಲಿಯಮ್ ಸರಕುಗಳು ಬಾರದೆ ನೇಪಾಳದ ಜನಜೀವನ ಅಸ್ತವ್ಯಸ್ತಗೊಂಡಿದೆ, ನೇಪಾಳದಿಂದ ಭಾರತಕ್ಕೆ ಬರುತ್ತಿದ್ದ ಸರಕುಗಳೂ ಬಂದಾಗಿದೆ. ಗಂಭೀರವಾಗಿರುವ ಈ ಪರಿಸ್ಥಿತಿಯನ್ನು ನಿವಾರಿಸಲು ಎರಡೂ ದೇಶಗಳು ಕಲೆತು ವ್ಯವಹರಿಸಬೇಕಾಗಿದೆ. ತತ್ಕಾಲಕ್ಕೆ ಚೀಣಾದ ಮೊರೆಹೋಗಿರುವ ನೇಪಾಳ ಪೆಟ್ರೋಲಿಯಮ್ ಮತ್ತು ಇತರ ಅಗತ್ಯ ವಸ್ತುಗಳನ್ನು ಅಲ್ಲಿಂದ ಪಡೆದುಕೊಳ್ಳುತ್ತಿದೆ. ನೇಪಾಳದ ನೂತನ ಸರಕಾರ ತೆರಾಯ್‌ವಲಯದ ಮಾದೇಶಿಗಳ ಬೇಡಿಕೆಗಳನ್ನು ಪರಿಶೀಲಿಸಲು ಮುಂದಾಗಿದೆ. ಭಾರತ ಸರಕಾರ ಈ ನೆರೆ ರಾಜ್ಯದೊಂದಿಗೆ ಸಂಬಂಧವನ್ನು ಉತ್ತಮಗೊಳಿಸಲು ಕ್ರಮ ತೆಗೆದುಕೊಳ್ಳುವುದು ಸೂಕ್ತ.

ಅನಾದಿಕಾಲದಿಂದ ಭಾರತ–ನೇಪಾಳಗಳ ನಂಟು ಬೆಳೆದು ಬಂದಿದೆ. ಅಧಿಕಾರ ವಹಿಸಿಕೊಂಡ ಮೇಲೆ ಮೋದಿಯವರು ಭೇಟಿ ನೀಡಿದ ಮೊದಲ ದೇಶವೇ ನೇಪಾಳ. ಭಾರತದ ಪ್ರಧಾನಿಗೆ ಅಲ್ಲಿನ ಜನ ಅಭೂತಪೂರ್ವವಾದ ಸ್ವಾಗತ ನೀಡಿದ್ದುದನ್ನು ಮರೆಯುವ ಹಾಗಿಲ್ಲ. ಹಿಂದುತ್ವವಾದಿ ಮೋದಿ ಸರಕಾರಕ್ಕೆ ನೇಪಾಳ ಜಾತ್ಯತೀತ ರಾಷ್ಟ್ರವೆಂದಾಗಿರುವುದರಿಂದ ಅಸಮಾಧಾನ ಒಂದು ಕಡೆಯಾದರೆ, ಮಾದೇಶಿಗಳ ಬೇಡಿಕೆಗಳು ಇನ್ನೊಂದು. ನೇಪಾಳ ಸ್ವತಂತ್ರ ಸಾರ್ವಭೌಮ ರಾಷ್ಟ್ರ, ಅದು ಅಂಗೀಕರಿಸಿರುವ ಸಂವಿಧಾನ ಅದರ ಆಂತರಿಕ ವಿಷಯ. ಭಾರತ ಅದರ ಕುರಿತು ತಲೆಕೆಡಿಸಿಕೊಳ್ಳುವುದು, ಮಾದೇಶಿಗಳಿಗೆ ಪರೋಕ್ಷ ಬೆಂಬಲ ನೀಡುವುದು ಸರಿಯಲ್ಲ. ನೇಪಾಳದ ಚುನಾಯಿತ ಸರಕಾರದೊಂದಿಗೆ ಮಾತುಕತೆಯಲ್ಲಿ ತೊಡಗಿ ಸಂಬಂಧಗಳನ್ನು ಸುಧಾರಿಸುವುದು ದೊಡ್ಡ ರಾಷ್ಟ್ರವಾಗಿ ಭಾರತದ ಕರ್ತವ್ಯ.

*          *          *

## ಆಫ್ಘಾನಿಸ್ತಾನದಲ್ಲಿ ಅಮೆರಿಕದ ಸೇನೆಯ ಉಪಸ್ಥಿತಿ ಮುಂದುವರಿಕೆ

ಆಫ್ಘಾನಿಸ್ತಾನದ ಐದನೇ ಅತಿದೊಡ್ಡ ನಗರ ಮೂರು ಲಕ್ಷ ಜನಸಂಖ್ಯೆಯ ಕುಂದುಜ್ ನಗರ ಈಚೆಗೆ ಹದಿನೈದು ದಿನಗಳ ಕಾಲ ತಾಲಿಬಾನ್‌ಗಳ ವಶದಲ್ಲಿತ್ತು. ೨೦೦೧ರಲ್ಲಿ ಅಧಿಕಾರ ಕಳೆದುಕೊಂಡ ಮೇಲೆ ತಾಲಿಬಾನ್ ವಶಪಡಿಸಿಕೊಂಡಿದ್ದ ದೊಡ್ಡ ನಗರ ಇದು. ಈ ನಗರದ ರಕ್ಷಣೆಗೆ ನಿಯಮಿತವಾಗಿದ್ದ ೭೦೦೦ ಆಫ್ಘನ್ ಪಡೆ ತಮ್ಮ ಬಳಿ ಇದ್ದ ಆಯುಧಗಳನ್ನು ಬಿಟ್ಟು ಪರಾರಿಯಾದರು. ತಾಲಿಬಾನ್‌ಗಳು ಕಾರಾಗಾರದಲ್ಲಿದ್ದ ಬಂಧಿಗಳನ್ನೆಲ್ಲ ಬಿಡುಗಡೆ ಮಾಡಿದರು. ನಗರದ ಆಕ್ರಮಣ ತಾಲಿಬಾನ್‌ಗಳ ಪ್ರಾಬಲ್ಯವನ್ನು ತೋರಿಸಲಾಗಿತ್ತು ಎನ್ನಬಹುದು. ಬೇಕೆನಿಸಿದಾಗ ಆಫ್ಘಾನಿಸ್ತಾನದ ಯಾವ ಪ್ರದೇಶವನ್ನಾದರೂ ಆಕ್ರಮಿಸಿಕೊಳ್ಳಬಹುದು ಎನ್ನುವುದನ್ನು ಅವರು ಪ್ರದರ್ಶಿಸಿದ್ದಾರೆ. ಕುಂದುಜ್ ನಗರದ ಆಕ್ರಮಣವನ್ನು ಅಂತ್ಯಗೊಳಿಸಿದ್ದೂ ತಾಲಿಬಾನ್‌ಗಳ ಸ್ವಪ್ರೇರಣೆಯಿಂದ, ಆಯುಧ ಸಾಮಗ್ರಿಗಳನ್ನು ಉಳಿಸಿಕೊಳ್ಳುವ ಸಲುವಾಗಿ. ಈ ಘಟನೆ ಆಫ್ಘನ್ ದೇಸಿ ಸೇನೆಯ ದೌರ್ಬಲ್ಯವನ್ನು ಹೊರಗೆಡಹಿದೆ. ಈ ವರ್ಷಾಂತ್ಯದೊಳಗೆ ಆಫ್ಘಾನಿಸ್ತಾನದಿಂದ ಅಮೆರಿಕದ ಸೇನೆಗಳು ಸಂಪೂರ್ಣವಾಗಿ ಕಾಲ್ತೆಗೆಯುವುವು ಎಂದು ಅಧ್ಯಕ್ಷ ಒಬಾಮಾ ಹಿಂದೆ ಹೇಳಿದ್ದರು. ಆದರೆ ಅದೀಗ ಸುಳ್ಳಾಗಿದೆ.

ತಮ್ಮ ಅಧ್ಯಕ್ಷತೆಯ ಅವಧಿ ಮುಗಿಯುವುದರೊಳಗಾಗಿ ಅಮೆರಿಕ ಆಫ್ಘಾನಿಸ್ತಾನ ಮತ್ತು ಇರಾಕ್ ಯುದ್ಧಗಳಿಂದ ಮುಕ್ತವಾಗುವುದು, ಅಮೆರಿಕದ ಸೇನೆಗಳು ಸ್ವದೇಶಕ್ಕೆ ಮರಳುವುದಾಗಿ ಬರಾಕ್ ಒಬಾಮಾ ಘೋಷಿಸಿದ್ದರು. ಆದರೆ ಈಗ ಅವರಿಗೆ ತಮ್ಮ ಮಾತನ್ನು ಉಳಿಸಿಕೊಳ್ಳಲಾಗುತ್ತಿಲ್ಲ. ಎರಡೂ ದೇಶಗಳಲ್ಲಿ ಅಮೆರಿಕದ ಸೇನೆಯ



ಅಲ್ಲಿ ಸ್ಥಾಪನೆಗೊಂಡಿರುವ ಕೈಗೊಂಬೆ ಸರಕಾರಗಳನ್ನು ಉಳಿಸಲು ಅಮೆರಿಕದ ಸೇನೆ ಅನಿರ್ದಿಷ್ಟ ಕಾಲಾವಧಿಗೆ ಮುಂದುವರಿಯಲಿದೆ.

ಅಮೆರಿಕದ ಅಧ್ಯಕ್ಷ ಒಬಾಮಾ ಅವರ ಈಗಿನ ಪ್ರಕಟಣೆಯಂತೆ ಅಮೆರಿಕನ್ ಸೇನೆಗಳು 2017ರವರೆಗೆ ಆಫ್ಘಾನಿಸ್ತಾನದಲ್ಲಿ ಉಳಿಯುವುವು. ಅಮೆರಿಕದ ಸೈನಿಕ ಸಂಖ್ಯೆ ಈಗ ಹತ್ತು ಸಾವಿರದಷ್ಟಿದೆ. ಕಾಬೂಲಿನಲ್ಲಿರುವ ಅಮೆರಿಕದ ರಾಯಭಾರಿ ಕಚೇರಿಯನ್ನು ಕಾಪಾಡುವುದಕ್ಕೇ ಒಂದು ಸಾವಿರ ಸಶಸ್ತ್ರ ಸೈನಿಕರ ಅಗತ್ಯವಿದೆಯಂತೆ. ಹದಿನಾಲ್ಕು ವರ್ಷಗಳ ಹಿಂದೆ ಭಯೋತ್ಪಾದನೆಯ ವಿರುದ್ಧ ಯುದ್ಧ ಸಾರಿದ ಅಮೆರಿಕ ಮೊದಲು ಆಕ್ರಮಿಸಿಕೊಂಡಿದ್ದು ಆಫ್ಘಾನಿಸ್ತಾನ. ಆದರೂ ತಾಲಿಬಾನ್‌ಗಳ ಹುಟ್ಟಡಗಿಸಲು ಸಾಧ್ಯವಾಗಿಲ್ಲ. ಆಫ್ಘಾನ್ ಸರಕಾರ ಅಸ್ತಿತ್ವದಲ್ಲಿರುವುದು ನೆಪಮಾತ್ರಕ್ಕೆ. ರಾಜಧಾನಿ ಕಾಬೂಲಿನ ಹೊರಗೆ ಅದರ ಆಣತಿಗಳನ್ನು ಪಾಲಿಸುವವರು ಕಡಿಮೆ. ತಾಲಿಬಾನ್‌ಗಳು ಎಲ್ಲೆಲ್ಲೂ ಹರಡಿಕೊಂಡಿದ್ದಾರೆ. ಇತ್ತ ಭಯೋತ್ಪಾದನೆಯ ಉಪಟಳವೂ ಕಮ್ಮಿಯಾಗಲಿಲ್ಲ. ಅತ್ತ ಅಮೆರಿಕನ್ ಸೇನೆಯ ಕಾರ್ಯಾಚರಣೆಯೂ ನಿಲ್ಲಲಿಲ್ಲ.

ಉಪಸ್ಥಿತಿ ಮುಂದುವರಿಯಲಿದೆ. ಒಂದು ಕಡೆ ಇಸ್ಲಾಮಿಕ್ ರಾಜ್ಯಸ್ಥಾಪನೆಯ ಬಂಡುಕೋರರು, ಇನ್ನೊಂದು ಕಡೆ ತಾಲಿಬಾನ್ ಉಗ್ರರು ಅಮೆರಿಕದ ಸೇನೆಯನ್ನು ಕಟ್ಟಿಹಾಕಿದ್ದಾರೆ. ಎರಡೂ ಕಡೆ ಅಮೆರಿಕದ ಸೇನೆಯ ಉಪಸ್ಥಿತಿ ಮುಂದುವರಿಯಲಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




# ಕತ್ತಲವ್ವನ ಜೋಗುಳ

**ಸೂ**ರ್ಯನ ಮಿಥುನದಿ
ದಕ್ಕಿದ ಈ ಹಗಲು
ಪಾಪನಿವೇದನೆಯ ಪೋಷಾಕಿನಲಿ
ಬಣ್ಣಗೆಟ್ಟ ಬೀದಿಗೆ ಮಾತ್ರ
ಚಟ್ಟದೊಳಗಿನ ಚುಟ್ಟಾದಂತೆ
ಕಿಂಡಿ ಕಿಂಡಿಯ
ತೂತು ಹೊಗೆ

ಮರಗೆಟ್ಟ ನೆಲದೊಳಗೆ
ಅಂಗಾತ ಮಲಗಿದ ಬೆಳಕು
ಬಡವರೆದೆಗೆ ಖಾಲಿ ಖಾಲಿಯಾದ ಬಾವಿ
ಈ ಬೆಳಕಿನ ವಿಚಿತ್ರ ನಗೆಯ
ವಕ್ರ ನಡಿಗೆಗೆ
ಕತ್ತಲವ್ವನ ಜೋಗುಳಕ್ಕೆ ಹುಣ್ಣು ಬಿದ್ದಿದೆ

ಸಮಾನತೆಯ ತಿಲಕಗಳು
ಹೆಪ್ಪುಗಟ್ಟಿದ
ಧ್ವಜದ ನೆರಳೊಳಗೆ
ನಂಬಿಕೆಯ ಹೂ ಬಳ್ಳಿಗಳು
ಬರಸಿಡಿಲ ನೊರೆಗೆ ಬೇಲಿಯಂತಾಗಿವೆ

ಜಾತ್ರೆಯೊಳಗೆ ಕಾಣೆಯಾದ ಹೆಜ್ಜೆಗಳು
ಮಿಠಾಯಿಯವನ ಬಾಯಿ ಚಪ್ಪರಕೆಯಲಿ
ನನ್ನ ನಗು ಮತ್ತು ಸೌಂದರ್ಯ
ಕಾಲ ಗರ್ಭದ ಕಾವಿನೊಳಗೆ

ಇತಿಹಾಸದ ಚಕ್ಕಡಿಯೊಳಗೆ
ಹೊರಳಾಡಿದ
ಕತ್ತಲೆ ದೇಹಕ್ಕೆ
ಅನವರತ ಪಹರೆಯೊಡೆವ
ಗುಪ್ತ ಗೂಳಿಗಳ ಕಾಲ್ಗೆಜ್ಜೆ...

ಎದೆಗೂಡಿಗೆ ಬಿದ್ದ ಚಂದಿರ
ಹೊಕ್ಕಳಿನ ಮಗುವಿನಂತೆ
ಕರುಳಿನ ಕಿಚ್ಚಿಗೆ
ಗುಳೆ ಹೋದ ಬೀದಿ
ಜಗದ ಬಿಕ್ಕಳಿಕೆಯ ನಕಾಶೆಗೆ
ಹನಿ ಹನಿ ದೀಪ

**ಕಿರಸೂರ ಗಿರಿಯಪ್ಪ** (ಶಿಕ್ಷಕರು)
ಕಿರಸೂರ(ಸಾ। ಪೊ) ೫೮೭೧೧೧, ಬಾಗಲಕೋಟೆ (ತಾ। ಜಿ.)

# ಪುರೋಗಾಮಿ ಚಳುವಳಿಯ ಒಂದು ಪಕ್ಷಿನೋಟ

‘ಶಬ್ದ ಪ್ರಕಾಶನ’ ಎಂಬ ಸಂಸ್ಥೆಯು ಹತ್ತು ವರ್ಷಗಳ ಅವಧಿಯಲ್ಲಿ ನಡೆಸಿರುವ ಗಮನಾರ್ಹ ಕೆಲಸವನ್ನು ಪರಾಮರ್ಶಿಸಿ ಮರಾಠಿ ಪತ್ರಿಕೆಗಳು ಹಲವು ಲೇಖನಗಳನ್ನು ಕಳೆದ ಎರಡು ಮೂರು ತಿಂಗಳುಗಳಲ್ಲಿ ಪ್ರಕಟಿಸಿವೆ. ಜನವರಿ 2015ರ “ಮುಕ್ತ ಶಬ್ದ” ಎಂಬ ನಿಯತಕಾಲಿಕೆಯಲ್ಲಿ ಅದಕ್ಕೆ ಮೊದಲೇ ವಿಮರ್ಶಾತ್ಮಕ ವರದಿ ಪ್ರಕಟವಾಗಿತ್ತು. ಮುಂಬೈನ ‘ಶಬ್ದ ಪ್ರಕಾಶನ’ ಮಹಾರಾಷ್ಟ್ರದ ಸಮಕಾಲೀನ ಪುರೋಗಾಮಿ ಚಟುವಟಿಕೆಗಳಿಗೆ ಒಂದು ರೀತಿಯ ಪೂರಕ ಕೇಂದ್ರವಾಗಿದೆ. ಅದನ್ನು ಕುರಿತ ಒಂದು ವಿಶ್ಲೇಷಣೆಯು ಇಂದಿನ ಸಂದರ್ಭಕ್ಕೆ ಬಹಳ ಪ್ರಸ್ತುತವೆನಿಸುತ್ತದೆ.

**ಮೂಲ : ರಾಜನ್ ಬಾವಡೇಕರ್   ಕನ್ನಡಕ್ಕೆ : ಜಿ. ಆರ್.**

ಕೆಲವು ತಿಂಗಳುಗಳೇ ಕಳೆದುಹೋಗಿವೆ : ಮೋದಿ ನೇತೃತ್ವದಲ್ಲಿ ಕೇಂದ್ರ ಸರ್ಕಾರವು ಅಧಿಕಾರದ ಪಲ್ಲಟವನ್ನು ಕಂಡಿತು. ಅಧಿಕ ಬಹುಮತವನ್ನು ಪಡೆದ ಸರ್ಕಾರ ಅದೆಂದು ಭಾವಿಸಲಾಗಿತ್ತು. ಒಟ್ಟು ಮತಗಳ ಅನುಪಾತದ ಪ್ರಮಾಣದಲ್ಲಿ ಸ್ಥಾನಗಳ ಹಂಚಿಕೆಯಾಗುವ ಪದ್ಧತಿ ಇದ್ದಿದ್ದರೆ ಮೋದಿಯವರ ಪಕ್ಷಕ್ಕೆ ಲೋಕಸಭೆಯಲ್ಲಿ ಒಟ್ಟು ಸ್ಥಾನಗಳ ಪೈಕಿ ಮೂರನೆಯ ಒಂದರಷ್ಟು ಸ್ಥಾನಗಳು ಸಹ ದೊರೆಯುತ್ತಿರಲಿಲ್ಲ. ಆದಾಗ್ಯೂ ಮೋದಿಯವರು ಸರ್ಕಾರ ರಚಿಸಿದಾಗ ಮರಾಠಿ ನಿಯತಕಾಲಿಕೆಗಳು ಭಾರತೀಯ ಜನತಾ ಪಕ್ಷವು ಪಡೆದಿದ್ದ ಬಹುಮತದ ಬಗ್ಗೆ ಬೇಕಾದಷ್ಟು ಚರ್ಚೆಗಳನ್ನು ನಡೆಸಿದವು. ಅದರ ಯಶಸ್ಸಿನ ಗುಟ್ಟು ಚಿದಂಬರ ರಹಸ್ಯವೆಂಬಂತೆ ವಿಶ್ಲೇಷಿಸಲಾಗಿದ್ದಿತು. ಇಂದಿನ ಸನ್ನಿವೇಶ ತಿಳಿದಿದೆಯಲ್ಲವೆ ? ಒಂದಷ್ಟು ಟಿ.ವಿ. ವಾಹಿನಿಗಳು, ತಂತ್ರಜ್ಞಾನದ ವಿಪುಲ ಬಳಕೆ, ಜಾಗತಿಕವಾಗಿ ಬಳಸಲಾಗುವ ಸಂಖ್ಯೆಗಳ ವಿಶ್ಲೇಷಣೆಯಲ್ಲಿನ ಸರ್ಕಸ್, ಶೇಕಡಾವಾರು ಭ್ರಮಾತ್ಮಕ ಲೆಕ್ಕಾಚಾರ, ಹೀಗೆ ಹತ್ತಾರು ಪರಿಕರಗಳು. ಎಲ್ಲಾ ನಿಷ್ಫಲವಾದವು, ಆದರೆ ತಿಂಗಳುಗಟ್ಟಲೆ ಇಂತಹ ವಿದ್ವತ್ಪೂರ್ಣ ಚರ್ಚೆ ನಡೆಯುತ್ತಿರುತ್ತದೆ. ಮರಾಠಿಯ ಒಂದು ನಿಯತಕಾಲಿಕವಿದೆ, “ಮೌಜ್” ಎಂದು ಅದರ ಹೆಸರು. ಅದು ಎಲ್ಲವನ್ನೂ ಅಳೆದು ಬಿಸಾಡುತ್ತದೆ! ಜನಪ್ರತಿನಿಧಿಗಳ ಮತ್ತು ಚುನಾವಣಾ ಅಭ್ಯರ್ಥಿಗಳ ಸಂತತಿ, ಧರ್ಮ, ಜಾತಿ, ಎಲ್ಲವನ್ನೂ ಕೆದಕಿ ‘ಮೌಜ್’ ತನ್ನ ತೀರ್ಮಾನ ಪ್ರಕಟಿಸುತ್ತದೆ. ಆದರೂ ಎಡವಿಬೀಳುವ ಪ್ರಸಂಗಗಳಿಗೆ ಕೊರತೆ ಇಲ್ಲ. ಯಾವುದೋ ಪಕ್ಷಕ್ಕೆ ಶೇಕಡ ೩೯ ಕಟ್ಟಿಟ್ಟ ಬುತ್ತಿ ಎಂದು ಡಂಗೂರ ಸಾರುತ್ತದೆ, ಆದರೆ ಫಲಿತಾಂಶಗಳು ಪ್ರಕಟವಾದ ನಂತರ ಅದು ಯಾರ ನೆನಪಿನಲ್ಲೂ ಉಳಿದಿರುವುದಿಲ್ಲ. ಈಗಂತೂ ಶೇ.೩೯ರಷ್ಟು ಮಂದಿ ಮೋದಿ ವಿರುದ್ಧ ಇದ್ದಾರೆಂದು ಸುಖ ಸವಿಯುವವರೂ ಇದ್ದಾರೆ, ಆದರೆ ಮೋದಿಯವರು ಅಧಿಕಾರಕ್ಕೆ ಬಂದಿರುವುದು ಪ್ರಜಾಪ್ರಭುತ್ವಕ್ಕೆ ಆಘಾತ ತಂದಿದೆಯೆಂದು ಬಹಿರಂಗವಾಗಿ ಘೋಷಿಸುವುದು ಕಮ್ಮಿ. ಇಂತಹ ಲೆಕ್ಕಾಚಾರ, ವಿಶ್ಲೇಷಣೆ, ಅಲ್ಪಸಾಂತ್ವನ, ಇತ್ಯಾದಿಗಳು ಪುರೋಗಾಮಿ ಚಳುವಳಿಯ ಬಲಾಢ್ಯತೆಯನ್ನೇನೂ ಬಿಂಬಿಸುವುದಿಲ್ಲ.

ಮುಂಬೈನ ದಾದರ್‌ನಲ್ಲಿ ‘ಹಿಂದು ಕಾಲನಿ’ ಎಂಬುದೊಂದಿದೆ. ಅಲ್ಲಿ “ಶ್ರಮಿಕ್” ಎಂಬ ಸಂಘಟನೆಯ ಕಚೇರಿಯಲ್ಲಿ ಚುನಾವಣೆಗೆ ಮುಂಚೆ ಸಭೆಯೊಂದು ಜರುಗಿತ್ತು. ಎಡಪಕ್ಷಗಳನ್ನು ಬೆಂಬಲಿಸುವ ಪುರೋಗಾಮಿ





ಕವಿಗಳು, ಸಾಹಿತಿಗಳು, ಕಲಾವಿದರು, ಕಾರ್ಮಿಕ ನಾಯಕರು, ಎಲ್ಲಾ ಉಪಸ್ಥಿತರಿದ್ದರು. ಕೇಂದ್ರದಲ್ಲಿ ಆರೆಸ್ಸೆಸ್ ಅಧಿಕಾರಕ್ಕೆ ಬರಬಹುದೆಂದು ಅವರಾರೂ ಭಾವಿಸಿರಲಿಲ್ಲ. ಅಂತಹ ಗುಸುಗುಸು ಮಾತು ಕಿವಿಗೆ ಬೀಳುವಂತಹ ಕಡೆಗಳಿಗೆ ಅವರು ಹೋಗಿಯೇ ಇರಲಿಲ್ಲವೇನೋ ! ಅವರೆಲ್ಲಾ ಸೇರಿ ಚರ್ಚಿಸಿದ್ದೇನು ಗೊತ್ತೆ ? "ಪರಿವರ್ತನೆಯ ಹಾದಿಯಲ್ಲಿ" ಎಂಬ ಪಾಕ್ಷಿಕ ಪತ್ರಿಕೆಯ ಆರ್ಥಿಕ ಸ್ಥಿತಿ–ಗತಿ. ಅದೊಂದು ಪುರೋಗಾಮಿ ಪತ್ರಿಕೆ, ತನ್ನ ಕಾಲ ಮೇಲೆ ಸ್ಥಿರವಾಗಿ ನಿಲ್ಲಲು ಸಾಧ್ಯವಾಗದೆ ತಡವರಿಸುತ್ತಿರುವ ಜನಪರ ಸಂಗಾತಿ. ದಿನ ಕಳೆದಂತೆ ಪತ್ರಿಕೆಗೆ ಉದಾರವಾಗಿ ದೇಣಿಗೆ ನೀಡಬಲ್ಲ ಚಂದಾದಾರರು ಇಲ್ಲವಾಗಿದ್ದಾರೆಂಬುದು ಅದರ ಆತಂಕ. ಸಭೆಯಲ್ಲಿ ಹತ್ತಾರು ಕಾರ್ಮಿಕ ಸಂಘಗಳ ನಾಯಕರಿದ್ದರು. ಎಲ್ಲಾ ಮಜಬೂತಾದ ಸಂಘಗಳೇ, ಆದರೆ ಅವರಲ್ಲಿ ಯಾರೊಬ್ಬರೂ "ಯೋಚನೆ ಬಿಡಿ, ನಾವು ನಿಮಗೆ ಐದುಸಾವಿರ ಚಂದಾದಾರರನ್ನು ಕೂಡಿಸಿಕೊಡುತ್ತೇವೆ; ಮುಂಬೈ ಮತ್ತು ಠಾಣೆ ವಿಭಾಗಗಳಲ್ಲಿ ಅಷ್ಟು ಮಾಡುವುದೇನು ದೊಡ್ಡದು" ಎನ್ನಲಿಲ್ಲ, ಎನ್ನುವ ಸ್ಥಿತಿಯಲ್ಲೂ ಇರಲಿಲ್ಲ. ತಮ್ಮ ಪ್ರಭಾವದ ಬಗ್ಗೆ ಸಾಕಷ್ಟು ಅಭಿಮಾನ ತುಂಬಿಕೊಂಡಿದ್ದ ಕೆಲವು ಪುರೋಗಾಮಿ ಕವಿಗಳು, ಲೇಖಕರು ಮತ್ತು ಕಲಾವಿದರು ಪ್ರಸ್ತಾವವೊಂದನ್ನು ಮುಂದಿಟ್ಟರು. ತಾವೆಲ್ಲಾ ಪ್ರಸಿದ್ಧರು, ಕಾರ್ಮಿಕ ಸಂಘಗಳು ಪ್ರಬಲವಾಗಿವೆ, ಆದ್ದರಿಂದ ತಾವೆಲ್ಲಾ ಒಟ್ಟಾಗಿ ಬೀದಿಗಿಳಿದು ಹಣ ಸಂಗ್ರಹಿಸಬಹುದಲ್ಲವೆ? "ಬನ್ನಿ, ಭುಜಕ್ಕೆ ಜೋಳಿಗೆ ನೇತುಹಾಕಿಕೊಳ್ಳಿ, 'ಸಾಹಿತ್ಯ ಸಹವಾಸ' ಎಂಬಂತಹ ಕಾಲನಿಗಳಲ್ಲಿ ಓಡಾಡಿ ಹಣ ಸಂಗ್ರಹಿಸೋಣ. ಜನರಲ್ಲಿ ಶೇ.೬೯ರಷ್ಟು ಮಂದಿ ನಮ್ಮ ಕಡೆಗಿದ್ದಾರೆ. ಹೀಗಿರುವಾಗ ಜನಪರ ಪಾಕ್ಷಿಕ ಪತ್ರಿಕೆಯೊಂದಕ್ಕೆ ಒಂದಷ್ಟು ಹಣ ಸಂಗ್ರಹಿಸುವುದು ಕಷ್ಟದ ಕೆಲಸವೇನಲ್ಲ" ಎಂಬ ಸಲಹೆ ಬಂದಿತು.

ಪುರೋಗಾಮಿ ಸಾಹಿತಿಗಳು, ಕವಿಗಳು, ಕಲಾವಿದರು ಮತ್ತು ಕಾರ್ಮಿಕ ನಾಯಕರೆಲ್ಲಾ ಸೇರಿ "ಪರಿವರ್ತನೆಯ ಹಾದಿಯಲ್ಲಿ" ಎಂಬ ಸಂಸ್ಥೆಯನ್ನು ಉಳಿಸಿದರೇ, ಇಲ್ಲವೇ, ಎಂಬುದು ಬೇರೆ ಪ್ರಶ್ನೆ. ಪ್ರಗತಿಪರ ಚಳುವಳಿಯೊಂದರ ಸಾಮರ್ಥ್ಯದ ಮಾಪನಕ್ಕೆ ಅದೊಂದು ಪ್ರಾಸಂಗಿಕ ಸಂಗತಿ, ಅಷ್ಟೆ. ಮೂಲತಃ ಇರುವ ಪ್ರಶ್ನೆ ಇನ್ನೂ ಹೆಚ್ಚು ಸಂದಿಗ್ಧವಾದ್ದು. ಸಾಹಿತಿಗಳು, ಕವಿಗಳು ಮತ್ತು ಕಲಾವಿದರು ಒಂದು ಕಡೆ ಮತ್ತು ಪ್ರಗತಿಪರ ಕಾರ್ಮಿಕ ಚಳುವಳಿಗಳು ಇನ್ನೊಂದು ಕಡೆ. ಇವೆರಡರ ನಡುವಣ ಭಾವನಾತ್ಮಕ ಸಂಬಂಧ ಎಂಥದು ಮತ್ತು ಎಷ್ಟು ಗಟ್ಟಿಯಾದ್ದು? ಕಾರ್ಮಿಕ ಚಳುವಳಿಯ ಆಸರೆಯನ್ನು ಪಡೆದು ತಾನೆ ಈ ಮಂದಿ ಪತ್ರಿಕೆಯನ್ನು ಉಳಿಸುವ ಭರವಸೆ ಹೊಂದಿದ್ದುದು ! ಅಲ್ಲದೆ ಎರಡು ಗುಂಪುಗಳೂ ಜೊತೆಯಲ್ಲೇ ಹೆಜ್ಜೆ ಹಾಕುವ ಆಶಯವನ್ನು ಸಹ ಹೊಂದಿವೆ. ಹೆಜ್ಜೆ ಹಾಕುವುದೆಂದರೆ ಯಾವುದೋ ಒಂದು ನಿರ್ದಿಷ್ಟ ವಿಷಯದಲ್ಲಿ ಅಲ್ಲ; ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಗೊಂದಲ ಇರುವಾಗೆಲ್ಲಾ ಎರಡು ಬಣಗಳೂ ಜೊತೆಯಲ್ಲೇ ಇರುವಂಥವು, ಇಲ್ಲವೇ ಇರಬೇಕಾದಂಥವು. ಇರಾನ್, ಇರಾಕ್, ಇಸ್ರೇಲ್‌ನಂತಹ ದೇಶಗಳತ್ತ ಕಣ್ಣು ಹಾಯಿಸಿ; ಅಲ್ಲಿಯ ಚಲನಚಿತ್ರಕಾರರು ಎಷ್ಟೋ ಮಂದಿ ಕಾರಾಗೃಹಗಳಲ್ಲಿದ್ದಾರೆ. ಆ ದೇಶಗಳ ಆಳುವವರ ಕೆಂಗಣ್ಣುಗಳಿಗೆ ಇವರನ್ನು ಕಂಡರೆ ಉಗ್ರವಾದ ಅಸಹನೆ. ಆದರೆ ಈ ಕಲಾವಿದರು ತಮ್ಮ ಸೃಜನಶೀಲ ಪ್ರವೃತ್ತಿಯನ್ನು ಬೆಂಬಿಡದೆ ಕಾಯ್ದುಕೊಳ್ಳುತ್ತಿದ್ದಾರೆ. ಆ ದೇಶಗಳಲ್ಲಿ ಸರ್ವಾಧಿಕಾರ ತಲೆಯೆತ್ತಿದಾಗೆಲ್ಲಾ ಇವರು ನೇರವಾಗಿ ಹೋರಾಟಗಳಲ್ಲಿ ಭಾಗಿಗಳಾಗಿದ್ದಾರೆ. ಒಂದೊಂದು ದಶಕವು ಪೂರೈಸಿದಾಗಲೂ ಇವರು ಸಂತಸದ ಕ್ಷಣಗಳನ್ನು ಅನುಭವಿಸಿದ್ದಾರೆ. ಅದರ ಗಹನತೆಯನ್ನು ನಾವು ಅರಿಯಲಾರೆವು, ಅದನ್ನು ಅವರ ಬಾಯಿಂದಲೇ ಕೇಳಬೇಕು. ನಮ್ಮ ದೇಶದ ಸಂದರ್ಭದಲ್ಲೂ ಇದು ನಿಜ: ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಮತ್ತು ಕಚ್‌ನಿಂದ ಕಾಮರೂಪದವರೆಗೆ ನಮ್ಮಲ್ಲೂ ಸೃಜನಶೀಲ ಕವಿಗಳಿದ್ದಾರೆ, ಸಾಹಿತಿಗಳಿದ್ದಾರೆ, ಕಲಾವಿದರಿದ್ದಾರೆ. ಅವರು ಖಂಡಿತವಾಗಿಯೂ ಬಿಕ್ಕಟ್ಟುಗಳ ಸಂದರ್ಭದಲ್ಲೇ ಕ್ರಿಯಾಶೀಲರಾಗಿ ಸೃಷ್ಟಿಕ್ರಿಯೆಯಲ್ಲಿ ತೊಡಗಿದ್ದಾರೆ. ಅವರು ಎದುರಿಸುವ ಬಿಕ್ಕಟ್ಟು ಎಷ್ಟು ತೀವ್ರವಾದದ್ದೆಂಬುದು ದೇಶದ ಜನತೆಗೆಲ್ಲಾ ತಿಳಿದಿದೆ. ಪ್ರಮಾಣದಲ್ಲಿ ದೇಶದಿಂದ ದೇಶಕ್ಕೆ ಸ್ವಲ್ಪ ಭಿನ್ನತೆ ಇರಬಹುದು, ಆದರೆ ಸವಾಲುಗಳು ಸಾಮಾನ್ಯವಾಗಿ ಒಂದೇ ತೆರನಾದವು. ಬಂಗ್ಲಾದೇಶದ ತಸ್ಲಿಮಾಗೆ ತನ್ನ ಬಂಗಾಳದಲ್ಲಿ ನೆಲೆಯಿಲ್ಲ, ನಮ್ಮ ಪಶ್ಚಿಮ ಬಂಗಾಳದಲ್ಲೂ ಇಲ್ಲ. ಇದು ನಮ್ಮ ಪುರೋಗಾಮಿತನದ ಪ್ರಾಬಲ್ಯದ ಅಭಾವದ ಸೂಚನೆಯಲ್ಲವೆ ? ಸಂಘ ಪರಿವಾರ, ಶಿವಸೇನೆ, ಮುಂತಾದವು ಸುಲಭವಾಗಿ ಫ್ಯಾಸಿಸ್ಟ್ ದೌರ್ಜನ್ಯಗಳಲ್ಲಿ ತೊಡಗಿಬಿಡುತ್ತವೆ. ಜನರ ಮನಸ್ಸುಗಳನ್ನು ಖಾಲಿ ಮಾಡಿ ಭೂ ಬಿಡುವುದು ಅವುಗಳ ಹೀನಪದ್ಧತಿ. ಹೊಡೆಯುವುದು, ಬಡಿಯುವುದು, ಬಣ್ಣ ಬಳಿಯುವುದು, ಬೈಯ್ಯುವುದು ಎಲ್ಲಾ ಅವುಗಳ ಸಹಜಕ್ರಿಯೆ. ಅಂತಹ ದುಷ್ಟಶಕ್ತಿಗಳನ್ನು ಮೆಟ್ಟಿನಿಲ್ಲಲು ನಮ್ಮ ಅಧಿಕಾರಾರೂಢರಿಗೆ ಸಾಧ್ಯವಾಗಿಲ್ಲ. ಅವಕ್ಕೆ ಪ್ರತಿರೋಧ ಒಡ್ಡಬೇಕೆಂಬ ಆಶಯವೂ ಅವರಲ್ಲಿ ಅಷ್ಟಾಗಿ ಕಂಡುಬಂದಿಲ್ಲ. ಸಾಕಷ್ಟು ಹಿಂದಿನ ಒಂದು ಪ್ರಸಂಗವನ್ನು ನೋಡಿ: "ಘಾಶೀರಾಮ್ ಕೊತ್ವಾಲ್" ತಂಡವು ಜರ್ಮನಿಗೆ ಹೋಗುವುದಿತ್ತು, ಆ ಸಂಬಂಧದ ಪ್ರಸ್ತಾವಗಳು ವಿದೇಶಾಂಗ ಸಚಿವರ ಮೇಜಿನವರೆಗೂ ಕುಂಟುತ್ತಾ ಸಾಗಿತ್ತು. ಬಹುಭಾಷಾ ಪಂಡಿತನೆಂದು ಹೆಸರು ಗಳಿಸಿದ್ದ ಪಿ. ವಿ. ನರಸಿಂಹರಾವ್ ಅಂದಿನ ವಿದೇಶಾಂಗ ಸಚಿವ. ಕಲಾಭಿಮಾನಿ ಎಂಬ ಬಿರುದು ಅವರದಾಗಿತ್ತು, ಆದರೆ ಪ್ರಸ್ತಾವಕ್ಕೆ ಅವರು ಮಣೆ ಹಾಕಲಿಲ್ಲ ! ಆಗೇನಾಯಿತು ಗೊತ್ತೆ ? ಪ್ರಧಾನಿ ಶ್ರೀಮತಿ. ಇಂದಿರಾ ಗಾಂಧಿಯವರೊಡನೆ ಶ್ರೀ. ಸತ್ಯಜಿತ್ ರಾಯ್ ವಿಷಯದ ಪ್ರಸ್ತಾಪ ಮಾಡಿದರು. ಆಗ 'ಘಾಶೀರಾಮ್ ಕೊತ್ವಾಲ್' ಬಂಧನದಿಂದ ಬಿಡುಗಡೆ ಹೊಂದಿದ !

ನಮ್ಮ ಇಂದಿನ ಸನ್ನಿವೇಶ ತಿಳಿದೇ ಇದೆ: ಗೆರೆಯ ಈ ಕಡೆಗೆ ಶೇ. ೬೯ರಷ್ಟು ಮಂದಿ ಇದ್ದೇವೆ, ಆ ಕಡೆಗೆ ಮೋದಿಯವರೊಡನೆ ಶೇ.೩೧ ಇದ್ದಾರೆ. ಆದರೆ ಆತ್ಮಾವಲೋಕನ ಮಾಡಿಕೊಂಡರೆ ನಮ್ಮ ಕಣ್ಣೀರಿನ ಕಟ್ಟೆ ಒಡೆಯಬೇಕು ! ಮಾತಿಗೇನೂ ಕೊರತೆಯಿಲ್ಲ, ಆದರೆ ಪುರೋಗಾಮಿ ಚಳುವಳಿಯ ಸ್ಥಿತಿ–ಗತಿಯನ್ನು ತಣ್ಣನೆಯ ಚಾಕುವಿನಿಂದ ಕೊಯ್ದುನೋಡಿದರೆ ನಾವೆಷ್ಟು ಆಳದ ನೀರಿನಲ್ಲಿ ನಿಂತಿದ್ದೇವೆಂಬುದು ತಿಳಿಯುತ್ತದೆ.

ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಮ್ಮ ಪ್ರಮುಖ ಜವಾಬ್ದಾರಿ ಏನಾಗಿತ್ತು ? ಫ್ರಾನ್ಸಿನ ಖ್ಯಾತ ಸಾಹಿತಿ ಮತ್ತು ಸಂಸ್ಕೃತಿ ಚಿಂತಕ ಆಂದ್ರೆ ಮಾಲ್ರೋ ಜೊತೆ ಒಮ್ಮೆ ಮಾತನಾಡುತ್ತಾ ನಮ್ಮ ದೇಶದ ಮೊದಲ ಪ್ರಧಾನಿ ಜವಾಹರಲಾಲ್ ನೆಹರು ಅದಕ್ಕೆ ಉತ್ತರ ಕೊಟ್ಟಿದ್ದರು : "ಜನಮಾನಸದಲ್ಲಿ ಧರ್ಮನಿರಪೇಕ್ಷತೆಯ ಭಾವವನ್ನು ಸ್ಥಿರವಾಗಿ ನೆಲೆಗೊಳಿಸುವುದು." ಈವರೆಗೂ ಈ ಕೆಲಸವನ್ನು ಸಾಧಿಸಲಾಗಿಲ್ಲವೆಂಬುದು ಎದ್ದುಕಾಣುತ್ತದೆ. ಆ ಸೋಲಿಗೆ ಕಾಂಗ್ರೆಸ್ ಪಕ್ಷವೇ ಕಾರಣವೆಂಬ ಸಬೂಬು ಹೇಳಿ ನುಣುಚಿಕೊಳ್ಳಲಾಗದು. ನೆಹರು ಸ್ವತಃ ಯಾವ ಮತಧರ್ಮದ ಪೂಜಾಸ್ಥಾನಗಳಿಗೂ ಪೂಜೆ ಸಲ್ಲಿಸಲು ಹೋಗಿರಲಿಲ್ಲ. ಆಧುನಿಕ ಯುಗದಲ್ಲಿ ನೈಜವಾಗಿ ನಾಸ್ತಿಕರಂತೆ ನಡೆದುಕೊಂಡವರು ನೆಹರು ಮತ್ತು ಸಾವರ್ಕರ್. (ಆದರೆ ಈಗ ಮಹಾರಾಷ್ಟ್ರದ ರತ್ನಾಗಿರಿಯಲ್ಲಿ ಸಾವರ್ಕರ್ ಅವರ ಮನೆಯನ್ನೇ ದೇವಸ್ಥಾನವಾಗಿಸಿಬಿಟ್ಟಿದ್ದಾರೆ ಮತ್ತು ಅಲ್ಲಿಯ ದೇವರು ಸ್ವತಃ ಸಾವರ್ಕರ್ ಅವರೇ). ಶ್ರೀಮತಿ. ಇಂದಿರಾ ಗಾಂಧಿ ದೇವಸ್ಥಾನಗಳಿಗೆ

ಹೋಗುತ್ತಿದ್ದುದುಂಟು. ಅದಕ್ಕೆ ಅವರು ಕೊಡುತ್ತಿದ್ದ ಕಾರಣ, "ಸಹಸ್ರಾರು ಮಂದಿಯ ಭಾವನೆಗಳಿಗೆ ಗೌರವ ತೋರುವುದು ಅಪೇಕ್ಷಣೀಯ, ನಮ್ಮದೇ ಅಭಿಪ್ರಾಯಗಳನ್ನು ಡಂಗೂರ ಹೊಡೆದು ಸಾರುತ್ತಿರುವುದು ಸೂಕ್ತವಲ್ಲ" ಎಂದು. ಶಾ ಬಾನೋ ಪ್ರಕರಣದಲ್ಲಿ ರಾಜೀವ ಗಾಂಧಿ ಎಸಗಿದ ಘೋರ ತಪ್ಪುಗಳು, ಅಯೋಧ್ಯೆಯ ತಥಾಕಥಿತ ರಾಮಜನ್ಮಭೂಮಿಯ ಹೆಸರಿನಲ್ಲಿ ಜರುಗಿದ ಪಾತಕ, ಮುಂತಾದವು ಕಾಂಗ್ರೆಸ್‌ಗೆ ಬಲವಾದ ಪೆಟ್ಟುಗಳನ್ನು ತಿನ್ನಿಸಿದವು. ಹಾಗೆಂದು ಕೆಲವು ರಾಜಕೀಯ ವಿಶ್ಲೇಷಕರು ಮತ್ತು ಕಾಂಗ್ರೆಸ್‌ನ ಸಲಹೆಗಾರರು ಹೇಳುತ್ತಾ ಬಂದಿದ್ದಾರೆ. ಆದರೆ ಕಾಂಗ್ರೆಸ್ ನಾಯಿಯ ಬಾಲ ಪದೇ ಪದೇ ಡೊಂಕಾಗುತ್ತಲೇ ಬಂದಿದೆ. ಎಡಪಕ್ಷಗಳು ತಮ್ಮ ತಪ್ಪುಗಳನ್ನು ಕಾಲದಿಂದ ಕಾಲಕ್ಕೆ ಪಾಪನಿವೇದನೆಯ ರೂಪದಲ್ಲಿ ಹೇಳಿಕೊಳ್ಳುತ್ತಿರುತ್ತವೆ. ಹಾಗೆ ಹೇಳಿಕೊಳ್ಳುವುದು ಸಹ ಒಂದು ಸಂಪ್ರದಾಯವೇ ಇರಬಹುದೇನೊ !

ಸ್ಪಷ್ಟವಾಗಿ ಕೇಳಿಕೊಳ್ಳೋಣ: ಬಲಪಂಥೀಯ ಸಂಘಿಗಳು ಎಂದೂ ತಪ್ಪನ್ನು ಮಾಡಲಿಲ್ಲವೆ ? ಅದಕ್ಕಾಗಿ ಎಂದಾದರೂ ಅವರಿಗೆ ಶಿಕ್ಷೆ ನೀಡಲಾಯಿತೆ? ಈ ಪ್ರಶ್ನೆಯನ್ನು ಅಗ್ಗವಾಗಿ ತಳ್ಳಿಹಾಕಬಾರದು. ತಪ್ಪುಗಳಿಗೆ ಶಿಕ್ಷೆ ದೊರಕಿದ್ದರೆ ಮಾನ್ಯ ಮೋದಿಯವರು ಇಂದು ಪ್ರಧಾನಿಯ ಪಟ್ಟದಲ್ಲಿರಲು ಆಗುತ್ತಿರಲಿಲ್ಲ. ಅವರ ಬಲವರ್ಧನೆ ಸಾಧ್ಯವಾಗಿದ್ದು ಸಂಘಿಗಳಿಗೆ ಎಂದೂ ಕಾನೂನಿನನ್ವಯ ಶಿಕ್ಷೆ ಆಗದಿದ್ದುದರಿಂದ. ಶಿವಸೇನೆಯು ಮಹಾರಾಷ್ಟ್ರದಲ್ಲಿ ಬೆಳೆದದ್ದು ಕಾಂಗ್ರೆಸ್‌ನ ನೆರವಿನಿಂದ ಎಂಬುದನ್ನು ಮರೆಯಲಾದೀತೆ? ೧೯೭೦ರ ದಶಕದಲ್ಲಿ ಮುಂಬೈನ ಪರೇಲ್ ಶಾಸನಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದ ಕಮ್ಯುನಿಸ್ಟ್ ಪಕ್ಷದ ಶಾಸಕನನ್ನು ಕೊಂದು ಮರುಚುನಾವಣೆಯಲ್ಲಿ ಶಿವಸೇನೆ ಆ ಕ್ಷೇತ್ರವನ್ನು ತನ್ನದಾಗಿಸಿಕೊಂಡಿತು. ಶಾಸಕನ ಹಂತಕನನ್ನು ಪತ್ತೆಮಾಡುವ ಗೋಜಿಗೆ ಕಾಂಗ್ರೆಸ್ ಹೋಗಲಿಲ್ಲ. ಅಂದಿನ ಪಾಪಕೂಪದ ಆಳವು ಈಗ ನೂರುಪಟ್ಟು ಹೆಚ್ಚಿದೆ. ರಾಜಕೀಯ ಅಧಿಕಾರದ ಸಮೀಕರಣಗಳು ಒತ್ತಟ್ಟಿಗಿರಲಿ, ಆದರೆ ಸಂಘಪರಿವಾರದ ಘೋಷಿತ ಮತ್ತು ಅಘೋಷಿತ ಕಾರ್ಯಸೂಚಿಯನ್ನು ಹೇಗೆ ಕಾರ್ಯರೂಪಕ್ಕೆ ಇಳಿಸಲಾಗಿದೆ ಎಂಬುದರ ಪರ್ಯಾಲೋಚನೆ ಮಾಡಿ. ಅದರಿಂದ ಎದೆಯು ಧಸಕ್ಕೆನ್ನದಿದ್ದರೆ ನಮ್ಮಲ್ಲಿ ಅಗಾಧ ಲೋಪವಿದೆಯೆಂದರ್ಥ. ಗಾಂಧೀಜಿಯನ್ನು ಕೊಂದದ್ದು ಯಾವ ಶಕ್ತಿ ಮತ್ತು ವ್ಯಕ್ತಿಯೇ ಆಗಿರಲಿ, ಅಂಥವರ ಬಗ್ಗೆ ಜನಕ್ಕೆ ಅಪಾರ ವಿಶ್ವಾಸವಿರಲಿಲ್ಲವೆಂಬುದು ಸತ್ಯವಲ್ಲವೆ ? ಶಾಮಪ್ರಸಾದ ಮುಖರ್ಜಿಯವರ ಭಾರತೀಯ ಜನಸಂಘವು ಎಂದೂ ಅಧಿಕಾರಸ್ಥಾನಕ್ಕೆ ಬರಲಿಲ್ಲ. ಮುಂಬೈನ ಈಶಾನ್ಯ ಕ್ಷೇತ್ರದಿಂದ ಪ್ರೊಫೆಸರ್ ಮುಕುಂದರಾವ್ ಅಗಶೆಯವರು ಆ ಪಕ್ಷದ ಅಭ್ಯರ್ಥಿಯಾಗಿರುತ್ತಿದ್ದರು. ಅವರ ಬಗ್ಗೆ ಒಂದು ತಮಾಷೆಯ ಮಾತು ಪ್ರಚಲಿತವಾಗಿತ್ತು: "ಅಗಶೆಯವರೇ, ಒಂದು... ಎರಡು... ಮೂರು... ಮತ್ತಿನ್ನೆಷ್ಟು ಬಾರಿ, ಹೇ ಮುಕುಂದ?" ಎಂದು. ಅವರು ಎಂಭತ್ತು ಸಾವಿರದಷ್ಟು ಮತಗಳನ್ನು ಪಡೆಯುತ್ತಿದ್ದುದು ನಿಜ. ಅದು ಹೆಚ್ಚಲೂ ಇಲ್ಲ, ಕಡಿಮೆಯಾಗಲೂ ಇಲ್ಲ. ಗಿರ್‌ಗಾಂವ್‌ನಂಥ ಕ್ಷೇತ್ರದಲ್ಲಿ ಸಹ ಕಮ್ಯುನಿಸ್ಟ್ ಅಭ್ಯರ್ಥಿಗಳು ಅಂತಹ ಸಾಧನೆಯನ್ನು ಮಾಡಿ ತೋರಿಸಿದ್ದಿಲ್ಲ. ಅವರಿಗೆಲ್ಲಾ ಮಹತ್ತರ ಗೌರವ ದೊರಕುತ್ತಿತ್ತು, ಸೇವಾ ಧುರೀಣರೆಂಬ ಪದವಿ ನೀಡಲಾಗುತ್ತಿತ್ತು. ಆದರೆ ಮತಗಳ ಗಳಿಕೆಯು ಗಣನೀಯ ಪ್ರಮಾಣದಲ್ಲಿ ಹೆಚ್ಚಲಿಲ್ಲ. ಆಗ್ಗೆ ಸಂಘಿಗಳ ಘೋಷಣೆಗಳು ಹೀಗಿರುತ್ತಿದ್ದವು: "ಅಲ್ಲಿ ನೋಡಿ, ದೀಪಕ್, ಇಲ್ಲಿ ನೋಡಿ, ದೀಪಕ್ ! ಮುಂದಿನ ಬಾರಿ ಅತಲ್ ಬಿಹಾರಿ", ಇತ್ಯಾದಿ. ಘೋಷಣೆಗಳು ಸಂಯುಕ್ತ ವಿಧಾಯಕ ದಳವು ಅಸ್ತಿತ್ವಕ್ಕೆ ಬಂದಾಗಲೂ ಹಾಗೆಯೇ ಉಳಿದಿದ್ದವು. ಆ ದಳಕ್ಕೆ "ಅಪರಿಮಿತವಾದ ಕಾಂಗ್ರೆಸ್ – ವಿರೋಧಿ" ಎಂಬ ಹೆಸರಿತ್ತು. ಆದರೆ ಸಂಘ ಪರಿವಾರವೆಂಬುದು ಅಂಕುರಿಸಿರಲಿಲ್ಲ. ಆಮೇಲೆ ಬಂದಿದ್ದು ತುರ್ತು ಪರಿಸ್ಥಿತಿ. ಸಮಾಜವಾದಿ ಲೋಕನಾಯಕ ಜಯಪ್ರಕಾಶ ನಾರಾಯಣ ಅವರು ಆರೆಸ್ಸೆಸ್‌ಗೆ ಅದ್ಭುತವಾದ ಸರ್ಟಿಫಿಕೇಟ್ ನೀಡಿಬಿಟ್ಟರು. "ಆರೆಸ್ಸೆಸ್ ಫ್ಯಾಸಿಸ್ಟ್ ಆದರೆ ನಾನೂ ಫ್ಯಾಸಿಸ್ಟ್" ಎಂಬ ಅವರ ಮಾತು ಪ್ರಸಿದ್ಧವಾಗಿದೆ. ಎಡಪಕ್ಷಗಳೆಲ್ಲವೂ ವಿವಿಧ ನಿಲುವುಗಳನ್ನು ತಳೆದಿದ್ದವು. ಎಡಪಕ್ಷಗಳು ಎಡದಲ್ಲಿ ಎಡವಿದರೆ ಅದನ್ನು ಅರ್ಥಮಾಡಿಕೊಳ್ಳಬಹುದು, ಆದರೆ ಬಲದಲ್ಲಿ ಎಡವಿದರೆ ಏನು ಹೇಳಲಾದೀತು ! ಈಗಲೂ ಅಷ್ಟೆ, ಶೇ.೯೯ರಷ್ಟು ಮಂದಿ ಗೆರೆಯ ಈ ಬದಿಗಿದ್ದಾರೆಂದು ತೃಪ್ತಿಯಿಂದಿರಲು ಸಾಧ್ಯವಿಲ್ಲ. ೯೯ರಷ್ಟು ನಿಜಕ್ಕೂ ೯೯ರ ಶಕ್ತಿ ಪಡೆಯಬೇಕಾದರೆ ನಾವೆಸಗಬೇಕಾದ ಕೆಲಸಗಳು ಬೆಟ್ಟದಷ್ಟಿವೆ.

ಸ್ವಲ್ಪ ಮುಕ್ತವಾಗಿ ಹೇಳುವುದಾದರೆ, ನಮ್ಮ ದೇಶದಲ್ಲಿ ಎಡಪಕ್ಷಗಳ ಮುಗ್ಗರಿಸುವಿಕೆಯನ್ನು ಸರಿಪಡಿಸುವುದು ಕಷ್ಟ; ಏಕೆಂದರೆ ಮುಗ್ಗರಿಸುವುದು ಅವರ ಸಂಪ್ರದಾಯವಾಗಿ ಬಿಟ್ಟಿದೆ. ಆರೆಸ್ಸೆಸ್ ಬೌದ್ಧಿಕವಾಗಿ ಎದ್ದೇ ಇಲ್ಲ, ಆದ್ದರಿಂದ ಮುಗ್ಗರಿಸುವ ಪ್ರಶ್ನೆ ಇಲ್ಲ; ಆದರೆ ತಪ್ಪುಗಳ ಪಟ್ಟಿ ನೋಡಿದರೆ ಕಡಿಮೆಯೇ. ಉದಾಹರಣೆಗೆ, ಶ್ರಾವಣ– ಭಾದ್ರಪದ, ಆಮೇಲೆ ಮಾರ್ಗಶಿರ. ನಗಾರಿ ಬಾರಿಸುವ ಕಾಲ. ಗಣೇಶ, ನವರಾತ್ರಿ, ಹೀಗೆ ಒಂದಾದನಂತರ ಇನ್ನೊಂದು. ಆರೆಸ್ಸೆಸ್‌ಗೆ ಸುಗ್ಗಿಯ ಕಾಲ. ಫಸಲು ದೊರೆಯಲು ನರಸಿಂಹ ರಾವ್, ರಾಜೀವ್ ಗಾಂಧಿ, ಮುಂತಾದವರು ಸಹಾಯ ಮಾಡಿದ್ದಾರೆ. ಬಾಬ್ರಿ ಮಸೀದಿ ಸಾಲದೆಂಬಂತೆ ರಾಮಾಯಣ – ಮಹಾಭಾರತಗಳು ಟಿ.ವಿ.ಗಳಲ್ಲಿ ಮಸಾಲೆ ತಂದುಕೊಟ್ಟಿವೆ. ಎಷ್ಟೋ ಪಟ್ಟಣಗಳಲ್ಲಿ ರಸ್ತೆಗಳು ಬಿಕೋ ಎನ್ನುತ್ತಿದ್ದುವಂತೆ ಈ 'ಸೀರಿಯಲ್'ಗಳು ಬಂದಾಗ. ಅಲ್ಲಿಯ ಸೀತೆ ಕೇಂದ್ರಸಚಿವೆಯೂ ಆಗಬಹುದು ! ಬಿಹಾರದಲ್ಲಿ ಅಡ್ವಾನಿಯವರ ರಾಮರಥಕ್ಕೆ ಬ್ರೇಕ್ ಹಾಕಿದ್ದುದುಂಟು. ಅದಕ್ಕೆ ಅಂದಿನ ಬಿಹಾರದ ಸರ್ಕಾರವು ಕಾರಣವೇ ಹೊರತು ಎಡಪಕ್ಷಗಳ ಮತ್ತು ಪ್ರಗತಿಪರ ಚಳುವಳಿಯ ಒತ್ತಾಸೆ ಕಾರಣವಾಗಲಿಲ್ಲ.

ಮುಂಬೈ ಮತ್ತು ಅದರ ಆಸುಪಾಸಿನಲ್ಲಿ ಮೂವತ್ತಕ್ಕೂ ಹೆಚ್ಚು ಪುರೋಗಾಮಿ ಸಂಘಟನೆಗಳಿವೆ. ಅವುಗಳ ಕಾರ್ಯಕಾರಿ ಸಮಿತಿಗಳು ಸಹ ದೊಡ್ಡವು. ಆದರೆ ಅವೆಲ್ಲಾ ಶಿವಸೇನೆ ಮತ್ತು ಶರತ್ ರಾವ್‌ಗಳನ್ನು ಹಿಮ್ಮೆಟ್ಟಿಸಲು ಶಕ್ತವಾಗಿಲ್ಲ. ಸಾಹಿತ್ಯಿಕ ವಲಯದಲ್ಲಿ ಅಂತಹ ಶಕ್ತಿಗಳನ್ನು ಎದುರಿಸುವವರು ಎಷ್ಟು ಮಂದಿ? ಪಾಥೆ, ನೇಮಾಡೆ, ಗುರ್ಜರ್, ಧಾಳೆ, ಢಸಾಳ್, ಇವರೆಲ್ಲಾ ಮುಂಬೈನ ಬೇರೆಬೇರೆ ಮುಖಗಳಿಗೆ ಕನ್ನಡಿ ಹಿಡಿದಿದ್ದಾರೆ. ಅದು ಸಾಕಾಗದು, ಪುರೋಗಾಮಿ ಚಳುವಳಿಯು ಅದಷ್ಟರಿಂದ ತೃಪ್ತಿಪಟ್ಟುಕೊಳ್ಳುವಂತಿಲ್ಲ. ಸಾಹಿತಿಗಳು ಮತ್ತು ಕಲಾವಿದರು ಒಂದು ಬೃಹತ್ ಪುರೋಗಾಮಿ ಚಳುವಳಿಗೆ ಪರ್ಯಾಯವಾಗುವುದಿಲ್ಲ, ಅವರು ಚಳುವಳಿಗೆ ಪೂರಕ ಶಕ್ತಿಗಳಾಗಿರುತ್ತಾರೆ, ಅಷ್ಟೆ. ರಾಜಕೀಯ, ಅಭಿವೃದ್ಧಿ ಮೀಮಾಂಸೆ, ಸಾಮಾಜಿಕ ನಡತೆ, ಇವಕ್ಕೆಲ್ಲಾ ಸಾಹಿತಿಗಳು ಪ್ರತ್ಯೇಕವಾಗಿ ದಿಕ್ಕು ತೋರಿಸಲಾಗುವುದಿಲ್ಲ, ಅದನ್ನು ಮಾಡುವ ಚಳುವಳಿಯ ಜೊತೆ ಅವರು ಕೈ ಜೋಡಿಸುತ್ತಾರೆ. ಆದ್ದರಿಂದ ಮೊದಲು ಚಳುವಳಿಯ ವಿಸ್ತರಣೆಯಾಗಬೇಕು. ಧರ್ಮನಿರಪೇಕ್ಷತೆಯ ತಿಳಿವಳಿಕೆಯ ವ್ಯಾಪ್ತಿ ವಿಶಾಲಗೊಳ್ಳಬೇಕು. ಹಿಂದುತ್ವದ ಹೆಸರಿನಲ್ಲಿ ನಮ್ಮ ದೇಶವನ್ನು ಮುತ್ತಿರುವ ಪಿಡುಗನ್ನು ನಿವಾರಿಸಲು ಇದು ಅತ್ಯಗತ್ಯ. ಒಬ್ಬ ಖ್ಯಾತ ವಕ್ತಾರರಿದ್ದಾರೆ. ವೈ. ಡಿ. ಫಡ್ಕೆ ಎಂದು ಅವರ ಹೆಸರು. ಅವರು ಆಗಾಗ್ಗೆ ಹೇಳುತ್ತಿರುತ್ತಾರೆ, "ತಿಳಿವಳಿಕೆಯನ್ನು ನೀಡುವ ಉಪನ್ಯಾಸ ಗಳನ್ನು ಕೇಳಹೋಗುವವರು ತಿಳಿದವರೇ" ಎಂದು. ತಿಳಿಯದವರಿಗೆ ಹೇಗೆ ತಿಳಿವಳಿಕೆ ಮುಟ್ಟಿಸಬೇಕು? ನಾವು ಸೋತಿರುವುದು ಅದರಲ್ಲಿ. ಧರ್ಮನಿರಪೇಕ್ಷತೆ ಮತ್ತು ಪ್ರಜಾಪ್ರಭುತ್ವ, ಇವೆರಡರ ವಿಶಾಲ ತಳಹದಿ ಮತ್ತು ಪರಿಕಲ್ಪನೆಗಳ ಸಾರವನ್ನು ಮೈಗೂಡಿಸಿಕೊಳ್ಳಲು ಹಾಗೂ ಇತರರನ್ನು ಆ ಮಾರ್ಗಕ್ಕೆ ಆಹ್ವಾನಿಸಿ ತರಲು ನಮ್ಮ ಶ್ರಮ ಅಗಾಧವಾಗಿ ಬೆಳೆಯಬೇಕಾಗಿದೆ.

ತುರ್ತು ಪರಿಸ್ಥಿತಿಯ ಸನ್ನಿವೇಶದಲ್ಲಿ ಮಧ್ಯಮ ವರ್ಗದ ಕಾರ್ಮಿಕ ಸಂಘಟನೆಗಳಲ್ಲಿ ಕೆಲವು



ನಡೆದುಕೊಂಡ ರೀತಿಯನ್ನು ಅವಲೋಕಿಸಿ: ಕೆಲವು ತುರ್ತು ಪರಿಸ್ಥಿತಿಯನ್ನು ಬೆಂಬಲಿಸಿದವು, ಇನ್ನು ಕೆಲವು ವಿರೋಧಿಸಿದವು, ಮತ್ತೆ ಕೆಲವು ಸಮರ್ಥಿಸಲೂ ಇಲ್ಲ ವಿರೋಧಿಸಲೂ ಇಲ್ಲ. ತುರ್ತು ಪರಿಸ್ಥಿತಿಯನ್ನು ಬೆಂಬಲಿಸಿದವರು ಸಂಘಟನೆಯಿಂದ ಹೊರನಡೆಯುತ್ತಾರೆಂದು ನಿರೀಕ್ಷಿಸಲಾಗಿತ್ತು. ಪರಿಸ್ಥಿತಿಯು ಬದಲಾದ ನಂತರ ಯಾವುದು ಪ್ರಬಲ ಸಂಘಟನೆಯೋ ಅದಕ್ಕವರು ಸೇರಿಕೊಳ್ಳುತ್ತಾರೆಂದೂ ನಿರೀಕ್ಷಿಸಲಾಗಿತ್ತು. ಆದರೆ ಹಾಗೇನೂ ಆಗಲಿಲ್ಲ. ತಾನು ಪ್ರಬಲವೆಂದು ನಂಬಿಕೊಂಡಿದ್ದ ಸಂಘಟನೆ ಹಠಾತ್ತನೆ ಮುರಿದು ಬೀಳುವಂತಾಯಿತು. ಇದರರ್ಥವೇನು? ನಾಯಕನ ಹುಂಬತನವೋ ಅಥವಾ ಕಾರ್ಮಿಕ ಸಂಘಟನೆಯ ಸದಸ್ಯರ ಅವಕಾಶವಾದಿತನವೋ?

ನಮ್ಮ ಮಧ್ಯಮ ವರ್ಗದ ಮನೆಗಳಲ್ಲಿ ಬಾಗಿಲು ಮುಚ್ಚಿಕೊಂಡು ಗಾಂಧೀಜಿ, ನೆಹರು, ಮುಂತಾದವರ ಹೆಗ್ಗಳಿಕೆಯನ್ನು ಗುಟ್ಟಾಗಿ ತಮ್ಮ ತಮ್ಮಲ್ಲೇ ಅವಹೇಳನ ಮಾಡುವುದುಂಟು. ಸ್ವಲ್ಪಮಟ್ಟಿಗೆ ಈಗ ಅದು ಬೀದಿಗೂ ಬಂದಿದೆ. ಈಗಂತೂ ಟಿ.ವಿ., ಮೊಬೈಲ್, ಆಪ್, ಫೇಸ್‌ಬುಕ್ ಮುಂತಾದವುಗಳ ಮುಖಾಂತರ ಲೇವಡಿಯನ್ನು ಹಂಚಿಕೊಳ್ಳುವ ಪರಿಪಾಠವಿದೆ. ಅಂಬೇಡ್ಕರ್ ಸಹ ಇಂತಹ ಲೇವಡಿಗೆ ಪಾತ್ರರಾಗುತ್ತಿದ್ದಾರೆ. ಗಾಂಧೀಜಿಯ ಅಹಿಂಸೆ, ಉಪವಾಸ, ಸತ್ಯಾಗ್ರಹ ಇತ್ಯಾದಿ ಪರಿಕಲ್ಪನೆಗಳನ್ನು ಗುರಿಯಾಗಿಸಿ ದಂಡಿಸುವುದಂತೂ ವಿಕ್ಷಿಪ್ತ ಮನೋಭಾವದ ಪ್ರತೀಕವಾಗಿದೆ. "ಆ ಮುದುಕ ಪಾಕಿಸ್ತಾನವನ್ನು ತಣಿಸಲು ೫೫ ಕೋಟಿ ರೂಪಾಯಿಗಳನ್ನು ನಮ್ಮ ಖಜಾನೆಯಿಂದ ತೆಗಿಸಿ ದಾನ ಮಾಡಿದ" ಎಂದು ಗಾಂಧೀಜಿಯನ್ನು ಛೇಡಿಸುವುದು ಆಧುನಿಕ ಯುವಕರ ಲಕ್ಷಣವಾಗುತ್ತಿದೆ. ಅವರಿಗೆ ಇತಿಹಾಸದ ಪಾಠಗಳನ್ನೋದಿ ಅಭ್ಯಾಸವಿಲ್ಲ, ಬೇರೆ ಪಠ್ಯಗಳ ಕಡೆ ಲಕ್ಷ್ಯವೂ ಇಲ್ಲ. ಆರೆಸ್ಸೆಸ್ ಸಾಹಿತ್ಯವೇ ಅವರ ಮೊದಲ ಮತ್ತು ಕಡೆಯ ಆಕರ. ಹೇಳಿ ಕೇಳಿ ಆರೆಸ್ಸೆಸ್‌ಗೆ ಬೌದ್ಧಿಕ ಶಿಸ್ತು ಅಂದರೆ ಮುಜುಗರ. ಕಲ್ಪಿತ ಸಾಮಗ್ರಿಯನ್ನು ಅದು ಇತಿಹಾಸವೆಂದು ಪ್ರಚುರಪಡಿಸುತ್ತದೆ. ಯುವ ಮನಸ್ಸುಗಳು ಅಪಕ್ವವಾಗಿದ್ದಾಗ ಅದನ್ನೇ ಅಧಿಕಾರವಾಣಿಯೆಂದು ಸ್ವೀಕರಿಸಿಬಿಡುತ್ತವೆ.



# ಬೋರ್ಡು ಹಾಕಿ ಬಿಡಿ 'ಇಲ್ಲಿ ಹೆಣ್ಣುಮಕ್ಕಳ ದೇಹಗಳು ಅತ್ಯಾಚಾರಕ್ಕಿವೆ...'

ಏನ ಹೇಳಲಿ ತಂಗಿ
ನನ್ನ ಕರುಳು ಕತ್ತರಿಸಿ ಹಾರ ಹಾಕಬೇಕಿದೆ ಭಾರತಾಂಬೆಗೆ
ನಿನ್ನ ಕಾಪಾಡಿಕೊಳ್ಳಲಾಗದ ಕಾರಣ
ದುಃಖ ಒತ್ತರಿಸಿ, ಮನಸ್ಸು ಸುಟ್ಟುಹೋಗಿದೆ

ಇದ್ಯಾವ ದೇಶದಲ್ಲಿದ್ದೇವೆ ತಂಗಿ
ತುಂಡರಿಸುತ್ತಾರೆ, ಕತ್ತರಿಸುತ್ತಾರೆ
ಹೆತ್ತ ಮಕ್ಕಳ ಎದುರು ಅತ್ಯಾಚಾರ ಮಾಡುತ್ತಾರೆ
ಅಕ್ಕ, ತಂಗಿ, ಅವ್ವ ಎಂದರೂ ಹರಿದು ಮುಕ್ಕುತ್ತಾರೆ
ನಾನು ನೀನು ಓದಿದ ರಾಕ್ಷಸರೆಲ್ಲರೂ ಇಲ್ಲೇ ಇದ್ದಾರೆ, ಮನುಷ್ಯ ರೂಪದಲ್ಲಿದ್ದಾರೆ
ದಯವಿಟ್ಟು ಕ್ಷಮಿಸು ತಂಗಿ, ನಾವು ಹುಟ್ಟಿದ ನೆಲ ದೇವರಾಣೆ ನಮ್ಮದಲ್ಲ

ತಂಗಿ
ಅದೆಷ್ಟು ನರಳಿರಬೇಕು ಈ ನೆಲ
ನೇಣು ಹಾಕಿದ ನಿನ್ನ ಪಾದ ಮತ್ತೆ ಭೂಮಿಗೆ ಸೋಕಲು ತಡವಿದಾಗ
ಪಾಪ ಗಾಳಿ, ಬೆಳಕು, ಮರದ ಕೊಂಬೆ, ಹಕ್ಕಿ ಪಕ್ಷಿಗಳು
ಪ್ರಳಯ ಆಗಬಾರದಿತ್ತೇ ಅಂದು ಕಿರುಚಾಡಿದವಂತೆ

ನಿನ್ನ ನೇಣು ಹಾಕಿದ ರೆಂಬೆ ಮೈ ಸುಟ್ಟುಕೊಂಡರೂ ಮುರಿದುಬೀಳದ
ಕಾರಣ ತಾನೇ ಆತ್ಮಹತ್ಯೆ ಮಾಡಿಕೊಂಡಿತಂತೆ

ಸೂರ್ಯ ಕಣ್ಣಿಗೆ ಚೂರಿ ಹಾಕಿಕೊಂಡು ರಕ್ತ ಕಾರಿದನಂತೆ
ಆತನ ಬತ್ತಿಹೋದ ರಕ್ತದ ಬೆಳಕೇ ನಿಮ್ಮ ಮೈ ಮೇಲೆ ಸೋಕಿದ್ದು

ಉಳಿಸಿಬಿಡಿ ಅವರನ್ನು
ಕೀರುತ್ತಲೇ... ಪಕ್ಷಿಗಳು ರೆಕ್ಕೆ ಕತ್ತರಿಸಿಕೊಂಡು
ಯಾವುದೋ ಬಂಡೆಗೆ ಡಿಕ್ಕಿ ಹೊಡೆದು ಸತ್ತುಹೋದವು
ಆದರೂ ನಿಮ್ಮ ಕೂಗು ನಮಗೆ ಕೇಳಿಸಲಿಲ್ಲ
ನಮ್ಮ ಕಿವಿಗೆ ಕಾದ ಕಬ್ಬಿಣದ ಸೀಸವನ್ನು ಹೊಯ್ಯು ದೇವರೇ...

ಆದರೂ ಗಹಗಹಿಸಿ ನಗುತ್ತಿದ್ದಾರೆ, ಕೇಳಲು ನೀವಿಲ್ಲ...
ಹೆಸರಿಗಿದು ಗಾಂಧಿ ಮೆಟ್ಟಿದ ನಾಡು
ಬೋರ್ಡು ಹಾಕಿ ಬಿಡಿ
ಇಲ್ಲಿ ದಲಿತ ಹೆಣ್ಣುಮಕ್ಕಳ ದೇಹಗಳು ಅತ್ಯಾಚಾರಕ್ಕಿವೆ
ನೇಣು ಹಾಕಲು ಜಾತಿಯ ಮರಗಳಿವೆ
ಇಲ್ಲಿ ನೋಡಲು ಕಣ್ಣುಗಳಿಲ್ಲ, ಕೇಳಲು ಬಾಯಿಗಳಿಲ್ಲ
ಆದರೂ ಇಲ್ಲಿ ಬದುಕಿದ್ದೇವೆ
ಜಾತಿಯ ಭೂತಗಳೇ ನಮ್ಮನ್ನೂ ಕೊಂದುಬಿಡಿ
ಭಾರತಾಂಬೆಯೇ...
ನಮ್ಮ ಕಾಲುಗಳು ಸುಡುತ್ತಿವೆ. ಮನಸ್ಸುಗಳು ಬೇಯುತ್ತಿವೆ
ನಿಂತ ನೆಲ ನಮ್ಮದಲ್ಲ... ಕ್ಷಮಿಸು ಭಾರತಾಂಬೆ
ಈ ಜಾತಿಯ ನಾಡಲ್ಲಿ ಹುಟ್ಟಬಾರದಿತ್ತು
ನಮಗೆ ಗೊತ್ತಾಗಿಹೋಗಿದೆ, ಇದು ನಮ್ಮ ನೆಲವಲ್ಲ, ನಮ್ಮವರು ಇಲ್ಲಿಲ್ಲ




**ನಾಗರಾಜ್ ಹೆತ್ತೂರ್**
'ಶ್ರೀ ರಂಗನಾಥ ನಿಲಯ', ೨ನೇ ಮುಖ್ಯರಸ್ತೆ, ಶಾಂತಿನಗರ, ಹಾಸನ

ಖ್ಯಾತ ಮರಾಠಿ ಲೇಖಕ ಪು. ಲ. ದೇಶಪಾಂಡೆಯವರು ಸೃಷ್ಟಿಸಿದ ಒಂದು ಪಾತ್ರ ಲಖು ರಿಸ್ಬುಡ್ ಎಂಬ ಹೆಸರಿನವನು. ತಾನು ಓದದೆ ಬಿಟ್ಟಿರುವುದು ಏನೂ ಇಲ್ಲವೆಂದು ಅವನು ಸದಾ ಒದರುತ್ತಿರುತ್ತಾನೆ. ಹೀಗೆ ಒದರಿ ಒದರಿ ಅದನ್ನು ತಾನೇ ಸಂಪೂರ್ಣವಾಗಿ ನಂಬಿಬಿಡುತ್ತಾನೆ. ಮೊದಲಿಗೆ ತೋರಿಕೆಯಾಗಿದ್ದುದು ಈಗ ಅವನಿಗೆ ವಾಸ್ತವ ಎನಿಸಿಬಿಟ್ಟಿದೆ. ನಮ್ಮ ನಡುವಿನ ಅನೇಕ ಮನಸ್ಸುಗಳು ಅಂಥವು. ಇತಿಹಾಸದ ಪುಟಗಳನ್ನು ತಿರುವಿಹಾಕುವ ಅಭ್ಯಾಸ ಮತ್ತು ವಿವೇಕ ಇಲ್ಲ, ಆದ್ದರಿಂದ ಆರೆಸ್ಸೆಸ್ ಹೇಳಿದ್ದೇ ಅವಕ್ಕೆ ಇತಿಹಾಸ! ಆ ಇತಿಹಾಸವು ಉಪಹಾಸವೆಂಬ ಅರಿವು ಸಹ ಬಾರದಷ್ಟು ಬೌದ್ಧಿಕ ದಾರಿದ್ರ್ಯವನ್ನು ಹರಡಲಾಗುತ್ತಿದೆ. ಗಾಂಧೀಜಿ ನೇತೃತ್ವದಲ್ಲಿ ನಡೆಯುತ್ತಿದ್ದ ವ್ಯಾಪಕ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳದೆ ೧೯೨೪–೨೫ರ ಸಂದರ್ಭದಲ್ಲಿ ಕೆಲವರು ಆರೆಸ್ಸೆಸ್‌ಅನ್ನು ಸ್ಥಾಪಿಸಿಕೊಂಡರು, ತಮ್ಮನ್ನು ತಾವು 'ಹಿಂದು ಪ್ರತಿನಿಧಿಗಳು' ಎಂದು ಬಣ್ಣಿಸಿಕೊಂಡರು. ಅಂದರೆ, ಗಾಂಧೀಜಿಯವರೊಡನೆ ಹೋರಾಟದಲ್ಲಿ ತೊಡಗಿದ್ದವರು ಹಿಂದುಗಳಾಗಿರಲಿಲ್ಲವೆಂದೆ? ಅದೇ ಗಾಂಧಿ ೧೯೪೮ರಲ್ಲಿ ಹತ್ಯೆಗೊಳಗಾದರು. ಹತ್ಯೆಯನ್ನು ಗುಟ್ಟಿನಲ್ಲಿ ಸಮರ್ಥಿಸುತ್ತಿದ್ದವರಿಗೆ ಮೋದಿ ಸರ್ಕಾರವು ಅಸ್ತಿತ್ವಕ್ಕೆ ಬಂದನಂತರ ಬಹಿರಂಗವಾಗಿಯೂ ಸಮರ್ಥಿಸುವ ಎದೆಗಾರಿಕೆ ಬರುತ್ತಿದೆ. ಈಗ ಹೇಳಿ, ಗೆರೆಯ ಈ ಕಡೆ ಶೇ. ೬೯ ಇರುವುದು ಸತ್ಯವಾದರೆ ಗೆರೆಯ ಆ ಕಡೆ ಇರುವವರಿಗೆ ಗಾಂಧಿ ಹತ್ಯೆಯನ್ನು ಸಮರ್ಥಿಸುವ ಎದೆಗಾರಿಕೆ ಹೇಗೆ ಬಂತು? ಅಥವಾ, ಸಂಘ ಪರಿವಾರದ ತೇಜಸ್ಸು ವೃದ್ಧಿಯಾಗದಿದ್ದರೂ ಭುಜಬಲ ಹೆಚ್ಚುತ್ತಿರುವುದು ಹೇಗೆ? "ಅದಕ್ಕೆಲ್ಲಾ ನಮಗೆ ಉತ್ತರ ತಿಳಿದಿದೆ" ಎಂದು ಬೀಗುವವರು ಇನ್ನೊಂದು ಪ್ರಶ್ನೆ ಎದುರಿಸಬೇಕು: "ಎಲ್ಲಾ ತಿಳಿದಿದ್ದರೆ, ಸ್ಪರ್ಧೆಯಲ್ಲಿ ವಿಜಯಿಗಳಾಗಲು ನಿಮ್ಮ ಸಂಘಟನೆಗಳು ಯಾವುವು ಮತ್ತು ಎಲ್ಲಿವೆ? ನಿಮ್ಮ ಸಾಧನಗಳೇನು? ಪುರೋಗಾಮಿ ಚಳುವಳಿಯನ್ನು ಹೇಗೆ ಶಕ್ತಿಯುತವನ್ನಾಗಿಸುತ್ತೀರಿ?" ಅರ್ಜುನನ ಬಿಲ್ಲು – ಬಾಣಗಳು ವಿರಾಟನಗರದಾಚೆಯ ಒಂದು ಶಮೀ ವೃಕ್ಷದ ಮೇಲೆ ಇಡಲ್ಪಟ್ಟಿದ್ದುವಂತೆ. ಪುರೋಗಾಮಿ ಚಳುವಳಿಯ ಆಯುಧಗಳು ಹಾಗೇನಾದರೂ ಶಮೀ ವೃಕ್ಷದ ಮೇಲೆಲ್ಲೋ ಇರಿಸಲಾಗಿವೆಯೆ? ಅಥವಾ ಅತಿ ಜರೂರಾದ ಸಮಯದಲ್ಲಿ ಕರ್ಣನ ಅಸ್ತ್ರಗಳು ನಿಷ್ಫಲವಾದಂತೆ ನಮ್ಮ ಶಸ್ತ್ರಗಳು ಪೇಲವವಾಗಿಹೋಗಿವೆಯೆ? ಪುರೋಗಾಮಿ ಚಳುವಳಿಗಳೆಲ್ಲಾ ಈ ಪ್ರಶ್ನೆಗಳನ್ನು ಗಂಭೀರವಾಗಿ ಉತ್ತರಿಸ ಹೊರಡಬೇಕು. ಧರ್ಮನಿರಪೇಕ್ಷತೆಯ ವಿರುದ್ಧ ಇಂದು ಅಷ್ಟೊಂದು ದುರಹಂಕಾರದ ಮಾತುಗಳು ತೇಲಿ ಬರುತ್ತಿವೆಯಲ್ಲಾ ಏಕೆ? ಆರೆಸ್ಸೆಸ್‌ನವರು ಇತಿಹಾಸವನ್ನು ಆಧಾರರಹಿತವಾಗಿ ಕಟ್ಟಿಕೊಳ್ಳುವುದರಲ್ಲಿ ನಿಪುಣರು, ಹಾಗೆ ಪುರೋಗಾಮಿಗಳು ಸಮಕಾಲೀನ ಇತಿಹಾಸವನ್ನು ಅರ್ಥೈಸ ಹೊರಡುವರೆ? 'ಪಾಂಚಜನ್ಯ'ವು ಹೃಷೀಕೇಶನ ಶಂಖ; ಅದು ಆರೆಸ್ಸೆಸ್‌ನ ಶಂಖವೂ ಹೌದು. ಅದರ ಪ್ರಚಂಡ ವಾಣಿಯನ್ನು ನಂಬುವುದಾದರೆ, ಭಾರತದಲ್ಲೆಲ್ಲೂ ಮುಸಲ್ಮಾನರ ಆಗಮನಕ್ಕೆ ಮುಂಚೆ ಅಸ್ಪೃಶ್ಯತೆ ಇರಲಿಲ್ಲ; ಮನು ಮುಂತಾದ ಧರ್ಮಶಾಸ್ತ್ರ ಕೋವಿದರು ಪಂಚಮರ ಮಾತೇ ಆಡಿರಲಿಲ್ಲ; ಮುಸಲ್ಮಾನರ ಉಪಟಳವನ್ನು ಎದುರಿಸುವ ಬದಲು ಬ್ರಾಹ್ಮಣ ಧೀರರು ಬೆಟ್ಟ–ಗುಡ್ಡಗಳಿಗೆ ಓಡಿಹೋಗಿ ಅವಿತುಕೊಂಡರು; ಅವರೇ ಇಂದಿನ ಗುಡ್ಡಗಾಡು ಜನ. ಸಾಹಿತ್ಯ, ಶಾಸನಗಳು, ಜಾನಪದ ಸಂಕಥನ, ಉತ್ಖನನ ಶಾಸ್ತ್ರ, ಮಾನವಶಾಸ್ತ್ರ, ಹೀಗೆ ಇತಿಹಾಸದ ಎಲ್ಲ ಆಕರಗಳನ್ನೂ ತೃಣಸಮವಾಗಿಸಿ 'ಪಾಂಚಜನ್ಯ'ವು ಹೊಸ ಹುರುಳಿಲ್ಲದ ಇತಿಹಾಸವನ್ನು ಸೃಷ್ಟಿಸುತ್ತದೆ, ಅಕ್ಷರಸ್ಥರು ಅದನ್ನು ಗಂಭೀರವಾಗಿ ಪರಿಗಣಿಸುತ್ತಾರೆ! ಪುರೋಗಾಮಿ ಚಳುವಳಿಯು ಇದನ್ನು ಹೇಗೆ ತಡೆಗಟ್ಟುತ್ತದೆ? 'ಪಾಂಚಜನ್ಯ'ವನ್ನು ಮೀರಿಸುವ ಟಿ.ವಿ. ವಾಹಿನಿಗಳಿವೆ. ಕಳೆದ ಹದಿನೆಂಟು ತಿಂಗಳುಗಳಲ್ಲಿ ಅವು ಗಂಟಲು ಹರಿದುಕೊಂಡು ಅಬದ್ಧವಾದುವನ್ನೆಲ್ಲಾ ಸಬದ್ಧಗೊಳಿಸಲು ಅತೀವ ಶ್ರಮ ವಹಿಸಿವೆ. ದೆಹಲಿಯಲ್ಲಿ ಕೇಜ್ರಿವಾಲ್ ಪಕ್ಷ ಗೆದ್ದಿದೆಯಾದ್ದರಿಂದ ಖೋಟಾ ಇತಿಹಾಸವನ್ನು ನಗಣ್ಯವಾಗಿಸುವ ಸಾಮರ್ಥ್ಯವು ಪುರೋಗಾಮಿ ಚಳುವಳಿಗೆ ದಕ್ಕಿದೆಯೆಂದು ಭ್ರಮಿಸುವುದು ಬೇಡ. ಬಿಹಾರದ ಚುನಾವಣೆಯೂ ಭರವಸೆಯನ್ನು ಪೂರ್ತಿಯಾಗಿ ಮೂಡಿಸುವಂಥದಲ್ಲ. ಇಂದು ನಮ್ಮ ದೇಶದ ರಾಷ್ಟ್ರೀಯತೆಯು ಅಂತರರಾಷ್ಟ್ರೀಯ ವಿದ್ಯಮಾನ ಮತ್ತು ಹಿತಾಸಕ್ತಿಗಳಿಂದಲೂ ನಿರ್ಬಂಧಕ್ಕೆ ಸಿಲುಕಿದೆ. ತಾವು ಕಟ್ಟಾ ರಾಷ್ಟ್ರೀಯವಾದಿಗಳೆನ್ನುವ ಮಾನ್ಯ ಮೋದಿಯವರ ಪಕ್ಷದವರು ಅಂತರರಾಷ್ಟ್ರೀಯ ಬಂಡವಾಳದ ಕಿಂಕರರಾಗಿರಲು ಸರ್ವಥಾ ಸಿದ್ಧರಿದ್ದಾರೆ.

ರಷ್ಯಾದ ೧೯೧೭ರ ಸಮಾಜವಾದಿ ಕ್ರಾಂತಿಯ ತರುವಾಯದಲ್ಲಿ ಹದಿನಾಲ್ಕು ರಾಷ್ಟ್ರಗಳ ಸೈನ್ಯ ರಷ್ಯಾದ ಹೊಸ ವ್ಯವಸ್ಥೆಯನ್ನು ಹೊಸಕಿಹಾಕಲು ಆಕ್ರಮಣ ನಡೆಸಿತ್ತು. "ಈ ಬಾಲ್ಶೆವಿಕ್ ಶಿಶುವಿನ ಕತ್ತನ್ನು ತೊಟ್ಟಿಲಲ್ಲೇ ಹಿಚುಕಿಹಾಕಬೇಕು" ಎಂದು ವಿನ್‌ಸ್ಟನ್ ಚರ್ಚಿಲ್ ತನ್ನ ದೇಶದ ಪಾರ್ಲಿಮೆಂಟಿನಲ್ಲಿ ಅಬ್ಬರಿಸಿದ್ದ. ಆದರೆ ಶಿಶು ಬದುಕಿ ಉಳಿಯಿತು, ಆದರೆ ಅದರ ತಾರುಣ್ಯದಲ್ಲಿ ಅದು ಅಸ್ತಂಗತವಾಯಿತು. ಅಸ್ತಂಗತವಾದ ಸೂರ್ಯ ಮತ್ತೆ ಉದಯಿಸುತ್ತಾನೆ ನಿಜ, ಆದರೆ ಎಷ್ಟು ಕಾಲದ ನಂತರ ಮತ್ತು ಹೇಗೆ? ಪುರೋಗಾಮಿ ಚಳುವಳಿಯ ಮುಂದಿನ ಪ್ರಶ್ನೆ ಅದೇ: ಶೋಷಣೆಯಿಂದ ಮುಕ್ತವಾದ ಸಮಾಜದ ನಿರ್ಮಾಣಕ್ಕೆ ನಮ್ಮ ಕಾರ್ಯಕ್ರಮವೇನು? ಸೋವಿಯೆತ್ ಒಕ್ಕೂಟವು ಕರಗಿಹೋದಾಗ ಸಂತೃಪ್ತಿ ಅನುಭವಿಸಿದ ಜನ ನಮ್ಮ ದೇಶದಲ್ಲೂ ಇದ್ದಾರೆ. ಅವರು ನೆಹರು, ಗಾಂಧಿ, ಕಮ್ಯುನಿಸ್ಟರು, ಸಮಾಜವಾದಿಗಳು, ವಿಚಾರವಾದಿಗಳು, ಹೀಗೆ ಎಲ್ಲರನ್ನೂ ಬಡಿದುಹಾಕಲು ಹಾತೊರೆಯುತ್ತಾರೆ. ನೆಹರು ಯುಗದ ನಂತರ ಧರ್ಮನಿರಪೇಕ್ಷತೆಯು ಉಪೇಕ್ಷೆಗೆ ಗುರಿಯಾಗುತ್ತಾ ಬಂದಿದೆ. ಸೋವಿಯೆತ್ ಒಕ್ಕೂಟವು ಶಿಥಿಲಗೊಂಡಾಗ ಅದಕ್ಕೆ ಪ್ರತಿಯಾಗಿ ಅದನ್ನು ಬಲಪಡಿಸುವವರ ಒಂದು ಜನತಾ ಒಕ್ಕೂಟವು ಕಾರ್ಯಪ್ರವೃತ್ತವಾಗಲಿಲ್ಲ. ಆದರೆ ನಮ್ಮ ದೇಶದಲ್ಲಿ ನೈಜ ರಾಷ್ಟ್ರೀಯತೆ ಮತ್ತು ಧರ್ಮನಿರಪೇಕ್ಷತೆಯ ಸಮರ್ಥನೆಗೆ ಪುರೋಗಾಮಿ ಚಳುವಳಿಯು ಬಲಿಷ್ಠಗೊಂಡು ರಂಗಕ್ಕಿಳಿಯಬೇಕು.

ನೆಹರು ಗತಿಸಿ ಅರ್ಧ ಶತಮಾನ ಕಳೆದುಹೋಗಿದೆ. ಮಹಾರಾಷ್ಟ್ರದ ದುಸ್ಥಿತಿ ಹೇಗಾಗಿದೆಯೆಂದರೆ ಗೋಪಿನಾಥ ಮುಂಡೆ ಗತಿಸಿದಾಗ ಮಾಧ್ಯಮಗಳು ಅದನ್ನು ಬಹುಕಾಲ ಪ್ರಧಾನವಾಗಿ ಚಿತ್ರಿಸಿದವು. ಆದರೆ ನೇರನುಡಿಯ ಖ್ಯಾತ ಪತ್ರಕರ್ತ – ಸಂಪಾದಕ ರಾಂ ಪಟವರ್ಧನ್ ಗತಿಸಿದಾಗ ಅದೊಂದು ಘಟನೆ ಎನಿಸಿಕೊಳ್ಳದೆಹೋಯಿತು. ಅದು ಮಾಧ್ಯಮಗಳ ದುರ್ನೀತಿ ಮತ್ತು ದುರಾಲೋಚನೆಯ ಪರಿಣಾಮ. ಅಂತಹ ವಾತಾವರಣದಲ್ಲಿ ಪುರೋಗಾಮಿ ಚಳುವಳಿಯು ಸಜೀವವಾಗಿ ಉಳಿಯಬೇಕಾಗಿದೆ, ಹೋರಾಡಬೇಕಾಗಿದೆ. ಭಾಲಚಂದ್ರ ನೇಮಾಡೆಯವರ "ಕೋಸಲ" ಎಂಬ ಕೃತಿಯಲ್ಲಿ ಪಾಂಡುರಂಗ ಸಾಂಗ್ವೀಕರ್ ಎಂಬುವ ಪಾತ್ರವೊಂದಿದೆ. ಅವನೊಂದೆಡೆ ಬಿಸುಸುಯ್ಯುತ್ತಾನೆ: "ಹಣವಿಲ್ಲದ ಕಡುಬಡತನದಲ್ಲಿ ಎರಡು ವರ್ಷ ನೀಗಿದ್ದಾಯಿತು. ಈಗ ಈ ಅಗಾಧ ಗುಡ್ಡೆಯಲ್ಲಿ ಭೀಕರ ಭಯದಿಂದ ಇರಬೇಕಾದ ಪರಿಸ್ಥಿತಿಯೂ ಬಂದಿದೆ." ಕೃತಿಯ ಯಾವ ಹಿನ್ನೆಲೆಯಲ್ಲಿ ಈ ಮಾತು ಬಂದಿದೆಯೆಂಬುದನ್ನು ಗಮನಿಸೋಣ ಮತ್ತು ಅದರ ತಾತ್ಪರ್ಯವನ್ನು ಗ್ರಹಿಸೋಣ. ಆಗ ಸರಿದಾರಿ ನಮ್ಮ ಮುಂದೆ ತೆರೆದುಕೊಳ್ಳುತ್ತದೆ, ಗುರಿ ಮುಟ್ಟಲು ಪ್ರೋತ್ಸಾಹಿಸುತ್ತದೆ.

ನಾನೊಬ್ಬ ಯುವಕ. ಕಳೆದ ಚುನಾವಣೆಯಲ್ಲಿ ಮೊದಲ ಬಾರಿಗೆ ಮತ ಹಾಕಿದೆ. ನನ್ನ ಪಕ್ಷದ ಚಿಹ್ನೆಯ ಮೇಲೆ ಮುದ್ರೆ ಒತ್ತಿದಾಗ ನನಗೆ ಹೃದಯ ತುಂಬಿ ಬಂದಿತು. ಆದರೆ, ಅಬ್ಬಾ, ಅದೆಷ್ಟು ಚಿಹ್ನೆಗಳಿವೆ! ಬಲಪಂಥೀಯ ಪಕ್ಷದ್ದು ಒಂದೇ ಚಿಹ್ನೆ, ಆದರೆ ಪುರೋಗಾಮಿ ಪಕ್ಷಗಳ ಚಿಹ್ನೆಗಳು ಹಲವು. ಎಲ್ಲ ಎಡ ಮತ್ತು ಪುರೋಗಾಮಿ ಪಕ್ಷಗಳೂ ಇನ್ನಾದರೂ ಒಂದೇ ಚಿಹ್ನೆಗೆ ಬದ್ಧವಾಗುವುದು ಅತ್ಯವಶ್ಯಕ. ನಾವೆಲ್ಲಾ ಒಂದು ಕುಟುಂಬದವರಾಗಲು ಇನ್ನೂ ಮೀನಾ–ಮೇಷ ಎಣಿಸುತ್ತಿರೋಣವೆ? ಈಚೆಗೆ ಗೋರೈನಲ್ಲಿ ಪುರೋಗಾಮಿ ಕವಿಗಳು, ಲೇಖಕರು, ಪತ್ರಕರ್ತರು, ಕಲಾವಿದರು, ನಾಟಕಕಾರರು, ಎಲ್ಲಾ ಒಟ್ಟಾಗಿ ಸೇರಿ ಅಧಿವೇಶನವನ್ನು ನಡೆಸಿದೆವು. ಮುಂದಿನ ಹಾದಿ ಕಂಡುಕೊಳ್ಳಲು ನಾವು ಏಕೀಭವಿಸಿದೆವು. ಅಲ್ಲಿನ ಮಾತುಗಳನ್ನು ಇಂದು ಕೃತಿಗಿಳಿಸಬೇಕಾಗಿದೆ, ಇಳಿಸುತ್ತೇವೆ.

**ರಾಜನ್ ಬಾವಡೇಕರ್**
ಮುಂಬೈ
(ಈ–ಮೇಲ್: rajan27@rediffmail.com)
ಮೂಲ ಮರಾಠಿಯಿಂದ ಕನ್ನಡಕ್ಕೆ : ಜಿ. ಆರ್.

# ಬೌದ್ಧಿಕ ಆಸ್ತಿ ಸೂಚಿಕೆಗಳಾಗಿ ಭೌಗೋಳಿಕ ಸೂಚಿಗಳು

ಕೆಲವೊಂದು ಸರಕುಗಳು ಅವುಗಳು ಉತ್ಪಾದನೆಯಾಗುವ ಭೌಗೋಳಿಕ ಸ್ಥಳದಿಂದ ಗುರುತಿಸಲ್ಪಡುತ್ತವೆ ಮತ್ತು ಅವುಗಳ ಗುಣಲಕ್ಷಣಗಳು ಆಯಾ ಸ್ಥಳದ ಮೇಲೆ ನಿರ್ಧರಿತವಾಗುತ್ತವೆ. ಒಂದೊಂದು ಊರೂ ಒಂದೊಂದು ರೀತಿಯಲ್ಲಿ ವಿಶೇಷವಾಗಿರುತ್ತದೆ. ಬೆಳೆಯುವ ಹಣ್ಣು, ತಯಾರಿಸುವ ಪದಾರ್ಥ, ಸಿದ್ಧಪಡಿಸುವ ಉತ್ಪನ್ನ ಎಲ್ಲವೂ ಆ ನೆಲದ ಗುಣಕ್ಕೆ ತಕ್ಕಂತೆ ರೂಪ ಪಡೆದಿರುತ್ತವೆ. ಅಂಥವುಗಳನ್ನು ಗುರುತಿಸಿ ಪರಂಪರೆಯನ್ನು ಪೋಷಿಸುವ ಮತ್ತು ಅದರ ಮಾರುಕಟ್ಟೆಯನ್ನು ವಿಸ್ತರಿಸುವ ನಿಟ್ಟಿನಲ್ಲಿ ಭೌಗೋಳಿಕ ಸೂಚಿಯನ್ನು ಸಿದ್ಧಪಡಿಸಲಾಗುತ್ತದೆ. ಈ ರೀತಿಯಾಗಿ ನಿರ್ದಿಷ್ಟ ಸ್ಥಳದಿಂದ ಗುರುತಿಸಲ್ಪಡುವ ವಸ್ತುಗಳು ಭೌಗೋಳಿಕ ಸೂಚಿಕೆಗಳು ಅಥವಾ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಎಂದೇ ಕರೆಯಲ್ಪಡುತ್ತವೆ. ಈ ಹಿನ್ನೆಲೆಯಲ್ಲಿ ಡಾರ್ಜಿಲಿಂಗ್ ಚಾ, ಕಾಂಚೀಪುರ ಸೀರೆ, ಕಾಶ್ಮೀರ್ ಪಶ್ಮಿನ್ ಶಾಲು, ಢಾಕಾ ಮಸ್ಲಿನ್ ಇವು ಕೆಲವು ಉದಾಹರಣೆಗಳು. ಜಾಗತಿಕ ಸ್ತರದಲ್ಲಿ ಶಾಂಪೇನ್ ವೈನ್, ಚೀನಾ ಸಿಲ್ಕ್‌ಗಳು ಉದಾಹರಣೆಗಳಾಗಿವೆ. ವಸ್ತುಗಳು ಮತ್ತು ಅವುಗಳು ಬೆಳೆದು ಬಂದಿರುವ ಸ್ಥಳಗಳ ನಡುವಿನ ಸಂಬಂಧವೇ ಭೌಗೋಳಿಕ ಸೂಚಿಕೆಗಳ ನಿರೂಪಣೆಗೆ ಮೂಲಾಧಾರ. ಭಾರತದಲ್ಲಿ ಇದಕ್ಕಾಗಿ ಪ್ರತ್ಯೇಕ




ಕಾನೂನು ಜಾರಿಯಲ್ಲಿದ್ದು, ಇವುಗಳ ನೋಂದಣಿ ಮತ್ತು ಸಂರಕ್ಷಣೆ ಪೇಟೆಂಟ್ ಡಿಸೈನ್ ಮತ್ತು ಟ್ರೇಡ್ ಮಾರ್ಕ್‌ಗಳ ಮಹಾನಿಯಂತ್ರಕರು ನಿಯುಕ್ತರಾಗುವರು. ಇದೇ ರೀತಿ ವಿಶ್ವ ವ್ಯಾಪಾರ ಸಂಸ್ಥೆ ಕೂಡ ಭೌಗೋಳಿಕ ಸೂಚಿಕೆ ವಸ್ತುಗಳ ಗುಣಮಟ್ಟ ಮತ್ತು ಉಪಯುಕ್ತತೆಗಳನ್ನು ಸುಧಾರಿಸಿ, ತಮ್ಮದೇ ಆದ ಮಾರುಕಟ್ಟೆ ಪಾಲನ್ನು ಪಡೆದು ಹೆಚ್ಚಿಸಿಕೊಳ್ಳಲು ಅನುಕೂಲವಾಗಿದೆ.

ಜಿಯಾಗ್ರಫಿಕಲ್ ಇಂಡಿಕೇಷನ್ ಎಂಬುದು ಒಂದೇ ನಿರ್ದಿಷ್ಟ ಸ್ಥಳದಿಂದ ಉತ್ಪತ್ತಿಯಾಗುವ ಉತ್ಪನ್ನಕ್ಕೆ ಕೇಳಿ ಸಿಗುವ ಹಣೆಪಟ್ಟಿ, ನಿರ್ದಿಷ್ಟ ಪ್ರದೇಶದಿಂದ ಹೊರಬರುವ ಉತ್ಪನ್ನವು ವಿಶಿಷ್ಟವಾದ ಗುಣವನ್ನೇ ಹೊಂದಿದ್ದು ತನ್ನದೇ ಆದ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳುವ ಶಕ್ತಿಯನ್ನು ಹೊಂದಿರುತ್ತದೆ. ಅನೇಕ ಕಡೆಗಳಲ್ಲಿ ಇರಬಹುದಾದ ಇಂಥ ವೈಶಿಷ್ಟ್ಯಗಳನ್ನು ಗುರುತಿಸಿ ಅವುಗಳಿಗೆ ಜಿಯಾಗ್ರಫಿಕಲ್ ಇಂಡಿಕೇಷನ್ ಹಣೆಪಟ್ಟಿಯನ್ನು ಹಚ್ಚುವುದು ಮಾರುಕಟ್ಟೆಯ ದೃಷ್ಟಿಯಿಂದ ಅಗತ್ಯ ಮತ್ತು ಉಪಯುಕ್ತ.

೨೦೦೩ರಲ್ಲಿ ಡಾರ್ಜಿಲಿಂಗ್ ಟೀ, ಜಿ. ಐ. ಟ್ಯಾಗ್‌ಅನ್ನು ಪಡೆದ ಮೊದಲ ಭಾರತೀಯ ಉತ್ಪನ್ನವೆನಿಸಿಕೊಂಡಿತು. ಇದುವರೆಗೂ ೨೩೫ ಉತ್ಪನ್ನಗಳು ಈ ಪಟ್ಟಿಯಲ್ಲಿ ಸೇರ್ಪಡೆಯಾಗಿವೆ.

## ಭೌಗೋಳಿಕ ಸೂಚಿಕೆಗಳೆಂದರೆ

ಭೌಗೋಳಿಕ ಸೂಚಿ ಅಂದರೆ ಉತ್ಪನ್ನವೊಂದು ರಾಷ್ಟ್ರೀಯ ಮಟ್ಟದಲ್ಲಿ ದಾಖಲಾಗುವ ಹೆಸರು, ಯಾವುದೇ ಪ್ರದೇಶದ ವಿಶಿಷ್ಟ ಉತ್ಪನ್ನಕ್ಕೆ ಕೊಡುವ ಹಕ್ಕು. ಅದು ತೋಟಗಾರಿಕೆ ಅಥವಾ ಕೃಷಿ ಆಗಿರಬಹುದು. ಕರಕುಶಲ ಇಲ್ಲವೆ ಉತ್ಪಾದನಾ ಕ್ಷೇತ್ರಗಳಾಗಿದ್ದಾಗಿರಬಹುದು. ಇವುಗಳಿಗೆ ತಮ್ಮದೇ ಆದ ವಿಶೇಷ ಗುಣಗಳು ಇರುತ್ತವೆ. ಉದಾಹರಣೆಗೆ, ಭೌಗೋಳಿಕ ಬೆಳೆಗಳನ್ನು ತೆಗೆದುಕೊಂಡರೆ ಒಂದೊಂದು ಪ್ರದೇಶದ ವಾತಾವರಣ ಹಾಗೂ ಮಣ್ಣಿನ ಗುಣಧರ್ಮಗಳಲ್ಲಿ ಬೆಳೆದ ಬೆಳೆಗಳು ವಿಶಿಷ್ಟವಾಗಿರುತ್ತವೆ. ಅಂಥವುಗಳಿಗೆ ಬೇಡಿಕೆಯೂ ಹೆಚ್ಚು. ಆದರೆ ಇದೇ ಬೆಳೆಯನ್ನು ಬೇರೆ ಭೌಗೋಳಿಕ ವಾತಾವರಣ ಇರುವ ಪ್ರದೇಶದಲ್ಲಿ ಬೆಳೆದರೆ ಮೂಲ ವೈಶಿಷ್ಟ್ಯ ಕಾಣಿಸುವುದಿಲ್ಲ. ಬೇರೆಡೆ ಬೆಳೆದ ಇಂಥ ಬೆಳೆಗಳನ್ನು ಇವುಗಳ ಊರಿನ ಹೆಸರಿನಲ್ಲಿ ಮಾರಾಟ ಮಾಡಿದಲ್ಲಿ ಆ ಬೆಳೆಗೆ ಇರುವ ಮೌಲ್ಯವನ್ನು ಕಡಿಮೆ ಮಾಡಿದಂತಾಗುತ್ತದೆ. ಇದನ್ನು ತಪ್ಪಿಸುವ ಉದ್ದೇಶದಿಂದ ಇವುಗಳ ನೋಂದಣಿ ಮಾಡಿಸುವ ವ್ಯವಸ್ಥೆಯನ್ನು ಮಾಡಲಾಗಿದೆ. ಇಲ್ಲಿನ ಮಾನದಂಡಗಳನ್ನು ಹೊಂದಿದ್ದರೆ ಸಾಕು, ಭೌಗೋಳಿಕ ಹಿನ್ನೆಲೆಯುಳ್ಳ ಬೆಳೆಗಳು (ಜಿ.ಐ. ಕ್ರಾಪ್ – ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಕ್ರಾಪ್) ಎಂಬ ಮುದ್ರೆ ಬೀಳುತ್ತದೆ.

ಯಾವುದೇ ಗುಣಮಟ್ಟದ ವಸ್ತು ಸಾಮಗ್ರಿಗಳ ಮೇಲೆ ಮೂಲ ಘಟಕಗಳ ಪ್ರಮಾಣದೊಂದಿಗೆ ಅವು ಎಲ್ಲಿ ತಯಾರಿಸಲ್ಪಟ್ಟಿವೆ ಎಂಬ ಸ್ಥಳ, ವಿವರಗಳನ್ನು ಕೂಡ ನಮೂದಿಸಲಾಗಿರುತ್ತದೆ. ಇದಕ್ಕೆ ಭೌಗೋಳಿಕ ಸೂಚಿ ಎಂದು ಕರೆಯುತ್ತಾರೆ.

ಭೌಗೋಳಿಕ ಸೂಚಿಕೆಗಳು ತಮ್ಮದೇ ಆದ ವಿಶಿಷ್ಟ ಗುಣಸ್ವಭಾವ, ಲಕ್ಷಣ ಹಾಗೂ ಆಯಾ ಸ್ಥಳದಲ್ಲಿ ಆದ ವಿಶಿಷ್ಟ ಗುಣಗಳನ್ನು ಹೊಂದಿರುತ್ತವೆ. ಉದಾ: ಬಾಸುಮತಿ ಅಕ್ಕಿಯ ವಿಶೇಷ ಪರಿಮಳ, ಪೋಚಂಪಲ್ಲಿ ಸೀರೆಯ ವಿಶಿಷ್ಟ ವರ್ಣವಿನ್ಯಾಸ ಇತ್ಯಾದಿ.

ಜಿ. ಐ. ಹಕ್ಕು ನಿರ್ಲಕ್ಷ್ಯ ಮಾಡಿದರೆ ನಷ್ಟವಾಗುವುದು ಆ ಭೌಗೋಳಿಕ ಪ್ರದೇಶದ ಉತ್ಪನ್ನದ ಮಾಲೀಕರಿಗೇ ವಿನಾ ಬೇರಾರಿಗೂ ಅಲ್ಲ. ಕಾರಣ ಈ ಪ್ರದೇಶಗಳ ಹೆಸರನ್ನು ಹೇಳಿಕೊಂಡು ನಕಲಿ ಮಾರಾಟ ದಂಧೆ ಹೆಚ್ಚುತ್ತಾ ಹೋಗುತ್ತದೆ. ಆಗ ಮೂಲ ಉತ್ಪನ್ನ ಅಥವಾ ಬೆಳೆಯ ಮೌಲ್ಯ ಕುಸಿಯುತ್ತದೆ. ಆದರೆ ಒಮ್ಮೆ ಜಿ.ಐ.ನಲ್ಲಿ ನೋಂದಣಿಯಾದರೆ ಕಾನೂನು ರೀತ್ಯಾ ಇವುಗಳಿಗೆ ರಕ್ಷಣೆ ಸಿಕ್ಕಂತೆ. ಆಗ ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಈ ಹೆಸರಿನಲ್ಲಿ ಅಕ್ರಮವಾಗಿ ಮಾರಾಟ ಮಾಡಿದರೆ ಕಂಬಿ ಎಣಿಸುವಂತೆ ಮಾಡಬಹುದು. ಸೂಕ್ತ ಮೊತ್ತವನ್ನು ದಂಡವಾಗಿ ಪಡೆಯಬಹುದು. ಏಕೆಂದರೆ ಕಾನೂನು ಮಾನ್ಯತೆಯನ್ನು ಈ ಮೂಲಕ ಪಡೆದಿರಲಾಗುತ್ತದೆ. ಜತೆಗೆ, ತಮ್ಮ ಉತ್ಪನ್ನಗಳಿಗೆ ಒಂದು ಬ್ರ್ಯಾಂಡ್ ಸೃಷ್ಟಿಯಾಗುತ್ತದೆ. ಇದು ರಫ್ತು ವಹಿವಾಟಿಗೂ ಅನುಕೂಲ. ಇದು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಆಧಿಪತ್ಯ ಸಾಧಿಸಲು ಸಹಾಯ ಮಾಡುತ್ತದೆ.

ಬೇರೆ ಬೇರೆ ದೇಶಗಳಲ್ಲಿ ಭೌಗೋಳಿಕ ಸೂಚಿಕೆಗಳನ್ನು ರಕ್ಷಿಸುವ ಅವುಗಳದ್ದೇ ಆದ ಪ್ರತ್ಯೇಕ ವ್ಯವಸ್ಥೆಯಿದೆ. ಕೆಲವು ದೇಶಗಳು ತಮ್ಮಲ್ಲಿ ಪ್ರಚಲಿತವಿರುವ ಟ್ರೇಡ್‌ಮಾರ್ಕ್ ಕಾನೂನು ಗ್ರಾಹಕ ರಕ್ಷಣಾ ಕಾಯಿದೆ, ಪೈಪೋಟಿ ಕಾಯಿದೆಗಳ ಮೂಲಕ ರಕ್ಷಣೆ ನೀಡಿದರೆ ಇನ್ನೂ ಕೆಲವು ದೇಶಗಳಲ್ಲಿ ಪ್ರತ್ಯೇಕ ಕಾನೂನು ಇದೆ. ಇನ್ನು ಕೆಲವು ದೇಶಗಳಲ್ಲಿ ಭಾರತದಲ್ಲಿರುವಂತೆ ನೋಂದಣಿ ವ್ಯವಸ್ಥೆಯಿದೆ. ಭಾರತದ ಭೌಗೋಳಿಕ ಸೂಚಿಕೆಯ ನೋಂದಾಯಿತ ಮಾಲೀಕನು ಆಯಾ ದೇಶದಲ್ಲಿ ಪ್ರಚಲಿತವಿರುವ ವ್ಯವಸ್ಥೆಗೆ ಅನುಗುಣವಾಗಿ ರಕ್ಷಣೆಯನ್ನು ಪಡೆಯಬೇಕಾಗಿರುತ್ತದೆ. ವಿಶ್ವ ವ್ಯಾಪಾರ ಸಂಸ್ಥೆಯ ಇನ್ನಿತರ ಸದಸ್ಯ ರಾಷ್ಟ್ರಗಳು ಕೂಡ ಆಯಾ ಭೌಗೋಳಿಕ ಸೂಚಿಕೆಗಳನ್ನು ಉತ್ಪಾದಿಸುವ ದೇಶದಲ್ಲಿ ದೊರೆಯುವ ರೀತಿಯಲ್ಲಿ ರಕ್ಷಣೆ ನೀಡಲು ಬದ್ಧವಾಗಿವೆ.

ಭಾರತ ಸರಕುಗಳ ಭೌಗೋಳಿಕ ಸೂಚಿ (ನೋಂದಣಿ ಮತ್ತು ಸಂರಕ್ಷಣೆ) ಕಾಯ್ದೆ – ೧೯೯೯ಅನ್ನು ರೂಪಿಸಿ ೧೫ ಸೆಪ್ಟೆಂಬರ್, ೨೦೦೩ರಂದು ಜಾರಿಗೊಳಿಸಿದೆ.

**ಮಂಜುನಾಥ ಎನ್. ಜಿ.**
ಕಾನೂನು ಸಂಶೋಧಕರು
ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ಹುಬ್ಬಳ್ಳಿ
ಮತ್ತು ಕಾನೂನು ಸಹಾಯಕ ಪ್ರಾಧ್ಯಾಪಕರು, ವಿದ್ಯೋದಯ ಕಾನೂನು ಕಾಲೇಜು, ತುಮಕೂರು

# ಸಮೂಹ ಮಾಧ್ಯಮ – ಸವಾಲುಗಳು ಮತ್ತು ಸಾಧ್ಯತೆಗಳು

ಇಂದಿರಾ

ಆಧುನಿಕತೆ–ನಾಗರಿಕತೆ–ವೈಜ್ಞಾನಿಕತೆ–ತಾಂತ್ರಿಕತೆ ಬೆಳೆದಂತೆ ವ್ಯಕ್ತಿ–ವ್ಯಕ್ತಿ ಮತ್ತು ವ್ಯಕ್ತಿ–ಸಮಾಜದ ನಡುವಣ ಸಂಪರ್ಕದ ರೀತಿಯೂ ಬದಲಾಗುತ್ತಾ, ಬೆಳೆಯುತ್ತಾ ಸಾಗುತ್ತಿದೆ. ಸನ್ನೆ–ಸಂಕೇತ–ಭಾಷೆ ಹೀಗೆ ಸಾಗಿ ಬಂದ ಸಂಪರ್ಕ ಇಂದು ಮಾಧ್ಯಮವಾಗಿ ರೂಪುಗೊಂಡು ವೈವಿಧ್ಯಮಯವಾಗಿ ಬೆಳೆದು ನಿಂತಿದೆ. ಹತ್ತು ಹಲವು ರೀತಿಯಲ್ಲಿ ಬೆಳೆದು ನಿಂತ ಈ ಎಲ್ಲ ಸಮೂಹ ಮಾಧ್ಯಮಗಳ ಉದ್ದೇಶ ಒಂದೇ ಆದರೂ ಅವುಗಳ ರೀತಿ ಮಾತ್ರ ಬೇರೆ ಬೇರೆ.

ಬಾನುಲಿ ಅಥವಾ ರೇಡಿಯೊ ೨೦ನೇ ಶತಮಾನದ ಒಂದು ಮಹತ್ವದ ಆವಿಷ್ಕಾರ ಮತ್ತು ಸಂವಹನ ಕ್ಷೇತ್ರದಲ್ಲಿ ಘಟಿಸಿದ ಮಹಾನ್ ಕ್ರಾಂತಿ. ಸರ್ವವ್ಯಾಪಿಯಾಗಿರುವ ಈ ಮಾಧ್ಯಮ ಕ್ಷಣಾರ್ಧದಲ್ಲಿ ಅಪಾರ ಜನಸಂಖ್ಯೆಯನ್ನು ತಲುಪಬಲ್ಲ ಸಾಮರ್ಥ್ಯ ಪಡೆದಿದೆ. ಸ್ಥಳೀಯ ಪ್ರಸ್ತುತತೆ, ಕಡಿಮೆ ವೆಚ್ಚ, ಸರಳತೆಯಂತಹ ಈ ವಿಶಿಷ್ಟ ಗುಣಗಳಿಂದಾಗಿ ಇದು ವಿಶೇಷ ಸ್ಥಾನ ಪಡೆದಿದೆ. ಶಿಕ್ಷಣ, ಮಾಹಿತಿ, ಮನೋರಂಜನೆ ಇವನ್ನು ನೀಡುವ ಗುರುತರ ಜವಾಬ್ದಾರಿ ಹೊಂದಿರುವ ರೇಡಿಯೋ ಇಂದಿಗೂ ಸಾರ್ವಜನಿಕ ಪ್ರಸಾರಕ್ಕೆ ಮೀಸಲಾದ ಒಂದು ಪ್ರಮುಖ ಬೃಹತ್ ಜಾಲವಾಗಿದೆ.

ನಮ್ಮ ದೇಶದ ಭೌಗೋಳಿಕ–ಸಾಮಾಜಿಕ–ಆರ್ಥಿಕ–ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬಾನುಲಿ ಜನಸಾಮಾನ್ಯರ ಮಿತ್ರ, ಒಡನಾಡಿ ಮತ್ತು ಹಿತಚಿಂತಕ. ಇಂತಹ ಬಾನುಲಿಯನ್ನು ನಮ್ಮ ಸುಗಮ ಜೀವನ ನಿರ್ವಹಣೆಗೆ, ವ್ಯಕ್ತಿತ್ವ ವಿಕಾಸಕ್ಕೆ, ಜೊತೆಗೆ ರಾಷ್ಟ್ರ ನಿರ್ಮಾಣದಲ್ಲಿ ಸಂಪೂರ್ಣವಾಗಿ ಬಳಸಿಕೊಳ್ಳುವುದು ಅವಶ್ಯಕ ಮಾತ್ರವಲ್ಲ, ಅನಿವಾರ್ಯ ಕೂಡ.

ಹೊಸ ಹೊಸ ಆವಿಷ್ಕಾರಗಳು ಬಂದಾಗ ಹಳೆಯದರ ಹಿನ್ನಡೆ ಸಹಜ. ಆದರೆ ಬಾನುಲಿ ಪತ್ರಿಕೋದ್ಯಮ ಪ್ರಭಾವದಲ್ಲಿ ಉಳಿದಿರುವುದು ಮಾತ್ರವಲ್ಲ, ಹೆಚ್ಚು ಶಕ್ತಿಶಾಲಿಯಾಗಿ, ವೈವಿಧ್ಯಮಯವಾಗಿ ಹೊರಹೊಮ್ಮುತ್ತಿದೆ. ಬರಲಿರುವ ದಿನಗಳಲ್ಲಿ ವಿವಿಧ ಬಗೆಯ ಸ್ಪರ್ಧೆಯನ್ನು ಎದುರಿಸಲು ಸಿದ್ಧವಾಗುತ್ತಿದೆ. ಇಂದಿನ ಮಾಧ್ಯಮ ಸ್ಫೋಟ ವಾಣಿಜ್ಯೀಕರಣದಿಂದ ಸ್ಪರ್ಧೆ ಎಲ್ಲೆ ಮೀರುತ್ತಿದೆ. ಇದರಿಂದ ಉಂಟಾಗುವ ಅನಾಹುತಗಳನ್ನು ನಿಯಂತ್ರಿಸುವ ಶಕ್ತಿ ಬಾನುಲಿಗೆ ಬರಬೇಕು. ಹಣ ಗಳಿಕೆಯೊಂದಿಗೆ ಸಾಮಾಜಿಕ ಜವಾಬ್ದಾರಿಯನ್ನೂ ನಿರ್ವಹಿಸಬೇಕಾದುದು ಈ ಮಾಧ್ಯಮದ ಆದ್ಯ ಕರ್ತವ್ಯ. ಟಿ.ವಿ.ಯಿಂದಾಗಿ ಬಾನುಲಿ ತನ್ನ ಮುಂಚಿನ ಆಕರ್ಷಣೆ ಕಳೆದುಕೊಂಡಿದ್ದರೂ ಅದರ ಪ್ರಸ್ತುತತೆ ಕಡಿಮೆಯಾಗಿಲ್ಲ, ಆಗುವುದೂ ಇಲ್ಲ. ಉದಾಹರಣೆಗೆ, ಎಫ್. ಎಮ್. ರೇಡಿಯೋ ಯುವಜನರಲ್ಲಿ ಹೊಸ ಅಲೆಯನ್ನೇ ಎಬ್ಬಿಸಿದೆ.

ಪತ್ರಿಕೋದ್ಯಮ ಮಾಧ್ಯಮಕ್ಕೆ ೨೦೦ರಿಂದ ಹತ್ತಿರ ಹತ್ತಿರ ೩೦೦ ವರ್ಷದ ಇತಿಹಾಸವಿದೆ. ಪತ್ರಿಕೋದ್ಯಮ ಅತ್ಯಂತ ಪ್ರಮುಖ ಮತ್ತು ವ್ಯವಸ್ಥಿತವಾಗಿ ಪ್ರಬುದ್ಧವಾಗಿ ಬೆಳೆಯುತ್ತಿರುವ ಒಂದು ಪ್ರಮುಖ ಮಾಧ್ಯಮವೂ ಆಗಿದೆ.

ಪತ್ರಿಕೋದ್ಯಮ ವಿಸ್ತರಿಸುತ್ತಿರುವ ಹಿನ್ನೆಲೆಯಲ್ಲಿ ಈ ಮಾಧ್ಯಮದ ಆರೋಗ್ಯಕರ ಬೆಳವಣಿಗೆಯ ಬಗ್ಗೆಯೂ ನಾವು ಹೆಚ್ಚಿನ ಕಾಳಜಿ ವಹಿಸಬೇಕಾಗಿದೆ. ಮುದ್ರಣ ಮಾಧ್ಯಮ ತೀವ್ರ ಪೈಪೋಟಿ ಎದುರಿಸುತ್ತಿದ್ದು, ಇದರ ನಡುವೆ ಹೊಸ ಅಸ್ತಿತ್ವವನ್ನು ಕಂಡುಕೊಂಡು ನಿರ್ದಿಷ್ಟ ಗುರಿಯತ್ತ ಸಾಗುವ ಅಗತ್ಯವಿದೆ. ಒಂದು ಮಾಧ್ಯಮದ ಅವಕೃಪೆ ಅಥವಾ ಅಪ್ರಬುದ್ಧತೆ ಇನ್ನೊಂದು ಮಾಧ್ಯಮದ ಮೇಲೆ ಪರಿಣಾಮ ಬೀರುವುದು ಅನಿವಾರ್ಯವಾಗಿದೆ. ಕಳೆದ ಎರಡು ದಶಕಗಳಲ್ಲಿ ಮಾಹಿತಿ ತಂತ್ರಜ್ಞಾನದಲ್ಲಾದ ಅದ್ಭುತ ಪ್ರಗತಿಯಿಂದಾಗಿ ಮಾಧ್ಯಮ ಕ್ಷೇತ್ರದಲ್ಲಿ ಮಿಂಚಿನಂತಹ ಬದಲಾವಣೆಗಳಾಗಿವೆ. ಜಾಗತಿಕ ಮಟ್ಟದಲ್ಲಿ ಕ್ಷಿಪ್ರ ಸಂವಹನ ಸಾಧ್ಯವಾಗಿರುವ ಕಾರಣ ಸಮೂಹ ಮಾಧ್ಯಮಗಳು ರಾಷ್ಟ್ರ–ಭಾಷೆಗಳನ್ನು ಮೀರಿ ಜನರ ಮೇಲೆ ಗಾಢವಾದ ಪರಿಣಾಮವನ್ನು ಬೀರುತ್ತಿವೆ. ಇದರಿಂದ ಸಾರ್ವಜನಿಕ ನೀತಿ, ಖಾಸಗಿ ಧೋರಣೆಗಳು ಜನರ ನಡವಳಿಕೆ ಎಲ್ಲದರಲ್ಲೂ ಮಹತ್ತರ ಬದಲಾವಣೆ ಕಂಡುಬರುತ್ತಿದೆ.

ಇಂದು ತಂತ್ರಜ್ಞಾನ ಕೂಡ ನಾಗಾಲೋಟದಲ್ಲಿ ಮುನ್ನುಗ್ಗುತ್ತಿರುವುದರಿಂದ ಸಂವಹನ ತಂತ್ರಗಳೇ ಆಮೂಲಾಗ್ರವಾಗಿ ಬದಲಾಗುತ್ತಿವೆ. ಆದ್ದರಿಂದ ಇದರ ಬಗ್ಗೆ ನಾವು ಕೂಡಲೇ ಗಮನ ಹರಿಸಬೇಕು. ಏಕೆಂದರೆ ನಮ್ಮ ಮಾಧ್ಯಮಗಳು ಪ್ರಭಾವಶಾಲಿಯಾಲಿಯಾಗಿ, ಸತ್ವಶಾಲಿಯಾಗಿ ಇದ್ದರೆ ಮಾತ್ರ ತಮ್ಮತನವನ್ನು

ಉಳಿಸಿಕೊಂಡು ಬೇರೆಯದನ್ನು ವಿಮರ್ಶಕ, ಚಿಕಿತ್ಸಕ ದೃಷ್ಟಿಯಿಂದ ನೋಡುವುದು, ಸ್ವೀಕರಿಸುವುದು ಮತ್ತು ಅಂತರ್ಗತಗೊಳಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಇಲ್ಲವಾದರೆ ಮಾಧ್ಯಮವೇ ನಮ್ಮನ್ನು ಎಳೆದುಕೊಂಡು ಹೋಗುವ ಶಕ್ತಿಯಾಗಿ ಪರಿಣಮಿಸಿ ಹುಲಿಯನ್ನೇರಿದ ಸ್ಥಿತಿ ಉಂಟಾಗುತ್ತದೆ.

ಇಂದಿನ ದಿನಗಳಲ್ಲಿ ಪತ್ರಿಕೋದ್ಯಮಕ್ಕೆ ಎದುರಾಗಿರುವ ಮುಖ್ಯ ಸವಾಲೆಂದರೆ ವಿಜ್ಞಾನದ ಬರವಣಿಗೆ ಅಥವಾ ವಿಜ್ಞಾನ ಕುರಿತ ಲೇಖನಗಳ ಬಗೆಗೆ. ಇತ್ತೀಚಿನ ದಶಕಗಳಲ್ಲಿ ವಿಜ್ಞಾನ ಅದೆಷ್ಟು ಸಂಕೀರ್ಣವಾಗಿದೆ ಎಂದರೆ ಅದು ಹತ್ತಾರು ಶಾಖೆ–ಉಪಶಾಖೆಗಳಾಗಿ ಬೆಳೆದು ಒಂದು ಶಾಖೆಯ ಸಂಗತಿಗಳು ಇನ್ನೊಂದು ಶಾಖೆಯವರಿಗೆ ತಿಳಿಯುವುದೇ ಇಲ್ಲ. ವಿಜ್ಞಾನದ ಶಾಖೋಪಶಾಖೆಗಳು ಎಲ್ಲರ ಕೈಮೀರಿ ಬೆಳೆಯುತ್ತಿವೆ. ಅದು ಬೆಳೆದಷ್ಟೂ ತನ್ನದೇ ಆದ ತಾಂತ್ರಿಕ ಭಾಷೆಯನ್ನು ರೂಪಿಸಿಕೊಳ್ಳುತ್ತಾ ಬೆಳೆಯುತ್ತಿದೆ. ಹೀಗಾಗಿ ಜನಸಾಮಾನ್ಯರಿಗೆ ಅದು ಅರ್ಥವಾಗುವುದಿಲ್ಲ. ಈ ಸಂದಿಗ್ಧದಲ್ಲಿ ಜನಸಾಮಾನ್ಯರಿಗೆ ವಿಜ್ಞಾನ ಸಂಬಂಧಿ ಮಾಹಿತಿ ನೀಡುವುದು ಒಂದು ಸವಾಲಿನ ಕೆಲಸ.

ವಿಜ್ಞಾನ ಜಗತ್ತಿನಲ್ಲಿ ಏನೇನು ನಡೆಯುತ್ತಿದೆ ಎನ್ನುವುದನ್ನು ಗಮನಿಸುವುದೇ ಒಂದು ದೊಡ್ಡ ಸಾಹಸದ ಕೆಲಸ. ಪರಿಣಾಮವಾಗಿ, ಕೆಲವೊಮ್ಮೆ ಮಹತ್ವದ ವಿಜ್ಞಾನ ಸುದ್ದಿಗಳು ಕೈತಪ್ಪಿ ಹೋಗುತ್ತಿವೆ. ಇದರ ಇನ್ನೊಂದು ಮುಖ್ಯವಾದ ಸಮಸ್ಯೆ ಎಂದರೆ ವಿಜ್ಞಾನ ಎನ್ನುವುದೇ ಕಬ್ಬಿಣದ ಕಡಲೆಯಂತೆ. ಇದನ್ನು ಸರಳಗೊಳಿಸಬಲ್ಲ ನಿಘಂಟುಗಳು, ಆಕರಗ್ರಂಥಗಳು ಇಂದಿಗೂ ಲಭ್ಯವಿಲ್ಲ. ಇದೇ ಇಂದಿನ ಸವಾಲಾಗಿದೆ.

ಮೂರನೆಯ ಸವಾಲು, ಪಾಶ್ಚಾತ್ಯ ವಿಜ್ಞಾನಿಗಳ ಸಾಧನೆಗಳು ಸುದ್ದಿಯಾದ ಹಾಗೆ ದೇಸೀ ವಿಜ್ಞಾನಿಗಳ ಸಾಧನೆಗಳು ಬೆಳಕು ಕಾಣುವ ಸಂಭವ ತುಂಬ ಕಡಿಮೆ. ವಿದೇಶದವರಂತೆ ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದಲ್ಲಿ ನಾವು ಸಾಕಷ್ಟು ಮುಂದುವರಿದಿಲ್ಲ. ಇದರಿಂದ ಭಾರತೀಯ ವಿಜ್ಞಾನ ವಾರ್ತೆಗಳು ಬರುವುದೇ ಅಪರೂಪ. ಇಲ್ಲಿಯ ವರದಿಗಾರರು ತಾವಾಗಿ ವಿಜ್ಞಾನ ರಂಗದ ಪ್ರಮುಖ ವಿದ್ಯಮಾನಗಳನ್ನು ಅರಸುತ್ತಾ ಹೋಗುವ ಸಂಸ್ಕೃತಿ ನಮ್ಮ ಮಾಧ್ಯಮಗಳಲ್ಲಿ ಬೆಳೆದಿಲ್ಲ. 'ವಿಜ್ಞಾನ ವರದಿಗಾರ' ಎಂದು ಯಾವ ಪತ್ರಿಕೆಯಲ್ಲೂ ಇರುವುದಿಲ್ಲ. ಒಬ್ಬ ಪತ್ರಕರ್ತನೇ ವಿಜ್ಞಾನ ವಿಷಯಗಳನ್ನು ಅಧಿಕೃತವಾಗಿ ಬರೆಯುವ ಅಥವಾ ವರದಿ ಮಾಡುವ ಸಂದರ್ಭ ಉಂಟಾಗಬೇಕು.

ಸಾಮಾನ್ಯ ಓದುಗರಿಗೆ ತುಸುವಾದರೂ ವಿಜ್ಞಾನ ವಾರ್ತೆಯನ್ನು ತಪ್ಪದಂತೆ, ತಪ್ಪಿಲ್ಲದಂತೆ ಕೊಡಬೇಕು. ವಿಜ್ಞಾನ ರಂಗದ ಪ್ರಮುಖ ಘಟನೆಗಳು ಕಣ್ತಪ್ಪಿಯೂ ಬಿಟ್ಟುಹೋಗಬಾರದು. ಇದು ಸಾಧ್ಯವಾಗಬೇಕಾದರೆ ಪ್ರತಿ ಮಾಧ್ಯಮ ಕಛೇರಿಯಲ್ಲಿ ಒಬ್ಬನಾದರೂ ವಿಜ್ಞಾನ ಪದವೀಧರ ಪತ್ರಕರ್ತ ಇರಬೇಕು.

ವಿದ್ಯುನ್ಮಾನದ ಬೆಳವಣಿಗೆಯ ಭರಾಟೆಯಲ್ಲಿ ಅದನ್ನು ಮೀರಿಸುವಂತೆ ಲೇಖನವೋ, ವರದಿಯೋ ಇದ್ದರೆ ಅದು ಓದುಗರಿಗೆ ಹಿಡಿಸುತ್ತದೆ. ವಿದ್ಯುನ್ಮಾನ ಮಾಧ್ಯಮ ಎಷ್ಟೇ ಸುಂದರವಾಗಿ ದೃಶ್ಯಗಳ ಸಹಿತ ಮಾಹಿತಿ ನೀಡಿದರೂ ಅದು ಕ್ಷಣಕಾಲ ಮಾತ್ರ ಮಿಂಚಿ ಮರೆಯಾಗುತ್ತದೆ. ಆದರೆ ಪತ್ರಿಕೆಗಳಾದರೆ ಅವನ್ನು ಎಲ್ಲೆಂದರಲ್ಲಿಗೆ ಒಯ್ಯಬಹುದು. ಏಕಾಂತದಲ್ಲಿ ಓದುವ ಸುಖದ ಅಪರೂಪದ ಅನುಭವ ಈ ಮಾಧ್ಯಮದಿಂದ ಮಾತ್ರ ದೊರೆಯುವಂತಹುದು. ಇದನ್ನೇ ಅಸ್ತ್ರವಾಗಿಸಿಕೊಂಡು ಪತ್ರಿಕೋದ್ಯಮವನ್ನು ಇನ್ನಷ್ಟು ಪರಿಣಾಮಕಾರಿಯಾಗಿ ನಿರ್ವಹಿಸಿದರೆ ಎಂತಹ ಸವಾಲುಗಳನ್ನಾದರೂ ಸಮರ್ಥವಾಗಿ ನಿಭಾಯಿಸಬಹುದು.

ವಿದ್ಯುನ್ಮಾನ ಮಾಧ್ಯಮ ನಮ್ಮ ದೇಶಕ್ಕೆ ಕಾಲಿಟ್ಟಿರುವುದು ಇತ್ತೀಚಿನ ದಶಕಗಳಿಂದ. ಅಂದಿನಿಂದ ಇಂದಿನವರೆಗೆ ಟಿ.ವಿ. ವಾಹಿನಿಗಳ ಸಂಖ್ಯೆ ನಿರಂತರವಾಗಿ ಬೆಳೆಯುತ್ತಲೇ ಇದೆ. ವೀಕ್ಷಕರಿಗೆ ಅಜೀರ್ಣವಾಗುವಷ್ಟು ವಾಹಿನಿಗಳು ಬೆರಳಂಚಿನಲ್ಲಿಯೇ ನಲಿದಾಡುತ್ತಿವೆ. ಆದರೆ ಮುದ್ರಣ ಮಾಧ್ಯಮದ ಮೇಲೆ ಹಿಡಿತ ಸಾಧಿಸಿದಂತೆ ವಿದ್ಯುನ್ಮಾನ ಮಾಧ್ಯಮದ ಮೇಲೆ ಇದುವರೆಗೆ ಹಿಡಿತ ಸಾಧಿಸಲು ಸಾಧ್ಯವಾಗಿಲ್ಲ. ಕ್ಯಾಮೆರಾ ಸಂಸ್ಕೃತಿ ಇಂದಿಗೂ ಹೊಸದಾಗಿಯೇ ಉಳಿದಿದ್ದು, ಆ ಸಂಸ್ಕೃತಿ ನಮಗಿನ್ನೂ ಕರಗತವಾಗಿಲ್ಲ. ಕ್ಯಾಮೆರಾ ಕಣ್ಣಿಗೂ, ಬರಿಕಣ್ಣಿಗೂ ಇರುವ ವ್ಯತ್ಯಾಸವನ್ನು ನಾವು ಅರಿಯಬೇಕಾಗಿದೆ. ಈ ಮಾಧ್ಯಮಕ್ಕೆ ತನ್ನದೇ ಆದ ಒಂದು ನಿಯಮವಿದೆ. ಇದನ್ನು ನಾವು ಅರಿಯದಿದ್ದರೆ ಕ್ಯಾಮೆರಾ ಪರಿಣಾಮಕಾರಿಯಾಗಿ ಮಾತನಾಡಲಾಗುವುದಿಲ್ಲ. ಪ್ರತಿಬಾರಿ ಕ್ಯಾಮೆರಾ ಕಣ್ಣು ನಮ್ಮ ಮೇಲೆ ಬಿದ್ದಾಗ ನಮಗೊಂದು ಹೊಸ ಅನುಭವ ಮತ್ತು ವಿಚಿತ್ರ ಅನುಭವವಾಗುತ್ತದೆ. ಆಗ ನಾವು ಸಹಜವಾಗಿ ಪ್ರತಿಕ್ರಿಯಿಸಲು ಸಾಧ್ಯವಾಗುವುದಿಲ್ಲ.

ಪತ್ರಿಕೋದ್ಯಮದಲ್ಲಿ ಸ್ಥಳಕ್ಕೆ ಮಹತ್ವವಿರುವಂತೆ ವಿದ್ಯುನ್ಮಾನ ಮಾಧ್ಯಮದಲ್ಲಿ ಸಮಯಕ್ಕೆ ಬಹಳ ಮಹತ್ವವಿದೆ. ಟಿ.ವಿ. ಸಮಯದ ಮಹತ್ವವನ್ನು ನಾವು ಎಲ್ಲಿಯವರೆಗೆ ಅರ್ಥಮಾಡಿಕೊಳ್ಳುವುದಿಲ್ಲವೊ ಅಲ್ಲಿಯವರೆಗೆ ವಿದ್ಯುನ್ಮಾನ ಮಾಧ್ಯಮ ಪ್ರವರ್ಧಮಾನಕ್ಕೆ ಬರುವುದಿಲ್ಲ.

ಇಂದು ಟಿ.ವಿ. ವಾಹಿನಿಗಳ ಸಂಖ್ಯೆ ಹೆಚ್ಚಾಗುತ್ತಿದೆ, ಆದರೆ ಅದಕ್ಕೆ ತಕ್ಕಂತೆ ಪ್ರಬುದ್ಧ ಕಾರ್ಯಕ್ರಮಗಳು ಬರುತ್ತಿಲ್ಲ. ಬಾಲಿಶ ಎನಿಸುವ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ಮೊದಲು ಕೇವಲ ರಾಷ್ಟ್ರೀಯ ವಾಹಿನಿ ಮಾತ್ರ ಇದ್ದಾಗ ಎಲ್ಲರೂ ನೋಡುವಂತಹ ಕಾರ್ಯಕ್ರಮಗಳು ಬರುತ್ತಿದ್ದವು. ಆದರೆ ಇಂದು ಒಳ್ಳೆಯ ಕಾರ್ಯಕ್ರಮಗಳು ಕಡಿಮೆಯಾಗುತ್ತಿವೆ. ಇದರೊಂದಿಗೆ ಕಾರ್ಯಕ್ರಮ ನಿರ್ವಾಹಕರೂ ಯಾವುದೇ ರೀತಿಯ ಪರಿಪೂರ್ಣತೆ ಪಡೆಯದೆ ಅಪ್ರಬುದ್ಧರಂತೆ, ನಿರ್ಮಾಪಕರ ಇಚ್ಛೆಯಂತೆ, ಕಾರ್ಯಕ್ರಮಗಳನ್ನು ನಿರೂಪಿಸುತ್ತಾರೆ. ವರದಿಗಾರರು ಬಳಸುವ ಭಾಷೆಯೂ ವಿಚಿತ್ರವಾಗಿರುತ್ತವೆ. ಏಕೆಂದರೆ ವರದಿಗಾರರ ಭಾಷೆ ಸುಲಲಿತವಾಗಿ ಹೊರಹೊಮ್ಮುವುದೇ ಇಲ್ಲ. ಮಾತಿಗಾಗಿ ತಡಕಾಡುತ್ತಿರುತ್ತಾರೆ. ಅವರ ಮಾತಿನ ಅಸ್ಪಷ್ಟತೆಗೆ ತಲೆ ತಗ್ಗಿಸಬೇಕಾಗುತ್ತದೆ. ಸುದ್ದಿ ನಿರ್ವಹಣೆಯ ಸಂದರ್ಭದಲ್ಲಿ ಮಾತುಗಳು ಅರಳು ಹುರಿದಂತೆ ಸ್ಫುಟವಾಗಿ ಬರಬೇಕು. ಸಂದರ್ಶನ ಕಾರ್ಯಕ್ರಮಗಳಲ್ಲಂತೂ ಅತಿಥಿಗಿಂತ ಸಂದರ್ಶಕರ ಹಾವಭಾವ, ಮಾತು ಜ್ಞಾನ ವೀಕ್ಷಕರ ಸಹನೆಯನ್ನು ಪರೀಕ್ಷಿಸುವಂತಿರುತ್ತವೆ. ಟಿ.ವಿ.ಯಲ್ಲಿ ಬರುವ ಹಿಂಸೆಯ ದೃಶ್ಯಗಳಂತೂ ಎಲ್ಲಾ ನೀತಿ ಸಂಹಿತೆಗಳನ್ನು ಗಾಳಿಗೆ ತೂರಿವೆ. ಪದೇ ಪದೇ ಹಿಂಸೆಯ ದೃಶ್ಯಗಳನ್ನು ತೋರಿಸಿ ಹಿಂಸಾಚಾರಕ್ಕೆ ಪ್ರಚೋದನೆ ನೀಡುವಂತಿರುತ್ತವೆ.

ಇವೆಲ್ಲಕ್ಕಿಂತ ಹೆಚ್ಚಾಗಿ ಟಿ.ವಿ. ಮಾಧ್ಯಮ ಗಂಭೀರ ಚಿಂತನೆಗೆ ಬಹಳ ದೊಡ್ಡ ಕೊಡಲಿ ಪೆಟ್ಟನ್ನೇ ಹಾಕುತ್ತಿದೆ. ಅದು ಧಾರಾವಾಹಿಗಳ ಮೂಲಕವೇ ಇರಬಹುದು, ಸುದ್ದಿ ಪ್ರಸಾರದಲ್ಲೇ ಇರಬಹುದು. ನಿಮಿಷ ನಿಮಿಷಕ್ಕೂ ಬದಲಾವಣೆ ಆಗುವ ಸನ್ನಿವೇಶಗಳು ಯಾವುದೇ ಗಂಭೀರವಾದ ಚಿಂತನೆಗೆ ಅವಕಾಶ ಮಾಡಿಕೊಡುವುದಿಲ್ಲ.

ಈ ಎಲ್ಲ ಕಾರಣಗಳಿಂದ ಎರಡು ದಶಕಗಳಿಂದ ಈ ಮಾಧ್ಯಮ ಅಸ್ತಿತ್ವದಲ್ಲಿದ್ದರೂ ಬೆಳವಣಿಗೆಯ ದೃಷ್ಟಿಯಿಂದ ಸಾಧಿಸಬೇಕಾದದ್ದು ಬೇಕಾದಷ್ಟಿದೆ. ಈ ದಿಸೆಯಲ್ಲಿ ಎಲ್ಲ ಮಾಧ್ಯಮ ತಜ್ಞರೂ ಇದಕ್ಕೆ ನಿರ್ದಿಷ್ಟ ರೂಪುರೇಷೆಗಳನ್ನು ಹಾಕಿಕೊಡಬೇಕಾದ ಅಗತ್ಯ ಇಂದು ಕಾಣುತ್ತಿದೆ. ಅಕ್ಷರಕ್ಕಿಂತ ದೃಶ್ಯಗಳೇ ಜೀವಾಳವಾಗಿರುವ ಈ ಮಾಧ್ಯಮ ಪರಿಪೂರ್ಣ ವೃತ್ತಿ ನೈಪುಣ್ಯತೆ ಪಡೆದುಕೊಳ್ಳಬೇಕು.

ಪತ್ರಿಕೋದ್ಯಮದಲ್ಲಿ ಶಿಕ್ಷಣ ದೊರೆತಂತೆ ವಿದ್ಯುನ್ಮಾನ ಮಾಧ್ಯಮದಲ್ಲಿ ಶಿಕ್ಷಣ ಆರಂಭಿಸಬೇಕು. ಟಿ.ವಿ ವಾಹಿನಿಗಳಲ್ಲಿರುವ ವೃತ್ತಿನಿರತ ವರದಿಗಾರರಿಗೆ ಯಾವುದೇ ಶಿಕ್ಷಣ ಇದುವರೆಗೆ ಲಭ್ಯವಾಗಿಲ್ಲ. ಆಯಾ ವಾಹಿನಿಗಳು ತಮಗೆ ತಿಳಿದಿರುವ ರೀತಿಯಲ್ಲಿ ತಮ್ಮ ತಮ್ಮ ಉದ್ಯೋಗಿಗಳಿಗೆ ತರಬೇತಿ ನೀಡುತ್ತಿವೆ. ಆದರೆ ಈ ತರಬೇತಿಗಳು ಹೆಚ್ಚಾಗಿ ತಾಂತ್ರಿಕ ಮಟ್ಟಕ್ಕೆ ಸೀಮಿತಗೊಂಡಿವೆ. ಸೈದ್ಧಾಂತಿಕ ಮತ್ತು ಬೌದ್ಧಿಕ ಮಟ್ಟದಲ್ಲಿ ತರಬೇತಿ ಇಲ್ಲ. ಬರುವ ದಿನಗಳಲ್ಲಿ ಮುದ್ರಣ ಮಾಧ್ಯಮ ಕ್ಷೇತ್ರದಂತೆ ವೃತ್ತಿಪರತೆಯನ್ನು ಬೆಳೆಸಲು ವಿದ್ಯುನ್ಮಾನ ಮಾಧ್ಯಮಕ್ಕೆ ಸೇರಬಯಸುವ ಉದ್ಯೋಗಿಗಳಿಗೆ ಶಿಕ್ಷಣವನ್ನು ನೀಡಲೇಬೇಕಾದ ಅನಿವಾರ್ಯತೆ ಈಗ ತಲೆದೋರಿದೆ.

ಒಟ್ಟಾರೆ, ಸಮೂಹ ಮಾಧ್ಯಮಗಳು ಮಾಡುವ ವರದಿಗಳಿಗೆ ಆಧಾರವಾಗಿರುವ ಮೌಲ್ಯಗಳ ವಿಷಯದ ಜಟಿಲತೆಯ ಮೇಲೆ ನಿಯಂತ್ರಣ ಸಾಧಿಸುವ ಸಾಮರ್ಥ್ಯ ಹೊಂದಬೇಕು. ಸತ್ಯವನ್ನು ಧೈರ್ಯವಾಗಿ, ಪ್ರಾಮಾಣಿಕವಾಗಿ ವರದಿ ಮಾಡುವಾಗ ಎದುರಾಗುವ ಆಸೆ ಆಮಿಷಗಳನ್ನು ತಿರಸ್ಕರಿಸುವ ವೃತ್ತಿನಿಷ್ಠೆ ತೋರುವುದಾದರೆ ನಮ್ಮ ಸಮೂಹ ಮಾಧ್ಯಮಗಳು ಸಾರ್ಥಕತೆ ಪಡೆಯುತ್ತವೆ.



ಇಂದಿರಾ
'ಸಿರಿ', ಬಂಜಾರ ಬಡಾವಣೆಯ ಒಳಗೆ, ಓಂ ಶಕ್ತಿ ದೇವಾಲಯದ ಹಿಂಭಾಗ, ಹೊರಮಾವು ಅಂಚೆ ಬೆಂಗಳೂರು – ೫೬೦ ೦೪೩

# ಜಾಗತೀಕರಣದಲ್ಲಿ ಜಗಮಗಿಸುವ ಜಾತ್ರೆಗಳು...!

ಜಾಗತೀಕರಣದ ಪ್ರಭಾವದಿಂದಾಗಿ ಅತ್ಯಾಧುನಿಕ ಆಕರ್ಷಣೀಯ ವಿದ್ಯುತ್ ಚಕ್ರಗಳು, ಮನೆ ಬಳಕೆಯ ವಸ್ತುಗಳು, ಅಲಂಕಾರದ ವಸ್ತುಗಳು, ತಿಂಡಿ-ತಿನಿಸುಗಳು, ಕೋಕೋ ಕೋಲಾ, ಪೆಪ್ಸಿ , ಸರ್ಕಸ್, ತೂಗು ತೊಟ್ಟಿಲುಗಳು ಇಂದಿನ ಜನರನ್ನು ಮೋಡಿ ಮಾಡುತ್ತಿವೆ. ಇದರಿಂದಾಗಿ ಇವುಗಳೊಂದಿಗೆ ಸ್ಪರ್ಧೆ ಮಾಡಲು ಸಾಧ್ಯವಾಗದ ದೇಶೀಯ ವಸ್ತುಗಳು ನಮ್ಮ ಜನರಿಂದ ಕಣ್ಮರೆಯಾಗುತ್ತಿವೆ. ಪ್ಲಾಸ್ಟಿಕ್‌ನಿಂದ ತಯಾರಿಸಿದ ವಸ್ತುಗಳಿಗೆ ನಮ್ಮ ಜನರು ಮಾರುಹೋಗಿರುವದರಿಂದ ನಮ್ಮ ಗುಡಿಕೈಗಾರಿಕೆ, ಕೈ ಕುಸುರಿಗಳಿಂದ ತಯಾರಿಸಿದ ವಸ್ತುಗಳ ವ್ಯಾಪಾರ ಜಾತ್ರೆಗಳಲ್ಲಿ ಕಾಣದಾಗಿದೆ.

ಡಾ॥ ನಿಂಗಣ್ಣ



ಜಾಗತೀಕರಣವು ಪ್ರಪಂಚದ ಎಲ್ಲ ಕ್ಷೇತ್ರಗಳಲ್ಲಿಯೂ ತನ್ನ ವಿಸ್ತಾರತೆಯನ್ನು, ಹೆಜ್ಜೆ ಗುರುತನ್ನು ಗಟ್ಟಿಯಾಗಿ ಮೂಡಿಸಿದೆ. ಜನಪದರ ಪ್ರಮುಖ ಸಂಸ್ಥೆಯಾದ, ಸಡಗರದ ಆಚರಣೆಯಾದ 'ಜಾತ್ರೆಯ' ಮೇಲೂ ಜಾಗತೀಕರಣ ತನ್ನ ಪ್ರಭಾವ ಬೀರಿರುವದನ್ನು ಕಾಣುತ್ತೇವೆ. ಜನಪದರು ಮುಗ್ಧರು ಮತ್ತು ಅಸಹಾಯಕರು ಎಂಬುದರಲ್ಲಿ ಎರಡು ಮಾತಿಲ್ಲ. ಹೀಗಾಗಿ ಜಾಗತೀಕರಣದ ತೆಕ್ಕೆಗೆ ಸಿಲುಕಿದ ಮಾನವ ಸಂಕುಲ ಉಸಿರುಕಟ್ಟಿ ನಲುಗಿಹೋಗುತ್ತಿದೆ. ಮಾನವ ಕೃಷಿಯನ್ನು ಪ್ರಾರಂಭಿಸಿ ನಾಗರಿಕತೆಯನ್ನು ಹೊಂದಿದವನು. ಕುಟುಂಬ, ಸಮೂಹ, ಸಮಾಜದ ಕಲ್ಪನೆ ಮಾಡಿಕೊಂಡು ಒಂದೆಡೆ ನೆಲೆನಿಂತು ಬದುಕುತ್ತಾ, ಕೊಡುಕೊಳ್ಳುವಿಕೆಯ ನಡುವೆಯೇ ಮುಗ್ಧ ಧಾರ್ಮಿಕ ಭಕ್ತಿಯನ್ನು ಬೆಳೆಸಿಕೊಂಡವನು. ಕಲ್ಲುದೇವರು, ಮೂರ್ತಿದೇವರು, ಕಾಡುದೇವರು, ನಾಡದೇವರು, ಗ್ರಾಮದೇವರು ಮತ್ತು ಧರ್ಮದೇವರುಗಳನ್ನು ಸ್ವಂತ ಕುಲದೇವರುಗಳೆಂದು ಕಲ್ಪಿಸಿಕೊಂಡು ದೇವರ ಆರಾಧನೆ ಪ್ರಾರಂಭಿಸಿ ಕುಣಿತ, ಬಲಿ, ಪೂಜೆ ವಿಧಿವಿಧಾನಗಳನ್ನು ಪ್ರಾರಂಭಿಸಿದನು. ಇಲ್ಲಿ 'ಜನಪದ' ಎಂದರೆ ಇಡೀ ಜನಸಮುದಾಯ ಎಂದರ್ಥ. ಮನುಷ್ಯನ ನಾಗರಿಕತೆ ಬೆಳವಣಿಗೆಯ ದಿನದಿಂದಲೇ ಜನಪದ ಸಂಸ್ಕೃತಿ ಬೆಳವಣಿಗೆಯ ಬೆಳಕು ಕಾಣುತ್ತಿದೆ. ಹಾಗೆಯೇ 'ಸಂಸ್ಕೃತಿ' ಎಂದಾಗ ಎಲ್ಲಾ ಗುಣಗಳು ಅದರಲ್ಲಿ ಸೇರ್ಪಡೆಗೊಳ್ಳುತ್ತವೆ. ಸಂಸ್ಕೃತಿಯಲ್ಲಿ 'ಜಾತ್ರೆಗಳು' ಪ್ರಮುಖ ಭಾಗವಾಗಿ ಸೇರಿಕೊಂಡಿವೆ. ಜನಪದರ ಅಂಗಳದಲ್ಲಿ ಜರುಗುವ ಜಾತ್ರೆಗಳು ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿವೆ. ಜಾತ್ರೆಗಳು ಮೊದಲು ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ನಡೆದು ನಂತರ ಜನಸಮ್ಮುಖವನ್ನು ಪಡೆದುಕೊಂಡವು. ಜನಪದ ಜಾತ್ರೆಗಳು ಭಯ, ಭಕ್ತಿ ಸಡಗರ, ಸಂಭ್ರಮಗಳ ಸಂಕೇತವಾಗಿ ಹುಟ್ಟಿಕೊಂಡು ಧಾರ್ಮಿಕ ಸಂಪ್ರದಾಯ ಆಚರಣೆಯ ಪರಂಪರೆಯಾಗಿ ಬೆಳೆದು ತಮ್ಮ ವಿಶಿಷ್ಟತೆಯನ್ನು, ಅನನ್ಯ ಸಂಸ್ಕೃತಿಯನ್ನು ಬಿಚ್ಚಿಡುವ ಕೇಂದ್ರಗಳಾದವು. ಇವತ್ತು ಕೂಡ ನಾಡು, ದೇಶದ ತುಂಬ ಹಾಲಿನ ಓಕಳಿ, ತೇರು ಎಳೆಯುವಿಕೆ, ನೀರಿನ ಓಕಳಿ, ಪಲ್ಲಕ್ಕಿ ಉತ್ಸವ, ಮೂರ್ತಿ ಮೆರವಣಿಗೆ ಹೀಗೆ ವಿಭಿನ್ನ ರೀತಿಯಲ್ಲಿ ಈ ಜಾತ್ರೆಗಳು ಜರುಗುತ್ತಲಿರುವದು ಕಂಡುಬರುತ್ತಿದೆ. ಅಂದು ಗ್ರಾಮದ ಮುಖಂಡನ ನೇತೃತ್ವದಲ್ಲಿ ಈ ಜಾತ್ರೆಗಳು ಜರುಗಲು ಪ್ರಾರಂಭವಾದವು. ಆದರೆ, ಇಂದು ಜಾತ್ರೆಗಳನ್ನು ವ್ಯವಸ್ಥೆಗೊಳಿಸುವ, ಆಯೋಜಿಸುವ ಹಾಗೂ ಆಚರಿಸುವ ವಿಧಾನಗಳು ಭಿನ್ನವಾಗ ತೊಡಗಿವೆ. ಕೆಲವೊಂದು ಜಾತ್ರೆಗಳನ್ನು ಸರಕಾರವೇ ಖುದ್ದಾಗಿ ವ್ಯವಸ್ಥೆಗೊಳಿಸುತ್ತಿದೆ. ಧಾರ್ಮಿಕ ಮುಖ್ಯಸ್ಥರ ಸಲಹೆ, ಮಾರ್ಗದರ್ಶನದ ಅನುಸಾರವಾಗಿ ಅವು ರೂಪಿತಗೊಳ್ಳುತ್ತಿವೆ. ಹಲವು ಕಡೆ ಮುಜರಾಯಿ ದೇವಾಲಯಗಳಲ್ಲಿ ಜರುಗುವ ಜಾತ್ರೆಗಳ ಉಸ್ತುವಾರಿಯನ್ನು ಸರ್ಕಾರಿ ಮೇಲಧಿಕಾರಿಗಳ ನೇತೃತ್ವದಲ್ಲಿ ನೇಮಿಸಲ್ಪಟ್ಟ ಸಮಿತಿಗಳು ನಡೆಸಿಕೊಂಡು ಬರುತ್ತಿವೆ. ಕೆಲವು ಕಡೆ ರಾಜಕೀಯ ಮುಖಂಡರು, ಮಂತ್ರಿಗಳು ಈ ಜಾತ್ರೆಗಳ ನೇತೃತ್ವ ವಹಿಸಿಕೊಳ್ಳುತ್ತಿದ್ದಾರೆ. ಸಾಮಾನ್ಯವಾಗಿ ಗ್ರಾಮದ ಮುಖಂಡನ ಮಾರ್ಗದರ್ಶನದಂತೆ ನಡೆಯುತ್ತ ಬಂದಿರುವ ಜನಪದರ ಜಾತ್ರೆಗಳು, ಜಾಗತೀಕರಣದ ಸಂದರ್ಭದಲ್ಲಿ

















ಊಹಿಸಲಾಗದಷ್ಟು ಬದಲಾವಣೆ ಕಂಡಿರುವುದು ಕಟುಸತ್ಯ!

'ಜಾತ್ರೆ'ಯು ವಿಶಾಲವಾದ ಆವರಣದಲ್ಲಿ ಜರುಗುವದು. ಇಲ್ಲಿ ಅಂಗಡಿ, ಮುಂಗಟ್ಟುಗಳನ್ನು ವ್ಯವಸ್ಥೆಗೊಳಿಸಲಾಗುತ್ತದೆ. ಮಕ್ಕಳಿಗಾಗಿ ಮನರಂಜನೆಯ ಕಾರ್ಯಕ್ರಮಗಳು ಜರುಗುವ ವ್ಯವಸ್ಥೆ ಮಾಡಲಾಗಿರುತ್ತದೆ. ಜಾತ್ರೆ ಜರುಗುವ ಸ್ಥಳಕ್ಕೆ ಜನರು ತಮ್ಮ ತಮ್ಮ ಎತ್ತಿನ ಬಂಡಿ, ಕಾಲ್ನಡಿಗೆ ಇಲ್ಲವೆ ಕುದುರೆ ಸವಾರಿಯನ್ನು ಸಾರಿಗೆ ಸೌಲಭ್ಯವನ್ನಾಗಿ ಮಾಡಿಕೊಂಡು ಜಾತ್ರೆಗೆ ಬರುತ್ತಿದ್ದರು. ಆದರೆ, ಇಂದು ಜಾಗತೀಕರಣದ ಸಂದರ್ಭದಲ್ಲಿ ಜನರಿಗೆ ಸಂಚಾರ, ಸಂಪರ್ಕ ಸೌಲಭ್ಯವನ್ನು ಕಲ್ಪಿಸಿಕೊಡಲಾಗುತ್ತಿದೆ. ರೈಲು, ಬಸ್ಸು, ಖಾಸಗಿ ವಾಹನಗಳ ಅದ್ದೂರಿ ಭರಾಟೆಯಲ್ಲಿ ಜಾತ್ರೆಗಳನ್ನು ಆಚರಿಸುವ ವಿಧಾನ ಬದಲಾಗಿದೆ. ಅಂದು ಜಾತ್ರೆಗೆ ಕುಟುಂಬ ಸಮೇತ ಬಂದು ತಮ್ಮ ಭಕ್ತಿ, ಹರಕೆ ಮುಟ್ಟಿಸಲು ಜನಪದರು ಶ್ರದ್ಧೆಯಿಂದ-ಭಕ್ತಿಯಿಂದ ತಪ್ಪದೆ ದೇವರ ಆರಾಧನೆಯಲ್ಲಿ ಭಾಗಿಯಾಗುವದಕ್ಕೆ ಮನಃಪೂರ್ವಕವಾಗಿ ಬಂದು ನಿಷ್ಠೆಯಿಂದ ಹರಕೆ, ಕಾಣಿಕೆ ಸಲ್ಲಿಸುತ್ತಿದ್ದರು. ಆದರೆ, ಜಾಗತೀಕರಣದ ಛಾಯೆ ಜಾತ್ರೆಗಳ ಮೇಲೆ ಗಾಢವಾಗಿ ಬೀರಿರುವುದರಿಂದ ಜಾತ್ರೆಯು ಇಂದು ತನ್ನ ಅನುಕೂಲಕ್ಕೆ ತಕ್ಕಂತೆ ವ್ಯವಸ್ಥೆ ಮಾಡಿಕೊಳ್ಳುತ್ತ ಹಿಂದೆ ಇದ್ದ ವಿಧಿವಿಧಾನಗಳಲ್ಲಿ ಸಡಿಲತೆ ಮಾಡಿಕೊಂಡಿರುವದು ಎದ್ದುಕಾಣುತ್ತದೆ.

ಜಾತ್ರೆಯ ಹಿನ್ನೆಲೆಯಾಗಿ ರೊಟ್ಟಿ, ಹೋಳಿಗೆ, ಹುಳಿಬಾನ, ಶೇಂಗಾಹಿಂಡಿ ಕಾರ್‍ಯಾಳ ಹಿಂಡಿ, ಅಗಸಿಹಿಂಡಿ, ಹಪ್ಪಳ, ಶೆಂಡಿಗೆ ಇತ್ಯಾದಿ ಥರಥರದ ತಿಂಡಿತಿನಿಸುಗಳನ್ನು ತಯಾರಿಸಿಕೊಂಡು ಕುಟುಂಬದ ಸರ್ವಸದಸ್ಯರು, ಬರುವ ಭಕ್ತಾದಿಗಳು ಇಂದು ಇಲ್ಲ. ವ್ಯಕ್ತಿಗತವಾಗಿ ಅನಿವಾರ್ಯವೆಂಬಂತೆ ಒಬ್ಬರೆ ಬಂದು ತೆಂಗಿನಕಾಯಿ ಒಡೆದುಕೊಂಡು ಮರಳುವ ಸಂಪ್ರದಾಯ ಮತ್ತು ಜಾತ್ರೆ ಮುಗಿದ ಮೇಲೆ ದೇವರಿಗೆ ಹೋಗಿ ದರುಶನ ಮಾಡಿಬರುವ ಹೈಟೆಕ್ ಭಕ್ತರ ಬಳಗವೇ ಹೆಚ್ಚಾಗುತ್ತಿರುವುದನ್ನು ಕಾಣಬಹುದಾಗಿದೆ.

ಜಾತ್ರೆಗಳಲ್ಲಿ ಸಿಗುವ ಮನರಂಜನೆಗಳಾದ ಕುಣಿತ, ಕಲಾಮೇಳ, ನಾಟಕ, ಭಜನೆ, ಗೀಗೀಪದಗಳು, ಕರಡಿಕುಣಿತ, ಡೊಳ್ಳುಕುಣಿತ, ಸಂಗೀತ, ಕೋಲಾಟ ಇವೆಲ್ಲವೂ ಜಾಗತೀಕರಣದ ಪ್ರಭಾವದಿಂದ ಹೊಸ ರೂಪ ಪಡೆಯುತ್ತ ಬದಲಾವಣೆಯಾಗಿವೆ. ಜನಪದರ ಮೂಲಕಲೆಗಳಾದ ಕುಣಿತ, ಸಂಗೀತ, ಜನಪದ ಹಾಡುಗಳು ಅದಲುಬದಲಾಗಿ ಆಧುನಿಕತೆಯ ಅಬ್ಬರದ ಸಂಗೀತದೊಳಗೆ ಮಣ್ಣು ಮುಕ್ಕುತ್ತಿವೆ. ಆದರೆ, ದೇಶೀಯ ಮನಸ್ಸುಗಳು ಡೊಳ್ಳಿನ ಕುಣಿತ, ಗೀಗೀಪದ, ಭಜನೆಗಳನ್ನು ಅಲ್ಲಲ್ಲಿ ಉಳಿಸಿಕೊಂಡು ಬರುವಲ್ಲಿ ಸೆಣಸಾಡುತ್ತಿವೆ. ಜಾಗತೀಕರಣದ ಪ್ರಭಾವದಿಂದಾಗಿ ಅತ್ಯಾಧುನಿಕ ಆಕರ್ಷಣೀಯ ವಿದ್ಯುತ್ ಚಕ್ರಗಳು, ಮನೆ ಬಳಕೆಯ ವಸ್ತುಗಳು, ಅಲಂಕಾರದ ವಸ್ತುಗಳು, ತಿಂಡಿ-ತಿನಿಸುಗಳು, ಕೋಕೋ ಕೋಲಾ, ಪೆಪ್ಸಿ, ಸರ್ಕಸ್, ತೂಗು ತೊಟ್ಟಿಲುಗಳು ಜನರನ್ನು ಮೋಡಿ ಮಾಡುತ್ತಿವೆ. ಇದರಿಂದಾಗಿ ಇವುಗಳೊಂದಿಗೆ ಸ್ಪರ್ಧೆ ಮಾಡಲು ಸಾಧ್ಯವಾಗದ ದೇಶೀಯ ವಸ್ತುಗಳು ನಮ್ಮ ಜನರಿಂದ ಕಣ್ಮರೆ ಯಾಗುತ್ತಿವೆ. ಪ್ಲಾಸ್ಟಿಕ್‌ನಿಂದ ತಯಾರಿಸಿದ ವಸ್ತುಗಳಿಗೆ ಜನರು ಮಾರುಹೋಗಿರು ವದರಿಂದ ನಮ್ಮ ಗುಡಿಕೈಗಾರಿಕೆ, ಕೈ ಕುಸುರಿಗಳಿಂದ ತಯಾರಿಸಿದ ವಸ್ತುಗಳ ವ್ಯಾಪಾರ ಜಾತ್ರೆಗಳಲ್ಲಿ ಕಾಣದಾಗಿದೆ. ಹೀಗಾಗಿ ದೇಶೀ ವಸ್ತುಗಳಿಗೆ ಭಯಾನಕ ಪೆಟ್ಟು ಬಿದ್ದಿದೆ.



**ನಮನ......**

ಹಿರಿಯ ಲೇಖಕಿ ಎಚ್. ಎಸ್. ಪಾರ್ವತಿ ಅವರು ದಿ. ೯.೧೧.೨೦೧೫ರಂದು ನಿಧನ ರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಅವರಿಗೆ ೮೧ ವರ್ಷ ವಯಸ್ಸಾಗಿತ್ತು. ಇವರು ಬೆಂಗಳೂರು ಆಕಾಶವಾಣಿಯಲ್ಲಿ ಕಾರ್ಯನಿರ್ವಾಹಕಿಯಾಗಿ ಸೇವೆ ಸಲ್ಲಿಸಿದ್ದರು. ಪಾರ್ವತಿಯವರು ಕರ್ನಾಟಕ ಲೇಖಕಿಯರ ಸಂಘದ ಸಂಸ್ಥಾಪಕರಲ್ಲಿ ಕೂಡ ಒಬ್ಬರು. ಇವರು ಹಲವಾರು ಕಾದಂಬರಿಗಳನ್ನು ಬರೆದು ಪ್ರಕಟಿಸಿದ್ದರು. ಇತರ ಹಲವು ಪ್ರಕಾರಗಳಲ್ಲಿಯೂ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ, ಹತ್ತಾರು ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದಿದ್ದರು. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದ ಗೌರವಪೂರ್ವಕ ನಮನಗಳು.

ಜಗತ್ತನ್ನೆ ಅಂಗೈಯಲ್ಲಿ ಚುಳುಕಾಗಿಸುವ ವಿಜ್ಞಾನ, ತಂತ್ರಜ್ಞಾನದ ಬೆಳವಣಿಗೆಯಿಂದ ಜನಪದರ ಬಳಿ ಮೊಬೈಲ್, ಇಂಟರ್‌ನೆಟ್, ಇ-ಮೇಲ್, ಫೇಸ್‌ಬುಕ್, ಸಿನಿಮಾ ಮೀಡಿಯಾ, ವೃತ್ತಪತ್ರಿಕೆಗಳು, ಪ್ಯಾಕೆಟ್ ಹಾಲು, ಕೋಕೋ ಕೋಲಾ, ಪೆಪ್ಸಿ, ಇನ್ನೂ ಅನೇಕ ಜೀವದಾಯಿ ಪಾನೀಯಗಳು ಜನಪದರಿಗೆ ಯಾವಾಗ ದೊರೆಯಲು ಸಾಧ್ಯವಾಯಿತೋ ಅವತ್ತಿನಿಂದಲೇ ಅವರ ಜೀವನಶೈಲಿ, ಅವರ ಮನೋಭಾವನೆಗಳು ಬದಲಾಗಲು ಪ್ರಾರಂಭಿಸಿದವು.

ಜನಪದರಿಗೆ ಜಾತ್ರೆ ಬಹೂಪಯೋಗಿ ಸಂಸ್ಥೆಯಾಗಿದ್ದು, ಅದನ್ನು ನಾವು ಅಂದಿನಿಂದ ಇಂದಿನವರೆಗೆ ಹತ್ತು ಹಲವು ವಿಧದಲ್ಲಿ ದುಡಿಸಿಕೊಂಡಿದ್ದೇವೆ. ಈ ಸಂಸ್ಥೆ ಆಕಸ್ಮಿಕವಾಗಿ ಹುಟ್ಟಲಿಲ್ಲ; ನಿಷ್ಪ್ರಯೋಜಕವಾಗಿ ಬೆಳೆಯಲಿಲ್ಲ...! ಉಳಿಯಲಿಲ್ಲ...! ಆಕಸ್ಮಿಕವಾಗಿ ಕಣ್ಮರೆಯಾಗುವುದಿಲ್ಲ...! ಕಣ್ಮರೆಯಾಗಲು ಬಿಡುವುದೂ ಇಲ್ಲ...! ಮುಖ್ಯವಾಗಿ ಜನಪದರಿಗೆ ಅದು ಕೊಟ್ಟಿರುವ ಖುಷಿ, ಸಲ್ಲಿಸಿದ ಸೇವೆ, ಮಾಡಿದ ಕಾರ್ಯ ಹೊರಹೊಮ್ಮಿಸಿದ ಸಂಭ್ರಮ ಗಮನಾರ್ಹವಾದುದು. ಆಧುನಿಕತೆಯ ಸಂದರ್ಭದಲ್ಲಿ ಅನೇಕ ವೈಜ್ಞಾನಿಕ, ವೈಚಾರಿಕ ಅಂಶಗಳು ಅದರಲ್ಲಿ ಬಂದು ಸೇರಿರುವುದರಿಂದ ಇಂದು ನಮ್ಮ ಜನಪದರ ಜಾತ್ರೆಗಳ ಮೂಲ ಅರ್ಥ ಹಾಗೂ ಮಹತ್ವ ಮುಂತಾದುವನ್ನು ಕಡಿಮೆಯಾಗುತ್ತಿದೆ, ಅಷ್ಟೆ. ಜಾತ್ರೆಗಳು ನಮ್ಮ ಸಾಮಾಜಿಕ ಪರಂಪರೆಯನ್ನು ಪ್ರತಿನಿಧಿಸುವ ಬಹಳಷ್ಟು ಅಂಶಗಳನ್ನು ಮೈಗೂಡಿಸಿಕೊಂಡಿರು ವಂಥವು. ಜಾತ್ರೆಯ ರೂಪದಲ್ಲಿ ಜರುಗುವ ಸಂಕೀರ್ಣ ಸ್ವರೂಪದ ಗ್ರಾಮೀಣ ಕ್ರೀಡೆಗಳು, ಸಾಂಸ್ಕೃತಿಕ ಚಟುವಟಿಕೆಗಳು ಸಾಮಾಜಿಕವಾಗಿ ನಡೆಯುವಂಥವು. ಜನಪದರ ಪ್ರದರ್ಶನ ಕಲೆಗಳು ಜನಪದರ ದೈನಂದಿನ ಬದುಕಿನೊಡನೆ ನಿಕಟವಾದ ಸಂಬಂಧವನ್ನು ಹೊಂದಿರುವುದರಿಂದ ಅವುಗಳಿಗೆ ಹೆಚ್ಚಿನ ಮಹತ್ವ ಕೊಡಲಾಗಿತ್ತು. ಜೊತೆಗೆ ಅವು ಜಾತ್ರೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದ್ದವು. ಆರಾಧನೆಯ ಹಿನ್ನೆಲೆಯಲ್ಲಿ ಹುಟ್ಟಿದ ಮೇಳಗಳಲ್ಲಿ ಕೆಲವು ಕಾಲಕ್ರಮೇಣ ವೃತ್ತಿಕಲೆಯಾಗಿ ಪರಿವರ್ತನೆ ಹೊಂದಿದರೆ ಇನ್ನು ಕೆಲವು ಮನರಂಜನೆಯ ಮಾಧ್ಯಮಗಳಾಗಿ, ಕೆಲವು ಉಪಜೀವನದ ಕಲೆಗಳಾಗಿ ಬೆಳವಣಿಗೆಯನ್ನು ಕಂಡವು. ಅದರಲ್ಲಿ ಗೀಗೀ, ಲಾವಣಿ, ಡೊಳ್ಳು, ಗೊರವರ ಮೇಳ, ಭಜನಾ ಮೇಳ, ರೀವಾಯತ್ ಮೇಳ, ಗೊಂದಲಿಗರ ಮೇಳ, ವೀರಭದ್ರ ಕುಣಿತ, ನಾಟಕ ಇವೇ ಮುಂತಾದ ಜನಪದರ ಕಲೆಗಳು ಜಾತ್ರೆಯ ಮುಖ್ಯ ಅಂಗಗಳಾಗಿ, ಸಂಸ್ಕೃತಿಯ ಕಂಗಳಾಗಿ ಬೆಳೆದವು. ಜಾತ್ರೆಗಳು ಪ್ರದರ್ಶನ ಕಲೆಗಳಿಂದ ನೀತಿಬೋಧನೆ, ಒಳ್ಳೆಯದು-ಕೆಟ್ಟದ್ದನ್ನು ಬೇರ್ಪಡಿಸುವುದರ ಜೊತೆಗೆ ನಮ್ಮ ಜನಪದರಿಗೆ ಲೋಕಜ್ಞಾನವನ್ನು ತಿಳಿಸಬಯಸುವ ಪಾಠ-ಪ್ರವಚನ, ದೇಶಿ ಕೃಷಿ ಮತ್ತು ಆರೋಗ್ಯ ಮಹತ್ವ ಮುಂತಾದುವನ್ನು ತಿಳಿಸಿಕೊಟ್ಟಿವೆ. ಸಮಾಜದ ಒಳಿತು-ಕೆಡಕುಗಳನ್ನು ಎತ್ತಿತೋರಿಸುತ್ತ ಜನರಲ್ಲಿ ಜಾಗೃತಿ ಮೂಡಿಸಿವೆ. ಕೊಳ್ಳುಬಾಕ ಸಂಸ್ಕೃತಿಯ ಬೆನ್ನುಹತ್ತಿರುವ ಇವತ್ತಿನ ಜಾತ್ರೆಗಳಲ್ಲಿ ಮೋಸ, ವಂಚನೆ, ಹೊಡೆದಾಟ, ದುರಾಸೆ, ನಿರುತ್ಸಾಹ, ಕೃತಕ ವಸ್ತುಗಳ ಮಾರಾಟ ಇವುಗಳೇ ಕೇಂದ್ರಬಿಂದುವಾಗುತ್ತಿವೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಮತ್ತು ನಗರೀಕರಣಗಳ ಅಬ್ಬರತೆಯ ಭರಾಟೆಯಲ್ಲಿ ಭಾರತೀಯ ಸಾಮಾಜಿಕ ಸಂಸ್ಕೃತಿ, ಗ್ರಾಮ್ಯ ಸಂಸ್ಕೃತಿ ಅಲ್ಲೋಲ-ಕಲ್ಲೋಲವಾಗುತ್ತಿವೆ. ವಿಶ್ವದ ಹಸಿವನ್ನು ನೀಗಿಸುತ್ತೇವೆ, ಪ್ರಗತಿಗೆ ನಾಂದಿ ಗೀತೆ ಹಾಡುತ್ತೇವೆ, ಅಭಿವೃದ್ಧಿಯ ಬಾವುಟ ಹಾರಿಸುತ್ತೇವೆ ಎನ್ನುತ್ತ ನೆಲೆಯೂರಿದ ಇವು ನೆಲಮೂಲ ಜೀವಿಗಳ ಜೀವ ತಿನ್ನುತ್ತಿವೆ. ಇವೆಲ್ಲವುಗಳ ನಡುವೆ ದೇಶೀಯ ಮನಸುಗಳ ಕೌಟುಂಬಿಕ ವಾತಾವರಣ, ವೈಚಾರಿಕತೆಯಿಂದ ಕೂಡಿರುವ ಭಯ, ಭಕ್ತಿ, ಅಧ್ಯಾತ್ಮ, ಪ್ರೀತಿ, ವಿಶ್ವಾಸ, ನಂಬಿಕೆ, ಕೊಡು-ಕೊಳ್ಳುವಿಕೆ, ಸಮೂಹ ಪ್ರಜ್ಞೆಗಳನ್ನು ಇಂದಿನ ಗ್ರಾಮ ಭಾರತದಲ್ಲಿ ಕಾಣಬೇಕಾಗಿದೆ. ಪರಂಪರೆಯೊಂದಿಗೆ ಹೊಸ ಜಗತ್ತಿನ ಸಾಧ್ಯತೆಗಳ ಆವಿಷ್ಕರಿಸುವಿಕೆ, ಆಹ್ವಾನ ಮಾಡಿಕೊಳ್ಳುವಿಕೆ, ಅಪ್ಪಿಕೊಳ್ಳುವಿಕೆ, ಒಪ್ಪಿಕೊಳ್ಳುವಿಕೆ ಆಗಬೇಕಾಗಿದೆ. ಇವುಗಳೊಂದಿಗೆ ಈ ಗ್ರಾಮೀಣ ಸಂಸ್ಕೃತಿ ಉಳಿಸುವ, ಮುಂದುವರಿಸುವ ವಾರುಸುದಾರಿಕೆಯನ್ನು ನಾಡಿನ ಜನಪದರು, ಜನಪದ ವಿದ್ವಾಂಸರು, ಚಿಂತಕರು ಮತ್ತು ಸಾಹಿತಿಗಳು ವಹಿಸಿಕೊಳ್ಳಬೇಕು. ವಿಶೇಷವಾಗಿ ಗುರುಸ್ಥಾನ, ಪೂಜ್ಯರ ಸ್ಥಾನ ಮತ್ತು ಸಂಸ್ಕೃತಿ ಪೋಷಣೆಯ ಹೊಣೆಗಾರಿಕೆ ಹೊತ್ತಿರುವ ಮಠಗಳ ಮತ್ತು ಮಠಾಧೀಶರ ಜವಾಬುದಾರಿ ಬಹಳ ಅಗತ್ಯ ಮತ್ತು ಅಷ್ಟೇ ಮಹತ್ವದ್ದು.

ಡಾ॥ ನಿಂಗಣ್ಣ
ಕನ್ನಡ ಉಪನ್ಯಾಸಕರು, ಸೇಂಟ್ ಜೋಸೆಫ್ ಪಿ. ಯು. ಕಾಲೇಜು, ಕಲಬುರಗಿ



# ಆಕಾಶ ಪರಿಚಯಕ್ಕೆ ಸದವಕಾಶಗಳು

**ನ**ವೆಂಬರ್ ತಿಂಗಳಿನ ಮಳೆಯೆಲ್ಲಾ ಕಳೆದು ಧೂಳು ಅಡಗಿ ಶುಭ್ರ ವಾತಾವರಣವನ್ನು ನಿರೀಕ್ಷಿಸಬಹುದಾದ ತಿಂಗಳು. ಕಡುನೀಲಿ ಬಣ್ಣದ ಆಕಾಶ ಸೂರ್ಯಾಸ್ತದ ನಂತರ ಕಪ್ಪು ಗೋಳವಾದಾಗ ಎದ್ದುಕಾಣುವ ನಕ್ಷತ್ರಪುಂಜ ಪೂರ್ವದಂಚಿನ ಮಹಾವ್ಯಾಧ (ಒರೈಯನ್); ಅದರ ತುಸು ಉತ್ತರಕ್ಕೆ ಕಾಣುವ ಪಂಚಕೋಣಾಕೃತಿ ವಿಜಯ ಸಾರಥಿ (ಆರಿಗಾ) – ಅದರಲ್ಲಿಯ ಬ್ರಹ್ಮಹೃದಯ (ಕಪೆಲ್ಲಾ) ಇಷ್ಟು ದಿನ ಏಕೆ ನಮ್ಮ ಗಮನಕ್ಕೆ ಬರಲೇ ಇಲ್ಲ ಎಂಬಷ್ಟು ಪ್ರಕಾಶಮಾನವಾಗಿದೆ. ಇದರ ಪಕ್ಕದಲ್ಲಿ ಪಾರ್ಥ (ಪರ್ಸಿಯುಸ್), ಕುಂತಿ (ಕೆಸಿಯೋಪಿಯ) ಇವುಗಳನ್ನು ಗುರುತಿಸಬಹುದು. ಪಶ್ಚಿಮ ಆಕಾಶದಲ್ಲಿ ನಕ್ಷತ್ರಗಳೇ ಇಲ್ಲವೇನೋ ಎಂಬಷ್ಟು ವಿರಳವಾಗಿದೆ. ಮಕರ ಮತ್ತು ಕುಂಭ ಎರಡೂ ರಾಶಿಗಳಲ್ಲಿ ಅಷ್ಟೇನೂ ಪ್ರಕಾಶಮಾನವಾದ ನಕ್ಷತ್ರಗಳಿಲ್ಲ. ಕುಂಭದ ದಕ್ಷಿಣಕ್ಕೆ ಬಕ (ಗ್ರುಸ್) ಪುಂಜದ ಎರಡು ನಕ್ಷತ್ರಗಳನ್ನು ಗುರುತಿಸಬಹುದು. ದಕ್ಷಿಣದ ಇನ್ನೊಂದು ಪ್ರಕಾಶಮಾನ ನಕ್ಷತ್ರ ವೈತರಣೀಮುಖ (ಆಚೆರ್ನಾರ್). ಈ ಹೆಸರು ಈಚಿನದು. ಹಿರಿಯರಾದ ಪ್ರೊ॥ ಆರ್. ಎಲ್. ನರಸಿಂಹಯ್ಯ ನವರು ಇರಿಸಿದ್ದು. ಎರಿಡಾನಿಸ್ ಎಂಬುದು ಮಹಾವ್ಯಾಧದಿಂದ ಹೊರಟ ನದಿಯಂತೆ ಎಂಬುದನ್ನು ಅನುಸರಿಸಿ ವೈತರಣೀ ಎಂದು ಕರೆದರು. ಸಾಮಾನ್ಯವಾಗಿ ದಕ್ಷಿಣ ದಿಕ್ಕು ನರಕ, ಯಮ ಇವುಗಳಿಗೆ ಸಂಬಂಧಿಸಿದ್ದು ಎಂದು. ಈ ಚಿಂತನೆ ಹೊಸದೇನಲ್ಲ. ಬಹುಶಃ ಅವರ ಗಮನಕ್ಕೆ ಬಂದಿರದ ಸಂಗತಿಯೊಂದು ನನಗೆ ಈಚೆಗೆ ತಿಳಿಯಿತು. ಪುಣೆಯ ಭಂಡಾರ್ಕರ್ ಸಂಸ್ಥೆಯಲ್ಲಿದ್ದ ಹದಿನಾರನೆಯ ಶತಮಾನದ ಹಸ್ತಪ್ರತಿಯೊಂದರಲ್ಲಿ ನಕ್ಷತ್ರಗಳ ಹೆಸರುಗಳಿವೆ. ಬಳಕೆಯಲ್ಲಿರುವ ೨೭ ನಕ್ಷತ್ರಗಳನ್ನೂ ಸೇರಿಸಿ ಒಟ್ಟು ೮೪ ನಕ್ಷತ್ರಗಳ ಸ್ಥಾನ ನಿರ್ದೇಶಕಗಳ ಪಟ್ಟಿ ಇದೆ. ಅದರಲ್ಲಿ ಆಚೆರ್ನಾರ್ ಹೆಸರು ಯಮ ಎಂದಿದೆ.




ಸಂಜೆಯ ಆಕಾಶದಲ್ಲಿ ಯಾವುದೇ ಗ್ರಹ ನೋಡಲು ಸಿಗುವುದಿಲ್ಲ. ಆದರೆ, ೧೩ರಂದು ಬಾಲಚಂದ್ರ ಪಶ್ಚಿಮದಂಚಿನಲ್ಲಿ ಕಾಣಿಸಿಕೊಂಡಾಗ ಸೂಕ್ಷ್ಮವಾಗಿ ಗಮನಿಸಿದರೆ ಬುಧ ಗ್ರಹ ಕಾಣುತ್ತದೆ. ಇದು ಮುಂದಿನ ದಿನಗಳಲ್ಲಿ ಮೇಲೇರುತ್ತಾ ಬಂದು ತಿಂಗಳ ಕೊನೆಯವರೆಗೂ ಕಾಣುತ್ತದೆ. ಗರಿಷ್ಠ ಕೋನೋನ್ನತಿ ೨೯ರಂದು.

ಗುರು, ಮಂಗಳ ಮತ್ತು ಶುಕ್ರ – ಈ ಗ್ರಹಗಳು ಮುಂಜಾವಿನಲ್ಲಿ ಕಾಣುತ್ತವೆ. ಶುಕ್ರ ಮತ್ತು ಗುರುವನ್ನು ಗುರುತಿಸುವುದು ಕಷ್ಟವೇನಲ್ಲ. ಅವೆರಡರ ನಡುವೆ ಕ್ಷೀಣವಾದ ಕೆಂಪು ಚುಕ್ಕೆ ಮಂಗಳ; ಅದರ ಪಕ್ಕದಲ್ಲಿಯೇ ನೀಲಿ ನಕ್ಷತ್ರ ಚಿತ್ರಾ ಕಾಣುತ್ತದೆ. ತಿಂಗಳುದ್ದಕ್ಕೂ ಗಮನಿಸಿದರೆ ಅವು ಪರಸ್ಪರ ದೂರ ಸರಿಯುತ್ತಿರುವ ಹಾಗೆ ಕಾಣುತ್ತವೆ.

ಚಂದ್ರ ೪ರಂದು ಗುರುಗ್ರಹದ ಪಕ್ಕ, ೬ರಂದು ಮಂಗಳದ ಪಕ್ಕ, ೮ರಂದು ಶುಕ್ರ ಗ್ರಹದ ಪಕ್ಕ ಕಾಣುತ್ತದೆ. ೬ರಂದು ಚಂದ್ರ ಮಂಗಳನನ್ನು ಮುಚ್ಚಿ ಹಾಕುವ ಆಚ್ಛಾದನೆ ಸುಮಾರು ೭ ಗಂಟೆಗೆ ನಡೆಯಲಿದೆ. ಅದು ನಡೆಯುವಾಗ ಬೆಳಗಾಗಿ ಹೋಗುತ್ತದೆ. ಇದೇ ರೀತಿ ೭ರಂದು ಶುಕ್ರದ ಆಚ್ಛಾದನೆ ನಡೆಯಲಿದೆ. ಅದೂ ನಮಗೆ ಕಾಣುವುದಿಲ್ಲ. ೭ ಮತ್ತು ೮ರಂದು ಚಂದ್ರನ ಸ್ಥಾನಗಳನ್ನು ಗಮನಿಸಿದರೆ ಅದು ಶುಕ್ರನನ್ನು ಹಾದುಬಂದಿದೆ ಎಂದು ತಿಳಿಯ ಬಹುದು. ಜನವರಿ ೪ರಂದು ಪುನಃ ಚಂದ್ರ ಮಂಗಳವನ್ನು ಸಮೀಪಿಸುತ್ತದೆ. ಜನವರಿ ೧ರಂದು ಹೊಸ ವರ್ಷದ ಮೊದಲ ಮುಂಜಾವಿನಲ್ಲಿ ಪುನಃ ಗುರು ಮತ್ತು ಚಂದ್ರ ಒಟ್ಟಾಗುವುವು.

ಶನಿ ಗ್ರಹ ತಿಂಗಳ ಕೊನೆಗೆ ಮುಂಜಾವಿನಲ್ಲಿ ಪೂರ್ವ ದಿಗಂತದ ಅಂಚಿನಲ್ಲಿ ಕಾಣುತ್ತದೆ; ಆದರೆ, ಸಂಧ್ಯಾ ಪ್ರಕಾಶದ ಕೆಂಪಿನಲ್ಲಿ ಗುರುತಿಸುವುದು ಕಷ್ಟ.

ಈ ತಿಂಗಳ ೨೨ರಂದು ಉತ್ತರಾಯಣ. ಸೂರ್ಯ ದಕ್ಷಿಣದ ತುದಿಯನ್ನು ಮುಟ್ಟಿ ಹಿಂದಕ್ಕೆ ಹೊರಳುವ ದಿನ.

ಈ ತಿಂಗಳ ೧೨–೧೩ರಂದು ಜೆಮಿನಿಡ್ಸ್ ಉಲ್ಕಾವೃಷ್ಟಿ ಇದೆ. ಚಂದ್ರನ ಬೆಳಕು ಕಡಿಮೆ ಇರುವುದರಿಂದ ಕ್ಷೀಣವಾದ ಉಲ್ಕೆಗಳೂ ಕಾಣುವುವು. ವಾರಾಂತ್ಯದಲ್ಲಿ ನಡೆಯಲಿರುವುದರಿಂದ, ಊರಾಚೆ, ಬೆಳಕಿನ ಮಾಲಿನ್ಯವಿಲ್ಲದ ಸ್ಥಳಗಳಿಗೆ ಹೋಗಿ ನೋಡುವ ಅವಕಾಶವೂ ಇದೆ. ಗಂಟೆಗೆ ೫೦ರಿಂದ ೧೦೦ ಉಲ್ಕೆಗಳು ಬೀಳುವುವು ಎಂದು ನಿರೀಕ್ಷೆ. ಜೆಮಿನಿ ಅಂದರೆ ಮಿಥುನ ಸಂಜೆಯ ನಂತರವೇ ಕಾಣುವುದರಿಂದ



*ಡಿಸೆಂಬರ್ ೪ರ ಮುಂಜಾವು*     *ಜನವರಿ ೧ರ ಮುಂಜಾವು*

*ಡಿಸೆಂಬರ್ ೪ರ ಮತ್ತು ಜನವರಿ ೧ರ ಮುಂಜಾವುಗಳಲ್ಲಿ ಚಂದ್ರ ಮತ್ತು ಗುರು. ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಿ.*

**ಡಾ॥ ಬಿ. ಎಸ್. ಶೈಲಜಾ**

ಬೆಳಗಿನ ಜಾವದವರೆಗೂ ಉಲ್ಕೆಗಳನ್ನು ನೋಡುತ್ತಾ ಜೊತೆಗೆ ಆಕಾಶ ಪರಿಚಯವನ್ನು ಮಾಡಿಕೊಳ್ಳಬಹುದು.

ಈ ಉಲ್ಕಾವೃಷ್ಟಿ ಧೂಮಕೇತುವಿನ ಧೂಳಿನಿಂದ ಉಂಟಾಗುವುದಿಲ್ಲ; ಫ್ಯಾರೋ ಎಂಬ ಕ್ಷುದ್ರಗ್ರಹದಿಂದ ಉಂಟಾಗುತ್ತಿದೆ ಎಂಬುದೇ ವಿಶೇಷ.

**ಡಿಸೆಂಬರ್ ಖಗೋಳ ದಿನಚರಿ**

೩ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ
೪ ಚಂದ್ರ – ಗುರು ನಡುವೆ ೨ ಡಿಗ್ರಿ ಅಂತರ*
೫ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
೬ ಮಂಗಳ ಗ್ರಹದ ಆಚ್ಛಾದನೆ* (ಭಾರತಕ್ಕೆ ಕಾಣುವುದಿಲ್ಲ)
೭ ಶುಕ್ರದ ಆಚ್ಛಾದನೆ* (ಭಾರತಕ್ಕೆ ಕಾಣುವುದಿಲ್ಲ)
೮ ಶುಕ್ರ–ಚಂದ್ರ ೨ ಡಿಗ್ರಿ ಅಂತರದಲ್ಲಿ*
೧೧ ಅಮಾವಾಸ್ಯೆ ೧೫:೫೯ಕ್ಕೆ
೧೨ ಚಂದ್ರ–ಬುಧ ನಡುವೆ ೮ ಡಿಗ್ರಿ ಅಂತರ*
೧೩, ೧೪ ಜೆಮಿನಿಡ್ಸ್ ಉಲ್ಕಾವೃಷ್ಟಿ*
೧೮ ಚಾಂದ್ರಮಾಸದ ಮೊದಲ ಪಾದ; ಚಂದ್ರಾಸ್ತ ನಡುರಾತ್ರಿಗೆ
೨೧ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
೨೨ ಉತ್ತರಾಯಣ
೨೫ ಹುಣ್ಣಿಮೆ ೧೬:೪೧ಕ್ಕೆ
೨೯ ಬುಧಗ್ರಹದ ಗರಿಷ್ಠ ಕೋನೋನ್ನತಿ*
೧ ಮುಂಜಾವು ಗುರು–ಚಂದ್ರ ನಡುವೆ ೨ ಡಿಗ್ರಿ ಅಂತರ*

(* ಛಾಯಾಗ್ರಹಣಕ್ಕೆ ಸದವಕಾಶ)

*(ಡಿಸೆಂಬರ್ ೪ರ ಮತ್ತು ಜನವರಿ ೧ರ ಮುಂಜಾವುಗಳಲ್ಲಿ ಚಂದ್ರ ಮತ್ತು ಗುರುಗಳ ಸ್ಥಾನದಲ್ಲಿ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಿ.)*

**ಡಾ॥ ಬಿ. ಎಸ್. ಶೈಲಜಾ**

## ಸಾದರ ಸ್ವೀಕಾರ

**ಪುರೋಹಿತಶಾಹಿ ಮತ್ತು ಗುಲಾಮಗಿರಿ**
*ಜ್ಯೋತಿ ಬಾ ಫುಲೆ, ಕನ್ನಡಕ್ಕೆ : ಬಿ. ಶ್ರೀನಿವಾಸ*
**ಪುಟ : ೧೭೬ ಬೆಲೆ : ರೂ. ೧೦೦**

**ಕತ್ತೆ ಪುರಾಣ** *ಹಿಂದಿ ಮೂಲ : ಬ್ರಜೇಶ್ ಶರ್ಮ ಮತ್ತು ಕಲಾವಿದರ ತಂಡ, ಕನ್ನಡಕ್ಕೆ : ಪ್ರೊ॥ ಬಿ. ಗಂಗಾಧರಮೂರ್ತಿ*
**ಪುಟ : ೬೪ ಬೆಲೆ : ರೂ. ೪೦**

**ಚಿತ್ತ ಭಿತ್ತಿ** (ಕವನಗಳು) *ರೂಪಶ್ರೀ ಕಲ್ಲಿಗನೂರ್*
**ಪುಟ : ೧೧೮ ಬೆಲೆ : ರೂ. ೯೦**

**ಸಂತೆಯೊಳಗೊಂದು ಮನೆ** (ದಲಿತ ಸ್ತ್ರೀವಾದಿ ಚಿಂತನೆಯ ಲೇಖನಗಳು) *ಬಿ. ಯು. ಸುಮಾ*
**ಪುಟ : *xviii* + ೧೫೮ = ೧೭೬ ಬೆಲೆ : ರೂ. ೧೪೦**

**ಡಾ॥ ಬಿ. ಆರ್. ಅಂಬೇಡ್ಕರ್** (ವರ್ತಮಾನದೊಂದಿಗೆ ಮುಖಾಮುಖಿ) *ಸಂಪಾದಕರು : ಬಿ. ಯು. ಸುಮಾ*
**ಪುಟ : *xiv* + ೧೭೮ = ೧೯೨ ಬೆಲೆ : ರೂ. ೧೫೦**

**ವೀಸ್ಸಾದ ನಿರೀಕ್ಷೆಯಲ್ಲಿ ನೆನಪುಗಳು**
*ಡಾ॥ ಬಿ. ಆರ್. ಅಂಬೇಡ್ಕರ್, ಕನ್ನಡಕ್ಕೆ : ಸದಾಶಿವ ಮರ್ಜಿ*
**ಪುಟ : *xx* + ೯೨ = ೧೧೨ ಬೆಲೆ : ರೂ. ೯೦**
ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ವಿಪಸ್ಸನಾ ಧ್ಯಾನ – ಅರಿವಿನ ದಾರಿ** (ಗೋತಮ ಬುದ್ಧರ ಧ್ಯಾನ ತಂತ್ರಗಳು) *ಮೂಲ : ವೇ॥ ವಿ. ವಿಮಲರಶ್ಮಿ, ಅನುವಾದಕರು : ಉದಯಕುಮಾರ ಹಬ್ಬು*
**ಪುಟ : *xxii* + ೧೩೫ ಬೆಲೆ : ರೂ. ೮೧**
**ಅನಂತ ಪ್ರತಿಭಾ ಪ್ರಕಾಶನ,** ಕಿನ್ನಿಗೋಳಿ–೫೭೪ ೧೫೦

**ನಾಟ್ಯ ಮಯೂರಿ** (ಅನುವಾದಿತ ಕಾದಂಬರಿ)
*ಇಂಗ್ಲಿಷ್ ಮೂಲ : ಕೆ. ಜಿ. ಮಲ್ಯ ಕಿನ್ನಗೋಳಿ, ಕನ್ನಡಕ್ಕೆ : ವಿ. ಗಣೇಶ, ಸಾಗರ*
**ಪುಟ : ೧೭೨ + ೮ ಬೆಲೆ : ರೂ. ೧೫೦**

**ಸಾರ್ಥಕ ಬದುಕು** (ಕವನ ಸಂಕಲನ)
*ಲೇಖಕರು : ವಿ. ಗಣೇಶ್*
**ಪುಟ : ೮೬ + ೪ ಬೆಲೆ : ರೂ. ೭೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಆಕಾಶ್ ಪ್ರಕಾಶನ,** ಚಾಮರಾಜಪೇಟೆ, ಸಾಗರ

**ಒಡಲ ಬೆಂಕಿ ಆರದಿರಲಿ** ('ಕಳ್ಳು–ಬಳ್ಳಿ' ಬರಹಗಳು)
*ಡಾ॥ ವಸು ಮಳಲಿ*
**ಪುಟ : ೧೯೦ + ೪ ಬೆಲೆ : ರೂ. ೧೪೦**

**೨೧ನೇ ಕ್ರೋಮೋಜೋಮ್ ಮತ್ತು ಇತರೆ ಕಥನಗಳು**
*ಚಂಪ ಜೈಪ್ರಕಾಶ್*
**ಪುಟ : ೧೬೦+ ೪ ಬೆಲೆ : ರೂ. ೧೨೦**
**ಚಿಂತನ ಪುಸ್ತಕ,** ನಂ. ೪೦೫, ೧ನೇ ಅಡ್ಡರಸ್ತೆ, ಡಾಲರ್ಸ್ ಕಾಲೋನಿ, ಜೆ. ಪಿ. ನಗರ, ೪ನೇ ಫೇಸ್, ಬೆಂಗಳೂರು – ೫೬೦ ೦೭೮

**ಕಾವ್ಯಕ್ಕೆ ಉರುಳು ಭಾಗ – ೨** (ಕ್ರಾಂತಿಗಾಗಿ ಕೊರಳು ಕೊಟ್ಟವರ ಕರುಣಾಜನಕ ಕಥೆ)
*ಡಾ॥ ರಾಜಶೇಖರ ಮಠಪತಿ (ರಾಗಂ)*
**ಪುಟ : *xxii* + ೧೩೦ = ೧೫೨ ಬೆಲೆ : ರೂ. ೧೦೫**
**ಕಣ್ವ ಪ್ರಕಾಶನ,** ನಂ. ೮೯೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾ ಲೇಔಟ್, ಬೆಂಗಳೂರು – ೫೬೦ ೦೭೨

**ಕುಲದ ನೆಲೆ** *ಡಾ॥ ಕೆ. ಸುಶೀಲಾ*
**ಪುಟ : ೧೮೦ ಬೆಲೆ : ರೂ. ೧೩೫**

**ಸಾಮಾನ್ಯ ಮಾನಸಿಕ ಸಾಮರ್ಥ್ಯಗಳು : ಒಂದು ಸ್ವಯಂ ಕಲಿಕಾ ಕೈಪಿಡಿ – ಕನ್ನಡ ಮತ್ತು ಇಂಗ್ಲಿಷ್ ವಿವರಣೆಯೊಂದಿಗೆ** *ಡಾ॥ ಕೆ. ಆರ್. ಯೋಗಾನಂದನ್*
**ಪುಟ : ೨೭೨ ಬೆಲೆ : ರೂ. ೨೨೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಗಾಳಿ ಜೋಗುಳ** (ಕವನಗಳು) *ಅಕ್ಬರ್ ಸಿ. ಕಾಲಿಮಿರ್ಚಿ*
**ಪುಟ : *xvi* + ೬೩ = ೭೯ ಬೆಲೆ : ರೂ. ೭೦**
**ಕನ್ನಡ ಮೈತ್ರಿ ಪ್ರಕಾಶನ,** ನಂ. ೭೩೧/೩, ನಂ. ೯, ಮಂಜುನಾಥ ಬಡಾವಣೆ, ಭಾಗ್ಯನಗರ–೫೮೩ ೨೩೮, ಕೊಪ್ಪಳ ತಾಲೂಕು/ಜಿಲ್ಲೆ

**ಗಾಂಧಿ ಪ್ರಣೀತ ಧರ್ಮದರ್ಶಿತ್ವ** ಪ. ಮಲ್ಲೇಶ್
**ಪುಟ : ೧೬೮+ ೩೨ ಬೆಲೆ : ರೂ. ೧೬೦**
**ಅನನ್ಯ ಪ್ರಕಾಶನ,** ೧೦೪೭/೪೦, ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿದ್ಯಾರಣ್ಯಪುರಂ, ಮೈಸೂರು – ೮

**ನಾನು** (ಆತ್ಮಕಥನ) *ಡಾ॥ ಎಸ್. ಆರ್. ಗುಂಜಾಳ*
**ಪುಟ : *xiii* + ೨೭೮ ಬೆಲೆ : ರೂ. ೨೦೦**
**ಗ್ರಂಥಾಲಯ ವಿಜ್ಞಾನ ಪ್ರಕಾಶನ,** ನಂ. ೧೧, ಸಂತೂಬಾಯಿ ಅಪಾರ್ಟ್‌ಮೆಂಟ್ ಲೈನ್ ಬಝಾರ್, ಧಾರವಾಡ – ೫೮೦ ೦೦೧

**ಕನ್ನಡ ಕಾರಣ ಪುರುಷ ರಾ. ಹ. ದೇಶಪಾಂಡೆ**
*ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ*
**ಪುಟ : *xvi* + ೨೧೨ = ೨೨೮ ಬೆಲೆ : ರೂ. ೨೫೦**
**ಕನ್ನಡ ವಿಭಾಗ,** ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ – ೪೦೦ ೦೯೮

**ನಮ್ಮೂರ ಮಲ್ಲಿಗೆ**
*ಬಸವರಾಜ ರಾ. ರೇವಣ್ಣವರ (ಬರಾರೇ)*
**ಪುಟ : ೭೮ ಬೆಲೆ : ರೂ. ೭೫**
**ನವೋದಯ ಪ್ರಕಾಶನ,** ಮಯೂರ ಕಾಲನಿ, ಕಲೂತಿ ಪೆಟ್ರೋಲ್ ಪಂಪ್ ಹಿಂದುಗಡೆ, ಜಮಖಂಡಿ

**ಸಾಹಿತ್ಯ ಸಂಸ್ಕೃತಿ ಚಿಂತನ ಮಾಲೆ – ೧**
**ಆಧುನಿಕ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ** (ರಾಷ್ಟ್ರೀಯ ವಿಚಾರ ಸಂಕಿರಣದ ಪ್ರಬಂಧಗಳ ಸಂಗ್ರಹ)
*ಸಂ. : ಡಾ॥ ಸಿ. ಎಲ್. ಪ್ರಸನ್ನಕುಮಾರ್*
**ಪುಟ : ೧೮ + ೧೨೨ ಬೆಲೆ : ರೂ. ೧೦೦**
**ಸೇಕ್ರೆಡ್ ಹಾರ್ಟ್ ಪ್ರಥಮ ದರ್ಜೆ ಮಹಿಳಾ ಕಾಲೇಜು,** ಜೀವನಭೀಮಾನಗರ, ಬೆಂಗಳೂರು – ೫೬೦ ೦೭೫

**ಕಳವಳ ಕಳಕಳಿ** (ವೈಚಾರಿಕ, ಮಕ್ಕಳ ಹಕ್ಕುಗಳು, ಊರು, ತೇರು, ಸಾಧಕರು ಮತ್ತಿತರ ಬರಹಗಳ ಸಂಕಲನ)
ಮಂಜುನಾಥ ಡಿ. ಡೊಳ್ಳಿನ
**ಪುಟ : *viii* + ೧೧೦ = ೧೧೮ ಬೆಲೆ : ರೂ. ೧೦೦**
**ಹೊನ್ನಂಬರಿ ಪ್ರಕಾಶನ,** 'ತಾಯಿನೆರಳು', ಪ್ರಗತಿನಗರ, ಕಿನ್ನಾಳ ರಸ್ತೆ, ಕೊಪ್ಪಳ – ೫೮೩ ೨೩೧



ಮರೀನಾ ಕಡಲ ತೀರದಲ್ಲಿ ಸ್ಥಾಪನೆಯಾಗಿರುವ 'ಶ್ರಮದ ವಿಜಯ' ಶಿಲ್ಪ ನಿರ್ಮಾಣದ ಹಿಂದೆ ಒಂದು ಐತಿಹಾಸಿಕ ಪ್ರೇರಣೆ ಇದೆ. ೧೯೨೩ರ ೧ನೇ ತಾರೀಖು ಮರೀನಾ ಕಡಲ ತೀರದಲ್ಲಿ ಕಾರ್ಮಿಕರ ಒಂದು ಬೃಹತ್ ಸಭೆ ನಡೆಯಿತು. ಬ್ರಿಟಿಷ್ ಆಡಳಿತಾವಧಿಯಲ್ಲಿ ನಡೆದ ಒಂದು ಮಹತ್ವದ ಸಭೆ ಅದು. ಸಂಗಾತಿ ಸಿಂಗಾರವೇಲು ಎಂಬ ಕಾರ್ಮಿಕ ನಾಯಕ ಅದನ್ನು ಸಂಘಟಿಸಿದ್ದರು. ಅಲ್ಲಲ್ಲಿ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿ, ಮಾಲೀಕರ ಬಿಗಿದ ಮುಷ್ಟಿಯೆದುರು ಸೋತು ತೆಪ್ಪಗಾಗಿದ್ದರು. ಆವರೆಗೆ ಕಾರ್ಮಿಕರು ಸಂಘಟಿತರಾಗಿರಲಿಲ್ಲ. ತಮ್ಮ ಸಂಕಲ್ಪವನ್ನು ದೃಢಪಡಿಸಿಕೊಳ್ಳುವ ಸಲುವಾಗಿ ನಡೆದ ಸಭೆ ಅದು.

# ಶಿಲ್ಪಿ ದೇವಿಪ್ರಸಾದ್ ರಾಯ್ ಚೌಧುರಿ

**ಚೆ**ನ್ನೈ ಮರೀನಾ ಕಡಲ ತೀರದಲ್ಲಿ ನಿರ್ಮಿಸಲಾಗಿರುವ, ದುಡಿಮೆಗಾರರ ಬೃಹತ್ ಶಿಲ್ಪ ಸಮುದ್ರದ ತಂಗಾಳಿ ಸೇವಿಸಲು ಬಂದವರ ಗಮನ ಸೆಳೆದು, ಅವರನ್ನು ಒಂದು ನಿಮಿಷ ತಡೆದು ನಿಲ್ಲುವಂತೆ ಮಾಡುತ್ತದೆ. ಬಿಸಿಲಿನಿಂದ ಕಪ್ಪಾದ ನಾಲ್ಕು ಮಂದಿ ಕೌಪೀನಧಾರಿ ಕೆಲಸಗಾರರು ಕಲ್ಲುಬಂಡೆಯೊಂದನ್ನು ಮೀಟಿ ಕದಲಿಸುತ್ತಿರುವ ಶಿಲ್ಪ. ಪ್ರತಿಯೊಬ್ಬನ ಕೈಯಲ್ಲೂ ಒಂದೊಂದು ಮೀಟುಗೋಲು. ಅವರ ಮುಖಗಳು ಅವರು ಮಾಡುತ್ತಿರುವ ಕೆಲಸದ ಒತ್ತಡವನ್ನು ಪ್ರತಿಬಿಂಬಿಸುವಂತಿವೆ. ಗಟ್ಟಿಮುಟ್ಟಾದ ಅವರ ಶರೀರಗಳು, ಕೈಕಾಲುಗಳ ಮಾಂಸಖಂಡಗಳು ಕಷ್ಟಸಾಧ್ಯವಾದ ಕೆಲಸದ ಒತ್ತಡದಿಂದ ಸೆಟೆದುಕೊಂಡಂತಿವೆ. ಅವರ ಮೈಗಳಿಂದ ಬೆವರು ಸುರಿಯುತ್ತಿದೆ. ನರಗಳು ಸಹ ಸೆಟೆದುಕೊಂಡಿವೆ. ಭದ್ರವಾಗಿ ಭೂಮಿಗಂಟಿಕೊಂಡು ಕದಲದೆ ಹಟ ಮಾಡುತ್ತಿರುವ ಆ ಭಂಡ ಬಂಡೆಯನ್ನು ಅಲ್ಲಿಂದ ಕದಲಿಸಿಯೇ ತೀರುವೆವೆಂದು ಹಟ ಹಿಡಿದು, ಅವರು ಆ ಕಾಯಕದಲ್ಲಿ ನಿರತರಾಗಿದ್ದಾರೆ.

ಆ ಶಿಲ್ಪಕ್ಕೆ **"ಶ್ರಮದ ವಿಜಯ"** (ಟ್ರೈಯಫ್ ಆಫ್ ಲೇಬರ್) ಎಂಬ ಶೀರ್ಷಿಕೆ ಕೊಟ್ಟಿದ್ದಾರೆ. ಅದನ್ನು ನಿರ್ಮಿಸಿದವರು ಶಿಲ್ಪಿ ದೇವಿಪ್ರಸಾದ್ ರಾಯ್ ಚೌಧುರಿಯವರು.

ದೇವಿಪ್ರಸಾದರು ಬಂಗಾಳದ ರಂಗಪುರ ಎಂಬ ಊರಿನಲ್ಲಿ ೧೮೯೯ರ ಸೆಪ್ಟೆಂಬರ್ ತಿಂಗಳು ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸ ಸ್ಥಳೀಯ ಶಾಲೆಯಲ್ಲಿ, ಮುಂದೆ ಅವರು ಲಂಡನಿನಲ್ಲಿ ಶಿಕ್ಷಣ ಪಡೆದರು. ಅಬನೀಂದ್ರ ನಾಥ ಠಾಗೂರರಲ್ಲಿ ಚಿತ್ರಕಲೆ ಅಭ್ಯಾಸ ಮಾಡಿದರು. ಚಿತ್ರಕಲೆಯ ಎಲ್ಲ ಪ್ರಕಾರಗಳನ್ನು ಕರಗತ ಮಾಡಿಕೊಳ್ಳುತ್ತ, ಹಿರಣ್ಮಯಿ ಚೌಧರಿ ಅವರಲ್ಲಿ ಶಿಲ್ಪಕಲೆ ಅಭ್ಯಾಸ ಮಾಡಿದರು. ಇಟಲಿಯ ಕಲೆಗಾರ ಬೊಯಿಸನ್ ಅವರಿಂದ ಪಾಶ್ಚಾತ್ಯ ಪೇಂಟಿಂಗ್ ಶೈಲಿ ಕಲಿತರು. ಜೊತೆಗೆ, ಶಿಲ್ಪ ನಿರ್ಮಾಣದ ತಂತ್ರಗಳನ್ನೂ ಕಲಿತರು. ಅಂದಿನ ಎಲ್ಲ ಕಲೆಗಾರರಂತೆ ಪ್ರಕೃತಿ ದೃಶ್ಯಗಳು, ಸ್ಥಿರ ಚಿತ್ರಗಳು, ಮೀನು ಹಿಡಿಯುವ ಮುದುಕ, ಹಾಲುಣಿಸುವ ತಾಯಿ, ಸಂತಾಲ ಯುವತಿ, ಸಂಗೀತಗಾರರು ಮತ್ತು ರಾಸಲೀಲೆಯಂಥ ಶೃಂಗಾರ ರಸ ಉಕ್ಕಿಸುವ ಚಿತ್ರಗಳನ್ನು ರಚಿಸಿ ಖ್ಯಾತರಾದರು.

ಕಾಲ ಸರಿದಂತೆ, ತಮ್ಮ ಕಲೆಯ ಬಗ್ಗೆ ಅವರಿಗೆ ಒಂದು ಬಗೆಯ ಅತೃಪ್ತಿ ಉಂಟಾಗತೊಡಗಿತು. ಬಂಗಾಳದ ಪಾರಂಪರಿಕ ಶೈಲಿಯ ಪ್ರಭಾವದಿಂದ ಬಿಡಿಸಿಕೊಳ್ಳಲು ಮನಸ್ಸು ತುಡಿಯತೊಡಗಿತ್ತು. ಅದರ ಪರಿಣಾಮವಾಗಿ ಅವರ ಕಲೆಯಲ್ಲಿ ಸಮಕಾಲೀನ ಮತ್ತು ವಾಸ್ತವಿಕ ಚಿತ್ರಗಳು ಮೂಡಿಬರತೊಡಗಿದವು. ಚಿತ್ರಗಾರರಾಗಿದ್ದ ಅವರು ಶಿಲ್ಪಿಯಾದರು. ತಮ್ಮ ಶಿಲ್ಪಗಳಲ್ಲಿ ಪಾಶ್ಚಾತ್ಯ ತಂತ್ರಗಳನ್ನು ಬಳಸಿಕೊಂಡು ಭಾರತೀಯ ವಾಸ್ತವಿಕತೆಯ ಹೊಸ ಶೈಲಿಯೊಂದನ್ನು ಕಂಡುಕೊಳ್ಳಲು ಅವರಿಗೆ ಸಾಧ್ಯವಾಯಿತು.

ದೇಶದ ಸ್ವಾತಂತ್ರ್ಯಕ್ಕಾಗಿ ಬೇರೆ ಬೇರೆ ರೀತಿಯ ಹೋರಾಟಗಳು, ಆಂದೋಳನಗಳು ನಡೆಯುತ್ತಿದ್ದವು. ತಮ್ಮ ಹೊಲಗಳಲ್ಲಿ ಬೆಳೆದು ಇತರರ ಹೊಟ್ಟೆ ತುಂಬಿಸುತ್ತಿದ್ದ ರೈತರೂ ಅನ್ನಕ್ಕಾಗಿ ಹಾತೊರೆಯಬೇಕಾದ ಪರಿಸ್ಥಿತಿಯನ್ನು, ಬಂಗಾಳದಲ್ಲಿ ಉಂಟಾದ ಬರಗಾಲ ಸಾವಿರಾರು ಜೀವಗಳನ್ನು ಬಲಿತೆಗೆದುಕೊಂಡದ್ದನ್ನು ಕಣ್ಣಾರೆ ಕಂಡಿದ್ದ ಅವರಿಗೆ, ಬದುಕಿನ ವಾಸ್ತವಿಕತೆಯನ್ನು ನೋಡದ ಕಲೆಗೆ ಏನೇನೂ ಮೌಲ್ಯವಿಲ್ಲ ಎಂಬುದು ಮನವರಿಕೆಯಾಯಿತು. ಇದರ ಪರಿಣಾಮವಾಗಿ ಅವರು ಹಲವು ಸ್ಮರಣೀಯ ಶಿಲ್ಪಗಳನ್ನು ರಚಿಸಿದರು. ಶಿಲ್ಪ ಮಾಧ್ಯಮವಾಗಿ ಕಂಚನ್ನು ಬಳಸಿದ ಬಂಗಾಳದ ಕಲೆಗಾರರಲ್ಲಿ ಅವರು ಮೊದಲಿಗರು ಎನ್ನಲಾಗುತ್ತದೆ.

ದೇವಿಪ್ರಸಾದ್ ರಾಯ್ ಚೌಧುರಿ ಕಲ್ಕತ್ತಾದ ಓರಿಯಂಟಲ್ ಆರ್ಟ್ ಸೊಸೈಟಿಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ೧೯೨೮ರಿಂದ ೧೯೫೮ರವರೆಗೆ ಮದರಾಸಿನ ಆರ್ಟ್ಸ್ ಮತ್ತು ಕ್ರಾಫ್ಟ್ಸ್ ಕಾಲೇಜಿನ ನಿರ್ದೇಶಕರಾಗಿದ್ದರು. ದೇಶದ ಹಲವು ನಗರಗಳಲ್ಲಿ ಅವರ ಚಿತ್ರ ಪ್ರದರ್ಶನಗಳು ನಡೆದಿವೆ. ಅವರು ರಚಿಸಿರುವ ಕೃತಿಗಳು ದೇಶದ ಅನೇಕ ಮ್ಯೂಸಿಯಮ್‌ಗಳಲ್ಲಿವೆ. ಅವರ ಶಿಷ್ಯರಲ್ಲಿ ಅನೇಕರು ಚಿತ್ರಗಾರರಾಗಿ ಅಂತರರಾಷ್ಟ್ರೀಯ ಖ್ಯಾತಿಗಳಿಸಿದ್ದಾರೆ.

ಮರೀನಾ ಕಡಲ ತೀರದಲ್ಲಿ ಸ್ಥಾಪನೆಯಾಗಿರುವ 'ಶ್ರಮದ ವಿಜಯ' ಶಿಲ್ಪ ನಿರ್ಮಾಣದ ಹಿಂದೆ ಒಂದು ಐತಿಹಾಸಿಕ ಪ್ರೇರಣೆ ಇದೆ. ೧೯೨೩ರ ೧ನೇ ತಾರೀಖು ಮರೀನಾ ಕಡಲ ತೀರದಲ್ಲಿ ಕಾರ್ಮಿಕರ ಒಂದು ಬೃಹತ್ ಸಭೆ ನಡೆಯಿತು.

**ಪರಂಜ್ಯೋತಿ**



ಕಡಲ ತೀರದಲ್ಲಿ ಗಾಂಧೀಜಿ



ಶ್ರಮದ ವಿಜಯ



ಹಸಿವು

ಬ್ರಿಟಿಷ್ ಆಡಳಿತಾವಧಿಯಲ್ಲಿ ನಡೆದ ಒಂದು ಮಹತ್ವದ ಸಭೆ ಅದು. ಸಂಗಾತಿ ಸಿಂಗಾರವೇಲು ಎಂಬ ಕಾರ್ಮಿಕ ನಾಯಕ ಅದನ್ನು ಸಂಘಟಿಸಿದ್ದರು. ಅಲ್ಲಲ್ಲಿ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿ, ಮಾಲೀಕರ ಬಿಗಿದ ಮುಷ್ಟಿಯೆದುರು ಸೋತು ತೆಪ್ಪಗಾಗಿದ್ದರು. ಆವರೆಗೆ ಕಾರ್ಮಿಕರು ಸಂಘಟಿತರಾಗಿರಲಿಲ್ಲ. ತಮ್ಮ ಸಂಕಲ್ಪವನ್ನು ದೃಢಪಡಿಸಿಕೊಳ್ಳುವ ಸಲುವಾಗಿ ನಡೆದ ಸಭೆ ಅದು. ದುಡಿಯುವ ಜನರು ತಮ್ಮ ಹಕ್ಕುಗಳಿಗಾಗಿ ಹೋರಾಡಲು ಸಂಘಟಿತರಾಗಬೇಕು, ದುಡಿಯುವ ಜನರ ಆಶಯಗಳಿಗಾಗಿ ಹೋರಾಡಲು ಕಮ್ಯುನಿಸ್ಟ್ ಪಾರ್ಟಿಯೊಂದನ್ನು ಸ್ಥಾಪಿಸಬೇಕು ಎಂಬ ನಿರ್ಣಯಗಳನ್ನು ಸಭೆಯಲ್ಲಿ ಅಂಗೀಕರಿಸಲಾಯಿತು. ಮೇ ಒಂದನೇ ತಾರೀಖನ್ನು ಕಾರ್ಮಿಕರ ದಿನವಾಗಿ ಆಚರಿಸುವ ರೂಢಿ ಅಲ್ಲಿಂದ ಪ್ರಾರಂಭವಾಯಿತು. ಭಾರತದಲ್ಲಿ ಮೊತ್ತ ಮೊದಲಿಗೆ ಮೇ ದಿನ ಆಚರಿಸಿ ನಾಂದಿ ಹಾಕಿದ್ದು ಆ ಮರೀನಾ ಕಡಲತೀರದ ಸಭೆ!

ಮೇಲಿನ ಘಟನೆಯ ನೆನಪಿನ ಸಂಕೇತವಾಗಿ ಕಾಮರಾಜರು ಮುಖ್ಯಮಂತ್ರಿ ಆಗಿದ್ದಾಗ, ಮದರಾಸು ಸರಕಾರ ಅಲ್ಲಿ ಕಾರ್ಮಿಕರ ಶಿಲ್ಪವನ್ನು ಸ್ಥಾಪಿಸುವ ನಿರ್ಣಯವನ್ನು ಕೈಗೊಂಡಿತು. ಆಗ ಮದರಾಸು ಆರ್ಟ್ಸ್ ಕಾಲೇಜಿನ ಡೈರೆಕ್ಟರಾಗಿದ್ದ ದೇವಿಪ್ರಸಾದ್‌ರಿಗೆ ಆ ಕಾರ್ಯವನ್ನು ಒಪ್ಪಿಸಲಾಯಿತು. ಕಾಲೇಜಿನ ರಾತ್ರಿ ಕಾವಲುಗಾರ ವಿ. ಪಿ. ಶ್ರೀನಿವಾಸನ್ ಆರಡಿ ಎತ್ತರದ ಕಟ್ಟುಮಸ್ತಾದ ಆಳು. ಶಿಲ್ಪಿಯ ಮನಸ್ಸಿನಲ್ಲಿ ಶಿಲ್ಪದ ಕಲ್ಪನೆ ರೂಪುಗೊಳ್ಳತೊಡಗಿದಾಗ ಅವರು ಶ್ರೀನಿವಾಸರನ್ನು ಹಾಗೂ ಪಿ. ರಾಮು ಎಂಬ ಮತ್ತೊಬ್ಬ ಕಲಾಪ್ರಿಯರನ್ನು ಮಾಡಲ್‌ಗಳಾಗಿ ಬಳಸಿಕೊಂಡು ಶಿಲ್ಪವನ್ನು ನಿರ್ಮಿಸಿದರು. ೧೯೫೦ರ ಗಣರಾಜ್ಯ ದಿನದಂದು ಅದರ ಲೋಕಾರ್ಪಣೆ ನಡೆಯಿತು. ಯಾವ ಕಡೆಯಿಂದ ನೋಡಿದರೂ ಪ್ರಮಾಣಬದ್ಧವಾಗಿರುವ ಆ ಶಿಲ್ಪವನ್ನು ವಿದ್ಯಾರ್ಥಿಗಳು ನೋಡಿ ಕಲಿಯಬಹುದು.

ಅಲ್ಲಿಂದ ದಕ್ಷಿಣಕ್ಕೆ ಎರಡು ಕಿ. ಮೀ. ದೂರದಲ್ಲಿ ದೇವಿಪ್ರಸಾದರು ನಿರ್ಮಿಸಿದ, ಗಾಂಧೀಜಿಯವರ ಶಿಲ್ಪವಿದೆ. ಎತ್ತರದ ವೇದಿಕೆಯ ಮೇಲಿರುವ ಅದು, ಗಾಂಧೀಜಿ ವೇಗವಾಗಿ ಹೆಜ್ಜೆಹಾಕುತ್ತ ನಡೆದು ಹೋಗುತ್ತಿರುವಂತಿದೆ.

ಅವರು ನಿರ್ಮಿಸಿರುವ, ಭಾರತದ ಸ್ವಾತಂತ್ರ್ಯ ಹೋರಾಟದೊಂದಿಗೆ ತಳುಕುಹಾಕಿಕೊಂಡಿರುವ ಮತ್ತೊಂದು ಶಿಲ್ಪಕೃತಿ ಬಿಹಾರ ರಾಜ್ಯದ ಪಾಟ್ನಾ ನಗರದಲ್ಲಿದೆ. ಅದು ಗಾಂಧೀಜಿಯವರ ಕರೆಯ ಮೇರೆಗೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ, ಪೊಲೀಸರ ಗುಂಡೇಟಿಗೆ ಬಲಿಯಾಗಿ ಹುತಾತ್ಮರಾದವರ ನೆನಪಿಗಾಗಿ ನಿರ್ಮಾಣಗೊಂಡದ್ದು.



*ಚಳಿಗಾಲದ ನಿರೀಕ್ಷೆ*

ಅಕ್ಟೋಬರ್ ೧೪, ೧೯೭೫ರಲ್ಲಿ ನಿಧನರಾಗುವ ವರೆಗೆ ದೇವಿಪ್ರಸಾದರು ಕಲೆಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಪೇಂಟರಾಗಿ ಕಲಾ ಜೀವನವನ್ನು ಪ್ರಾರಂಭಿಸಿದವರು ಮುಂದೆ ಶಿಲ್ಪಿಯಾದರು. ಅವರ ಅನೇಕ ಕಲಾಕೃತಿಗಳು ದೇಶದ ಬೇರೆ ಬೇರೆ ಮ್ಯೂಸಿಯಮ್‌ಗಳಲ್ಲಿವೆ. ಸಾಮಾನ್ಯ ಜನರ ಬದುಕಿನ ಸಂತಸ, ನೋವಿನ ಕ್ಷಣಗಳನ್ನು ಶಿಲ್ಪಗಳಲ್ಲಿ ಮೂಡಿಸುವಲ್ಲಿ ಅವರು ಸಿದ್ಧಹಸ್ತರು. ರವೀಂದ್ರನಾಥ ಠಾಗೂರ್, ಮಹಾತ್ಮ ಗಾಂಧಿ, ಆ್ಯನಿ ಬೆಸೆಂಟ್ ಮುಂತಾದುವು ಅವರ ಶಿಲ್ಪಗಳಲ್ಲಿ ಕೆಲವು.

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್
ಶ್ರೀರಾಮ ದೇವಾಲಯ ರಸ್ತೆ, ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು–೫೬೦ ೦೪೭

ಕಾವ್ಯಲೋಕ

# ಅರ್ಥವಾಗಲಿಲ್ಲ

ಹಿಮಾಚ್ಛಾದಿತ ಹೆದ್ದಾರಿಯಲಿ
ಅವನ ಬಸ್ಸು ನಿಧಾನ ಚಲಿಸಿತು
ಹಿಂದೆ ಮುಂದೆ ನೋಡಿದ
ಎಲ್ಲರೂ ಗಡ್ಡಧಾರಿಗಳು !
ಬೋಳಾದ ತನ್ನ ಗದ್ದ ನೇವರಿಸಿಕೊಂಡ
ಎದೆ ಝಲ್ಲೆಂದಿತು !
ಮುಂದಿನ ನಿಲ್ದಾಣಕೆ
ಇಳಿದುಬಿಟ್ಟ !

ಇನ್ನೊಂದು ಬಸ್ಸು ಹತ್ತಿದ
ಮತ್ತೆ ಹಿಂದೆ ಮುಂದೆ ನೋಡಿದ
ಎಲ್ಲರೂ ನಾಮಧಾರಿಗಳು !
ಬೋಳಾದ ತನ್ನ ಹಣೆ ಒತ್ತಿಕೊಂಡ
ಮತ್ತೆ ಎದೆ ಝಲ್ಲೆಂದಿತು !
ಮುಂದಿನ ನಿಲ್ದಾಣಕೆ ಇಳಿದು
ಮುಖ ಮರೆಮಾಚುತ್ತ

ಒಂದು ಬೋಳುಮರದಡಿ
ಯೋಚಿಸುತ್ತ ನಿಂತ !

ತಾನಾರೆಂಬುದು ಅವನಿಗೆ
ಕೊನೆಗೂ
ಅರ್ಥವಾಗಲಿಲ್ಲ !

**ಅಂಬಾದಾಸ ವಡೆ**
ಕಪಡಾ ಬಜಾರ್
ಬಾಗಲಕೋಟೆ – ೫೮೭ ೧೦೧

ಡಾ|| ಎಂ. ವೆಂಕಟಸ್ವಾಮಿ

# ನಳಂದ

## ವಿಶ್ವದ ಪುರಾತನ ವಿಶ್ವವಿದ್ಯಾಲಯ - ಒಂದು ಹಿನ್ನೋಟ

ತಕ್ಷಶಿಲಾ, ನಳಂದ, ವಿಕ್ರಮಶಿಲಾ, ನಾಗಾರ್ಜುನ, ಕಾಶಿ ಪ್ರತಿಷ್ಠಾನ, ಉಜ್ಜಯಿನಿ, ವಲ್ಲಭಿ, ಕಾಂಚಿ, ಮಧುರಾ, ಅಯೋಧ್ಯೆ ಪುರಾತನ ಭಾರತದಲ್ಲಿ ಪ್ರಸಿದ್ಧವಾದ ವಿಶ್ವವಿದ್ಯಾಲಯಗಳು/ವಿದ್ಯಾಪೀಠಗಳು. ಇವುಗಳಲ್ಲಿ ಅತ್ಯಂತ ಪುರಾತನವಾದದ್ದು ತಕ್ಷಶಿಲಾ. ಇದು ಕ್ರಿ.ಪೂ. ೮೦೦ರಿಂದ ಕ್ರಿ.ಪೂ. ೪೦೦ರಲ್ಲಿ ಇಂದಿನ ರಾವಲ್ಪಿಂಡಿಯ ಪಶ್ಚಿಮಕ್ಕೆ ೯೦ ಮೈಲಿ ದೂರದಲ್ಲಿ ನೆಲೆಯೂರಿತ್ತು. ಅದು ಪ್ರಾಚೀನ ಗಾಂಧಾರದ ಈಗಿನ ಅಫ್ಘಾನಿಸ್ತಾನದ ರಾಜಧಾನಿಯಾಗಿತ್ತು. ಅರಾಯನ ಎಂಬ ಗ್ರೀಕ್ ಇತಿಹಾಸಕಾರನ ಪ್ರಕಾರ ಸಿಕಂದರನ ಕಾಲದಲ್ಲಿ ಈ ಪಟ್ಟಣವು ಹೆಚ್ಚು ವೈಭವಶಾಲಿಯಾಗಿತ್ತು. ಇರಾನ್, ಗ್ರೀಕ್, ಶಕ, ಕುಶಾಣ, ಮತ್ತ ಹೂಣರ ಸತತ ಆಕ್ರಮಣದಿಂದ ಕ್ರಿ.ಶ. ೫೦೦ರ ಸುಮಾರಿಗೆ ತಕ್ಷಶಿಲಾ ಸಂಪೂರ್ಣವಾಗಿ ನಾಶವಾಯಿತು.

ವಿಶ್ವದ ಪುರಾತನ ವಿದ್ಯಾಲಯ ನಳಂದ ಎನ್ನುವುದು ಚಾರಿತ್ರಿಕ ಸತ್ಯ. ಬುದ್ಧನ ಅನುಯಾಯಿ ಸಾರಿಪುತ್ರನು ಜನ್ಮ ನೀಡಿದ ಸ್ಥಳ ನಳಂದ. ಇದು ಪ್ರಾರಂಭವಾಗಿದ್ದು ಇಂದಿನ ಪಾಕಿಸ್ತಾನದ ತಕ್ಷಶಿಲಾದಲ್ಲಿ ಸುಮಾರು ಕ್ರಿ.ಪೂ. ೭ನೇ ಶತಮಾನದಲ್ಲಿ. ಇದರ ಮೂಲ ಹೆಸರು ತಕ್ಷಶಿಲಾ. ಅಂದರೆ ಕಡೆದ ಶಿಲೆ. ತಕ್ಷಿಲಾ ಅಪಭ್ರಂಶ ಪದವಾಗಿ ಮುಂದೆ ಭಾರತದಲ್ಲಿ ಎರಡನೇ ವಿಶ್ವವಿದ್ಯಾಲಯ ನಳಂದ ಕ್ರಿ.ಪೂ. ೫ನೇ ಶತಮಾನದಲ್ಲಿ ಪ್ರಾರಂಭಗೊಂಡಿತು. ನಳಂದ ವಿಶ್ವವಿದ್ಯಾಲಯವನ್ನು ಮೂಲವಾಗಿ ಸ್ಥಾಪಿಸಿದವರು ಗುಪ್ತರ ರಾಜ ಕುಮಾರಗುಪ್ತ-೧ (ಕ್ರಿ.ಶ. ೪೧೫-೪೫೫), ಕನ್ನುಜ್‌ನ ಹರ್ಷವರ್ಧನ (ಕ್ರಿ.ಶ. ೬೦೬-೬೪೭), ಮತ್ತು ಪೂರ್ವ ಭಾರತದ ಪಾಲಾ ರಾಜರು ( ಕ್ರಿ.ಶ. ೮-೧೨ನೇ ಶತಮಾನ) ನಳಂದ ಬೆಳವಣಿಗೆಯಲ್ಲಿ ಮುಖ್ಯ ಪಾತ್ರ ವಹಿಸಿದ್ದರು.

ತಕ್ಷಿಲಾ ಸುಮಾರು ೧ ಸಾವಿರ ವರ್ಷಗಳ ಕಾಲ ತನ್ನ ಕಾರ್ಯ ನಿರ್ವಹಿಸಿದ ಮೇಲೆ ಹೂಣರು ಮತ್ತು ಅಫ್ಘನರ (ಕ್ರಿ.ಶ. ೧೧೯೩) ಆಕ್ರಮಣದಿಂದ ನಾಶವಾಯಿತು ಎನ್ನಲಾಗಿದೆ. ಚರಿತ್ರೆಯಲ್ಲಿನ ಮಹಾಚತುರ ಚಾಣುಕ್ಯ, ಸಂಸ್ಕೃತ ಭಾಷೆಯ ಪಾಣಿನಿ ಮತ್ತು ಪತಂಜಲಿ ಯೋಗ ಋಷಿ ಇದೇ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು. ಒಂದು ವೇಳೆ ನಳಂದ ನಾಶ ಹೊಂದಿರದಿದ್ದರೆ ಅಥವಾ ಇಂದಿನವರೆಗೂ ಉಳಿದುಕೊಂಡಿದ್ದರೆ ವಿಶ್ವದ ಅತ್ಯಂತ ಪುರಾತನ ವಿಶ್ವವಿದ್ಯಾಲಯ ಎನಿಸಿಕೊಳ್ಳುತ್ತಿತ್ತು. ಕ್ರಿ.ಶ. ೧೦೮೮ರಲ್ಲಿ ಬೊಲಾಗ್ನಿ, ೧೯೦೧ರಲ್ಲಿ ಪ್ಯಾರಿಸ್, ೧೧೬೭ರಲ್ಲಿ ಆಕ್ಸ್‌ಫರ್ಡ್, ಕೇಂಬ್ರಿಜ್ ೧೨೦೯ರಲ್ಲಿ ಪ್ರಾರಂಭಗೊಂಡವು. ನಳಂದ ವಿಶ್ವವಿದ್ಯಾಲಯಕ್ಕೆ ಇವುಗಳನ್ನು ಹೋಲಿಸಿದಾಗ ಇವೆಲ್ಲ ತೀರ ಇತ್ತೀಚಿನ ವಿಶ್ವವಿದ್ಯಾಲಯಗಳಷ್ಟೆ ಎಂಬುದು ಸ್ಪಷ್ಟವಾಗುತ್ತದೆ.

ತಕ್ಷಿಲಾ ಮತ್ತು ನಳಂದ ವಿಶ್ವವಿದ್ಯಾಲಯಗಳನ್ನು ೨೫೦೦ ವರ್ಷಗಳ ಹಿಂದೆ ಮೂಲವಾಗಿ ಕಟ್ಟಿ ಬೆಳೆಸಿದವರು ಬೌದ್ಧ ಭಿಕ್ಷುಗಳು. ನಳಂದ ವಿಶ್ವವಿದ್ಯಾಲಯ ಅತ್ಯಂತ ಹೆಸರು ಪಡೆದ ವಿದ್ಯಾಲಯವಾಗಿದ್ದು, ಕ್ರಿ.ಪೂ. ೬ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದವರೆಗೂ ೭೦೦ ವರ್ಷಗಳ ಕಾಲ ಅತ್ಯಂತ ಉನ್ನತ ಚಟುವಟಿಕೆಗಳಿಂದ ಕೂಡಿತ್ತು. ಸಂಸ್ಕೃತದಲ್ಲಿ ನಳಂದ ಎಂಬ ಪದ ಮೂರು ಪದಗಳ ಸಮ್ಮಿಲನ. ತನ್ನ ಜ್ಞಾನವನ್ನು ವಿಶ್ವದಲ್ಲೆಲ್ಲ ಹರಡಿತ್ತು. ಚೀನಾ,

**ನಳಂದದ ಮೂಲ ಉದ್ದೇಶ ಉನ್ನತ ಜ್ಞಾನ ಮತ್ತು ಬುದ್ಧಿವಂತ ವ್ಯಕ್ತಿಗಳನ್ನು ರೂಪಿಸುವುದು. ಅಂತಹ ವ್ಯಕ್ತಿಗಳನ್ನು ರೂಪಿಸಿ ಅವರು ಎಲ್ಲ ರೀತಿಯಲ್ಲೂ ಸಮಾಜಕ್ಕೆ ಆದರ್ಶಪ್ರಾಯವಾಗಿ ನಡೆದುಕೊಂಡು ಜ್ಞಾನದ ಸಮಾಜವನ್ನು ಕಟ್ಟುವುದೇ ಅದರ ಮುಖ್ಯ ಉದ್ದೇಶವಾಗಿತ್ತು. ವಿಶ್ವವಿದ್ಯಾಲಯದ ಸಮಗ್ರ ಏಳುಬೀಳುಗಳ ಚರಿತ್ರೆ ದೊರಕದೆ ಹೋಗಿರುವುದು ಒಂದು ದುರಂತ. ಉತ್ಖನನದ ಸಂಶೋಧನೆಗಳೂ ಕೂಡ ಇಂದಿಗೂ ವಿವರಗಳನ್ನು ಭೇದಿಸಲಾಗದೆ ಇರುವುದು ವಿಪರ್ಯಾಸವಾಗಿಯೇ ಆಗಿದೆ. ಹಾಗೆಯೇ ಭಾರತದ ಭಿನ್ನ ಸಂಸ್ಕೃತಿಗಳು ಮತ್ತು ಒಂದು ಪೀಳಗೆಯಿಂದ ಇನ್ನೊಂದು ಪೀಳಗೆಗೆ ಜ್ಞಾನ ಹೇಗೆ ಪಸರುತ್ತಾ ಹೋಯಿತು ಎನ್ನುವ ನಿಖರವಾದ ವಿವರಗಳೂ ಕೂಡ ದೊರಕದೆ ಹೋಗಿವೆ. ನಳಂದದ ಪೂರ್ಣ ಪ್ರಮಾಣದ ಚರಿತ್ರೆ ಇಂದಿಗೂ ಚರಿತ್ರೆಯ ಪುಟಗಳಲ್ಲಿ ನಿಗೂಢವಾಗಿಯೇ ಉಳಿದುಕೊಂಡಿದೆ.**

ಇಂಡೊನೇಷಿಯಾ, ಕೊರಿಯ, ಪರ್ಷಿಯ, ಜಪಾನ್, ಶ್ರೀಲಂಕಾ, ಟಿಬೆಟ್, ಟರ್ಕಿ ಇನ್ನಿತರ ದೇಶಗಳಿಂದ ವಿದ್ಯಾರ್ಥಿಗಳು ಬಂದು ಹೋಗುತ್ತಿದ್ದರು.

ನಳಂದದ ಮೂಲ ಉದ್ದೇಶ ಉನ್ನತ ಜ್ಞಾನ ಮತ್ತು ಬುದ್ಧಿವಂತ ವ್ಯಕ್ತಿಗಳನ್ನು ರೂಪಿಸುವುದು. ಅಂತಹ ವ್ಯಕ್ತಿಗಳನ್ನು ರೂಪಿಸಿ ಅವರು ಎಲ್ಲ ರೀತಿಯಲ್ಲೂ ಸಮಾಜಕ್ಕೆ ಆದರ್ಶಪ್ರಾಯವಾಗಿ ನಡೆದುಕೊಂಡು ಜ್ಞಾನದ ಸಮಾಜವನ್ನು ಕಟ್ಟುವುದೇ ಅದರ ಮುಖ್ಯ ಉದ್ದೇಶವಾಗಿತ್ತು. ವಿಶ್ವವಿದ್ಯಾಲಯದ ಸಮಗ್ರ ಏಳುಬೀಳುಗಳ ಚರಿತ್ರೆ ದೊರಕದೆ ಹೋಗಿರುವುದು ಒಂದು ದುರಂತ. ಉತ್ಖನನದ ಸಂಶೋಧನೆಗಳೂ ಕೂಡ ಇಂದಿಗೂ ವಿವರಗಳನ್ನು ಭೇದಿಸಲಾಗದೆ ಇರುವುದು ವಿಪರ್ಯಾಸವಾಗಿಯೇ ಆಗಿದೆ. ಹಾಗೆಯೇ ಭಾರತದ ಭಿನ್ನ ಸಂಸ್ಕೃತಿಗಳು ಮತ್ತು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಜ್ಞಾನ ಹೇಗೆ ಪಸರುತ್ತಾ ಹೋಯಿತು ಎನ್ನುವ ನಿಖರವಾದ ವಿವರಗಳೂ ಕೂಡ ದೊರಕದೆ ಹೋಗಿವೆ. ನಳಂದದ ಪೂರ್ಣ ಪ್ರಮಾಣದ ಚರಿತ್ರೆ ಇಂದಿಗೂ ಚರಿತ್ರೆಯ ಪುಟಗಳಲ್ಲಿ ನಿಗೂಢವಾಗಿಯೇ ಉಳಿದುಕೊಂಡಿದೆ. ಚೀನಿ ಚರಿತ್ರೆಕಾರರಾದ ಪಾ-ಹುಯಿನ್ (೫ನೇ ಶತಮಾನ), ಹುಯಿನ್ ತ್ಸಾಂಗ್ (೭ನೇ ಶತಮಾನ) ಮತ್ತು ಐ ತ್ಸುಂಗ್ (೭ನೇ ಶತಮಾನ) ಇವರ ದಾಖಲೆಗಳಿಂದ ನಮಗೆ ನಳಂದದ ಚರಿತ್ರೆಯ ಕೆಲವು ಮುಖ್ಯ ನೋಟಗಳು ದೊರಕಿವೆ. ನಾಗಾರ್ಜುನ, ಆರ್ಯದೇವ, ವಸುಂಧು, ಧರ್ಮಪಾಲಾ, ಸುವಿಸೇನು, ಅಸಂಗ, ಶಿಲಾಭದ್ರ, ಧರ್ಮಕೀರ್ತಿ, ಶಾಂತಾರಕ್ಷಿತ ಇವರೆಲ್ಲರೂ ನಳಂದದ ಜೊತೆಗೆ ಸಂಬಂಧ ಹೊಂದಿದ್ದರು.

ಡಾ॥ ರವೀಂದ್ರ ಪಂತ್ (ಹೊಸ ಮಹಾವಿಹಾರ ಮುಖ್ಯಸ್ಥ) ಅವರ ಪ್ರಕಾರ ನಳಂದದ ಬಗ್ಗೆ ಇದುವರೆಗೂ ತೀರಾ ಕಡಿಮೆ ಮಾಹಿತಿ ದೊರಕಿದೆ. ನಳಂದ ಕ್ಯಾಂಪಸ್ ಬಗ್ಗೆ ಶೇಕಡ ೯೦ರಷ್ಟು ತಿಳಿದಿಲ್ಲ. ಇಲ್ಲಿನ ಇಟ್ಟಿಗೆ ಗುಡ್ಡಗಳ ಶಿಥಿಲವಾದ ಕಟ್ಟಡಗಳು ಕಾಣಿಸುತ್ತಿವೆ. ಪಾ-ಹುಯಿನ್ ಕ್ರಿ.ಶ. ೬೭೩-೬೮೭ರ ಅವಧಿಯಲ್ಲಿ ಭಾರತದ ಪರ್ಯಟನೆ ಮಾಡಿ ನಳಂದದ ಬಗ್ಗೆ ದಾಖಲಿಸಿರುವ ವಿವರಗಳು ಅತ್ಯಂತ ಪ್ರಮುಖವಾದುವು. ನಳಂದದಲ್ಲಿ ವಿದ್ಯಾರ್ಥಿಯಾಗಿ ಮತ್ತು ಅಧ್ಯಾಪಕನಾಗಿ ಕಾರ್ಯ ನಿರ್ವಹಿಸಿದ್ದ ಪಾ-ಹುಯಿನ್‌ನ ವಿವರಗಳು ನಳಂದ ಕ್ಯಾಂಪಸ್ ಬಗ್ಗೆ ಸರಿಯಾಗಿ ಹೋಲುತ್ತವೆ. ಪಾ-ಹುಯಿನ್ ಒಟ್ಟು ೬ ವರ್ಷ ಕಾಲ ನಳಂದದಲ್ಲಿದ್ದುದಾಗಿ ತಿಳಿದುಬರುತ್ತದೆ. ಆತ ಚೀನಾಗೆ ಹಿಂದಿರುಗಿದಾಗ ನೂರಾರು ಪತ್ರಪುಸ್ತಕಗಳು ಮತ್ತು ಇತರೆ ಕೃತಿಗಳನ್ನು ಕೊಂಡೊಯ್ದ. ಅದರಲ್ಲಿ ಅತ್ಯಂತ ಉಪಯುಕ್ತವಾದ ಒಟ್ಟು ೬೫೭ ಸಂಚಿಕೆಗಳಿದ್ದವು ಎನ್ನಲಾಗಿದೆ. ಆತ ತನ್ನ ಬದುಕಿನ ಅಂತಿಮ ಘಟ್ಟದಲ್ಲಿ ಈ ಅಮೂಲ್ಯ ಕೃತಿಗಳನ್ನು ಚೀನಿ ಭಾಷೆಗೆ ಅನುವಾದಿಸಿ ಅವುಗಳಲ್ಲಿನ ಸಾರಾಂಶ, ತಾತ್ಪರ್ಯಗಳನ್ನು ಸಂಶೋಧನೆಗೆ ಒಳಪಡಿಸಿದ್ದ. ಚೀನಾದಲ್ಲಿ ಇಂದಿಗೂ ಆತನ ಬಗ್ಗೆ ಅತ್ಯಂತ ಗೌರವವಿದ್ದು, ಚೀನಿ ಸರಕಾರ ಅವನ ಎಲ್ಲ ಕೃತಿಗಳನ್ನು ಸಂರಕ್ಷಿಸಿದೆ. ಆದರೆ ನಾವು ಎಲ್ಲವನ್ನೂ ಕಳೆದುಕೊಂಡಿದ್ದೇವೆ. ನಳಂದ ೧೦ ಚದರ ಮೈಲಿ ವಿಸ್ತೀರ್ಣ ಉಳ್ಳ ಪ್ರದೇಶದಲ್ಲಿ ಹರಡಿಕೊಂಡಿದ್ದು, ಈ ಪಾಳುಬಿದ್ದ ಸ್ಥಳವನ್ನು ಮೊದಲಿಗೆ ಗುರುತಿಸಿದ್ದು ೧೮೬೧ರಲ್ಲಿ ಉತ್ಖನನ ವಿಭಾಗದ ಸರ್ ಅಲೆಕ್ಸಾಂಡರ್ ಕನ್ನಿಂಗ್ ಹ್ಯಾಮ್ ಎಂಬಾತ. ನಳಂದದಲ್ಲಿ ೧೦ ಸಾವಿರ ವಿದ್ಯಾರ್ಥಿಗಳು, ೨ ಸಾವಿರ ಅಧ್ಯಾಪಕರು ಮತ್ತು ಇನ್ನಿತರ ೩ ಸಾವಿರ ಸಿಬ್ಬಂದಿ ತಂಗಿದ್ದರು ಎನ್ನಲಾಗಿದೆ.

ಹುಯಿನ್ ತ್ಸಾಂಗ್ ತನ್ನ ದಾಖಲೆಗಳಲ್ಲಿ ಮಹಡಿಗಳ ಮೇಲಿದ್ದ ಕೋಣೆಗಳು ಮೋಡಗಳಲ್ಲಿ ತೇಲಾಡುವಂತಿದ್ದವು ಎಂಬುದಾಗಿ ವಿವರಿಸಿದ್ದಾನೆ. ಬೌದ್ಧ ಭಿಕ್ಷುಗಳು ಧ್ಯಾನ ಮಾಡುತ್ತಿದ್ದ ವಿಹಾರಗಳು ಇವು. ಇದರ ಜೊತೆಗೆ ವಿಹಾರಗಳ ಸುತ್ತಲೂ ಭಿಕ್ಷುಗಳಿಗೆ ವಿವಿಧ ವಿಷಯಗಳಲ್ಲಿ ಪ್ರಾವೀಣ್ಯತೆ ಪಡೆಯಲು ಕೇಂದ್ರಗಳನ್ನು ಸ್ಥಾಪಿಸಲಾಗಿತ್ತು. ಮುಂದೆ ಅದು ಜ್ಞಾನದಲ್ಲೂ, ಧಾರ್ಮಿಕತೆಯಲ್ಲೂ ಮತ್ತು ಬೌದ್ಧಿಕತೆಯಲ್ಲೂ ಮಹಾ ವಿಶ್ವವಿದ್ಯಾಲಯವಾಗಿ ಮಾರ್ಪಟ್ಟಿತು. ಮೊದಲಿಗೆ, ಸಂಪೂರ್ಣವಾಗಿ ಭಿಕ್ಷುಗಳು ಅಥವಾ ಸನ್ಯಾಸಿಗಳಿಗೆ ಮಾತ್ರ ಪ್ರವೇಶವಿದ್ದ ವಿದ್ಯಾಲಯ ಅನಂತರದ ದಿನಗಳಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸಿತು. ಮುಂದೆ ರಾಜನೀತಿ, ಧರ್ಮನಿರಪೇಕ್ಷತೆಯಂತಹ ವಿಷಯಗಳನ್ನು ಸೇರಿಸಿಕೊಂಡಿತು. ವಿಜ್ಞಾನ, ಖಗೋಳಶಾಸ್ತ್ರ, ವೈದ್ಯಕೀಯಶಾಸ್ತ್ರ, ತರ್ಕಶಾಸ್ತ್ರ, ಆಧ್ಯಾತ್ಮಿಕ ಸಿದ್ಧಾಂತ, ತತ್ವಶಾಸ್ತ್ರ, ಸಾಂಖ್ಯ, ಯೋಗಶಾಸ್ತ್ರ, ವೇದ ಮತ್ತು

## ಕದಲುತ್ತಿತ್ತು...




ಮುರಿದ ಸೌಧಗಳನ್ನು ಗೋರಿಯಾಗಿಸುತ್ತೀಯಾ
ಈ ನನ್ನೆದೆಯ ಭವ್ಯ ಬಂಗಲೆಯ
ಛಿದ್ರಗೊಳಿಸುವ ನಿನ್ನ ತುದಿ ಬೆರಳು
ಹಾಹಾ ಕಲೆಗಾರ !
ಅವು ಅದೆಷ್ಟು ಬೆಚ್ಚನೆಯವು

ಸೊಕ್ಕಿದೆದೆಯ ಮುರಿದು ಬೀಳಿಸುವ
ಅದ್ಭುತ ಪರಿಗೆ ಜ್ವಾಲಾರಸಗಳದೆ...
ಆ ಹಳದಿ ಹೂ ಅರ್ಧದಷ್ಟೂ ದಳ
ಉದುರಿ ಹೋಗಿದ್ದವು...

ಮಣ್ಣ ಕಣಕಣದಿಂದಲೂ
ನನ್ನಾತ್ಮದ ಜ್ವಾಲಾಮಾಲಿನಿ
ಕದಲುತ್ತಿದ್ದಳು...

ನೀನು ಎಸೆದು ಹೋದ ಹಳದಿ ಹೂ...
ಆ ಹಳದಿ ಹೂವಿನ ಕೊನೆಯ ದಳ
ಇನ್ನೂ ಉಳಿದಿತ್ತು
ಆ ಬಣ್ಣದೊಳಗೆ ಸೇರಬೇಕಿತ್ತು
ಆದರೆ ನಾನು ಹಳದಿ ಹೂವಾಗಿರಲಿಲ್ಲ
ನಿನ್ನ ನಿರಾಸೆಗೊಳಿಸಿದ್ದೆ...
ಕಾಮಕ್ಕೆ, ಪ್ರೇಮಕ್ಕೆ, ತ್ಯಾಗಕ್ಕೆ ಉಸಿರಾಡದವಳೂ ಆಗಿದ್ದೆ...

ನನ್ನ
ಕನಸಿನ ಸೌಧಗಳನ್ನ ಗೋರಿಯಾಗಿಸುತ್ತೀಯಾ
ಛಿದ್ರಗೊಳಿಸುವ ನಿನ್ನ ತುದಿ ಬೆರಳು
ಅವು ಅದೆಷ್ಟು ಬೆಚ್ಚನೆಯವು...
ಒಣ ಕಣ್ಣೀರಿನಂತೆ...

ನನ್ನ ಗೋರಿಯ ಮೇಲೆ
ನೀನು ಹಳದಿ ಹೂ ಬಿಸಾಡುವಾಗ
ತಾಕಿದ ನಿನ್ನ ಅದೇ ತುದಿ ಬೆರಳು...
ಹಾ...
ಅದೆಷ್ಟು ಬೆಚ್ಚನೆಯವು, ಅದೆಷ್ಟು ಬೆಚ್ಚನೆಯವು...

**ಹರವು ಸ್ಫೂರ್ತಿಗೌಡ**
ಹರವು ಗ್ರಾಮ, ಪಾಂಡವಪುರ ತಾಲೂಕು
ಮಂಡ್ಯ ಜಿಲ್ಲೆ

ಬೌದ್ಧಧರ್ಮದ ಪವಿತ್ರಗಳು ಸೇರಿದ್ದವು. ನಳಂದ ಮಹಾಯಾಣ ಬೌದ್ಧಾಶ್ರಮದಲ್ಲಿ ಬೌದ್ಧ ತತ್ವಗಳ ಈ ೪ ಪದ್ಧತಿಗಳನ್ನು ಅಭ್ಯಸಿಸುತ್ತಿದ್ದರು : ೧. ವೈಭಾಶಿಕ ಮತ್ತು ಸೌತ್ರಾಂತಿಕ, ೨. ಹೀನಾಯಾನದೊಳಗಿನ ಶಾಲೆಯ ಉಪವಿಭಾಗಗಳು. ಇತರ ಎರಡು ವಿಸ್ತಮಂತ್ರ ಮತ್ತು ಮಾಧ್ಯಮಕಗಳು – ಇವು ಮಹಾಯಾನದ ಒಳಗಿನ ಉಪವಿಭಾಗಗಳು. ಜೊತೆಗೆ, ತತ್ವಜ್ಞಾನದ ಐಚ್ಛಿಕ ವಿಭಾಗಗಳು ಮತ್ತು ನಂಬಿಕೆಗಳ ಬಗ್ಗೆಯೂ ಆಲೋಚನೆಗಳು ಹುಟ್ಟಿಕೊಂಡವು. ಎಲ್ಲಾ ಜಾತಿ, ಜನಾಂಗಗಳ ವಿದ್ಯಾರ್ಥಿಗಳಿಗೂ ಪ್ರವೇಶ ಮುಕ್ತವಾಗಿತ್ತು.

ಇದರ ಜೊತೆಗೆ ಐದು ಕಡ್ಡಾಯ ವಿಷಯಗಳು ಇರುತ್ತಿದ್ದವು : ೧. ಶಬ್ದ ವಿದ್ಯೆ (ಶಬ್ದ ಮತ್ತು ಪದಗಳ ವಿಜ್ಞಾನ) ಅಥವಾ ವ್ಯಾಕರಣ ಮತ್ತು ಲೇಖನ ಪ್ರಣಾಲಿ, ೨. ಶಿಲ್ಪಸ್ಥಾನಾ ವಿದ್ಯೆ (ಕಲೆ ಮತ್ತು ತಂತ್ರ ), ೩. ಚಿಕಿತ್ಸಾ ವಿದ್ಯೆ (ವೈದ್ಯಕೀಯ ವಿಜ್ಞಾನ), ೪. ಏತು ವಿದ್ಯೆ (ತರ್ಕ ಶಾಸ್ತ್ರ) ೫. ಅಧ್ಯಾತ್ಮ ವಿದ್ಯೆ (ತತ್ವಜ್ಞಾನ). ಐ ತ್ಸುಂಗ್‌ನ ಪ್ರಕಾರ ಇನ್ನೊಂದು ಕಡ್ಡಾಯ ವಿದ್ಯೆಯನ್ನು ಇಲ್ಲಿ ಕಲಿಸಲಾಗುತ್ತಿತ್ತು. ಅದೆಂದರೆ ನೂಲು ತೆಗೆಯುವುದು ಮತ್ತು ಬಟ್ಟೆ ನೇಯುವುದು. ಅಂದರೆ ಅವರ ಬಟ್ಟೆಗಳನ್ನು ಅವರೇ ನೇಯ್ದುಕೊಳ್ಳುವುದು. ಇದರ ಜೊತೆಗೆ ಚಿತ್ರ ಬಿಡಿಸುವುದು, ಶಿಲ್ಪ ಕಡೆಯುವುದನ್ನೂ ಕಲಿಸಲಾಗುತ್ತಿತ್ತು. ನಳಂದದಲ್ಲಿ ಕಲಿಸುತ್ತಿದ್ದ ವಿದ್ಯೆ ಬರೀ ಬೋಧನೆ ಮಾತ್ರ ಆಗಿರಲಿಲ್ಲ. ಮನುಷ್ಯನಲ್ಲಿ ಆಧ್ಯಾತ್ಮಿಕತೆ, ಜ್ಞಾನ, ನೀತಿತತ್ವ ಮತ್ತು ನೈತಿಕತೆ ವಿಕಾಸ ಹೊಂದುವ ಕೆಲಸ ವನ್ನು ಮಾಡಲಾಗುತ್ತಿತ್ತು. ಒಟ್ಟಿನಲ್ಲಿ, ವಿದ್ಯಾರ್ಥಿಗಳನ್ನು ಪರಿಪೂರ್ಣ ಮನುಷ್ಯರನ್ನಾಗಿ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಪ್ರಜೆಗಳನ್ನಾಗಿ ರೂಪಿಸುವ ಕೆಲಸ ದಲ್ಲಿ ಸಂಪೂರ್ಣವಾಗಿ ನಳಂದ ತೊಡಗಿಕೊಂಡಿತ್ತು.

ನಳಂದ ವಿಶ್ವವಿದ್ಯಾಲಯವನ್ನು ವಾಸ್ತುಶಾಸ್ತ್ರಕ್ಕೆ ಉತ್ತಮ ಉದಾಹರಣೆ ಎಂದು ಪರಿಗಣಿಸಲಾಗಿದೆ. ಅದನ್ನು ಒಂದು ಉನ್ನತವಾದ ಗೋಡೆಯಿಂದ ಮತ್ತು ಒಂದು ದ್ವಾರದಿಂದ ಗುರುತಿಸಲಾಗುತ್ತದೆ. ಇಡೀ ಕ್ಯಾಂಪಸ್‌ನಲ್ಲಿ ಸರೋವರಗಳು, ಉದ್ಯಾನವನಗಳು, ಮಾವಿನ ತೋಪುಗಳು, ಶೃಂಗರಿಸಿದ ದೇವಾಲಯ–ಗೋಪುರಗಳು ಮಂಜಿನಿಂದಾಗಿ ಮೇಲೆ ಆಕಾಶದಲ್ಲಿ ಹಾರುತ್ತಿರುವಂತೆ ಕಾಣುತ್ತಿದ್ದವು. ಆದ್ದರಿಂದ ಸನ್ಯಾಸಿಗಳು ತಮ್ಮ ಕೋಣೆಗಳಿಂದಲೇ ವಾಯು ಪ್ರಭಾವ ಮತ್ತು ಮೋಡಗಳ ಆಗಮಿಸುವಿಕೆಗೆ ಸಾಕ್ಷಿಯಾಗಿರುತ್ತಿದ್ದರು. ಸಂಪೂರ್ಣವಾಗಿ ಅರಳಿದ ಕಮಲಗಳ ಚೆಲುವಿನಿಂದ, ನೀಲಿಬಣ್ಣದ ಸರೋವರಗಳ ಗಾಳಿಯಿಂದ ವಿಶ್ವವಿದ್ಯಾಲಯ ಪಸರಿಸುತ್ತಿತ್ತು ಎಂಬುದಾಗಿ ಜುವಾಂಗ್ಜಾಂಗ್ ದಾಖಲಿಸಿದ್ದಾನೆ.

ಈ ರೀತಿಯಲ್ಲಿ 'ವಸುದೈವ ಕುಟುಂಬಕಂ' ಎನ್ನುವಂತೆ ಅಧ್ಯಾಪಕರು ವಿದ್ಯಾರ್ಥಿಗಳನ್ನು ಪರಿಪೂರ್ಣವಾಗಿ ತಿದ್ದಿ ವಿಶ್ವಮಾನವರನ್ನಾಗಿ ರೂಪಿಸು ತ್ತಿದ್ದರು. ಚೀನಿ ವಿದ್ಯಾರ್ಥಿ ಝಿಯಾಂಗ್ ಝುಂಗ್ ತರಬೇತಿ ಮುಗಿಸಿದ ಮೇಲೆ ನಳಂದ ವಿಶ್ವವಿದ್ಯಾಲಯ ಆತನನ್ನು ಅಲ್ಲೇ ಅಧ್ಯಾಪಕನಾಗಿ ಇರುವಂತೆ ವಿನಂತಿಸಿಕೊಂಡಾಗ ಆತ, "ಇಷ್ಟೊಂದು ಜ್ಞಾನ ಪಡೆದ ಮೇಲೆ ನನ್ನಲ್ಲೆ ಇಟ್ಟುಕೊಂಡು ಏನು ಮಾಡುವುದು ? ಅದನ್ನು ಜ್ಞಾನ ಇಲ್ಲದವರಿಗೆ ತಲುಪಿಸಬೇಕಲ್ಲವೇ ?" ಎನ್ನುತ್ತ ನಳಂದದಿಂದ ತನ್ನ ದೇಶಕ್ಕೆ ಹೊರಟು ಹೋಗುತ್ತಾನೆ. ನಳಂದ ನಡೆದಷ್ಟು ಕಾಲ, ಅಂದರೆ ಸುಮಾರು ೭ ಶತಮಾನಗಳ ಕಾಲ ತನ್ನ ಜ್ಞಾನವನ್ನು ಭಾರತಕ್ಕೆ ಮಾತ್ರವಲ್ಲದೆ ಪ್ರಪಂಚದಾದ್ಯಂತ ಹರಡಿಕೊಂಡು ಒಳ್ಳೆ ದಾರಿಯಲ್ಲಿ ಸಾಗಲು ಪ್ರೇರಣೆಯಾಗಿತ್ತು.

ಕ್ರಿ. ಶ. ೪ನೇ ಶತಮಾನದ ಗುಪ್ತರ ಕಾಲ ನಳಂದ ವಿಶ್ವವಿದ್ಯಾಲಯಕ್ಕೆ ಅತ್ಯಂತ ಗೌರವ ದೊರಕಿದ, ಭಾರತದ ಚರಿತ್ರೆ ಮತ್ತು ಸಂಸ್ಕೃತಿಗೆ ಬಂಗಾರದ ಕಾಲವಾಗಿತ್ತು. ದೇಶದ ಮೂಲೆಮೂಲೆಗಳಿಂದಲೂ ಸಾರ್ವಜನಿಕರು ಹಣ, ದವಸ–ಧಾನ್ಯ, ಜ್ಞಾನವನ್ನು ದಾನ ಮಾಡಿ ನಳಂದದ ಅಭಿವೃದ್ಧಿಯಲ್ಲಿ ಪಾಲ್ಗೊಂಡಿದ್ದರು. ನಳಂದದ ಸುತ್ತಮುತ್ತಲ ೨೦೦ ಹಳ್ಳಿಗಳ ಜನರು ಹಾಲು, ಬೆಣ್ಣೆ , ತುಪ್ಪ ಮತ್ತಿತರ ದಿನಸಿ ಸಾಮಗ್ರಿಗಳನ್ನು ನಳಂದ ವಿಶ್ವವಿದ್ಯಾಲಯಕ್ಕೆ ಉಚಿತ ವಾಗಿ ಪೂರೈಸುತ್ತಿದ್ದ ದಾಖಲೆಗಳಿವೆ. ವಿಶ್ವವಿದ್ಯಾಲಯ ಪ್ರವೇಶ ಸಂಪೂರ್ಣವಾಗಿ ವಿದ್ಯಾರ್ಥಿಗಳ ಅರ್ಹತೆಯ ಮೇಲೆ ನಿರ್ಧಾರವಾಗುತ್ತಿತ್ತು. ವಯಸ್ಸು ಕನಿಷ್ಠ ೨೦ ವರ್ಷ ಇರಬೇಕಾಗಿತ್ತು. ಜೊತೆಗೆ, ಬರಹದ ಪರೀಕ್ಷೆ ಮತ್ತು ಮೌಖಿಕ ಸ್ಪರ್ಧೆಯೂ ಇರುತ್ತಿತ್ತು. ಸಾಮಾನ್ಯವಾಗಿ ೧೦ ವಿದ್ಯಾರ್ಥಿಗಳಲ್ಲಿ ಇಬ್ಬರು ಮಾತ್ರ ಆಯ್ಕೆ ಯಾಗುತ್ತಿದ್ದರು. ಕೊನೆಯ ಹಂತದ ಸ್ಪರ್ಧೆಯಲ್ಲಿ ಪ್ರತಿ ವಿದ್ಯಾರ್ಥಿಯೂ ಮುಖ್ಯ ಅಧಿಕಾರಿ ನಡೆಸುವ ಪರೀಕ್ಷೆ ಯಲ್ಲಿ ತೇರ್ಗಡೆ ಹೊಂದಬೇಕಾಗಿತ್ತು. ಮಹಿಳಾ ವಿದ್ಯಾರ್ಥಿಗಳಿಗೆ ಮಹಿಳಾ ಅಧ್ಯಾಪಕರು ಇರುತ್ತಿದ್ದರು. ಇಷ್ಟೆಲ್ಲಾ ಇದ್ದರೂ ಯಾವುದೇ ಅಹಿತಕರ ಘಟನೆಗಳು ನಡೆಯುತ್ತಿರಲಿಲ್ಲ ಎಂಬುದಾಗಿ ಹುಯಿನ್ ಮತ್ತು ತ್ಸುಂಗ್ ದಾಖಲಿಸಿದ್ದಾರೆ.

**ನಳಂದದ ಅವಸಾನ**

ದೇಶದಲ್ಲಿ ರಾಜಕೀಯ ಹಿನ್ನಡೆಯಿಂದ ಗುಪ್ತರು ಮತ್ತು ಹರ್ಷವರ್ಧನರ ಆಳ್ವಿಕೆಗೆ ಧಕ್ಕೆ ಉಂಟಾಗಿ ನಳಂದ ಆಘಾತವನ್ನು ಅನುಭವಿಸಬೇಕಾಯಿತು. ಚರಿತ್ರೆಕಾರ ಪ್ರಕಾಶಬುದ್ಧನ ಪ್ರಕಾರ ಹಿಂದುಗಳು ಮಾಡಿದ ಒಂದು ಯಜ್ಞದ ಅಗ್ನಿ ಯಾಗವು ನಳಂದದ ೯ ಮಹಡಿಗಳ ಗ್ರಂಥಾಲಯ ಕಟ್ಟಡ 'ರತ್ನಬೋಧಿ' ಯನ್ನು ನಾಶಮಾಡಿತು. ಇನ್ನೊಬ್ಬ ಚರಿತ್ರೆಕಾರ ಸದಾಶಿವಂ ಹೇಳುವಂತೆ ಈ ಗ್ರಂಥಾಲಯವನ್ನು ಟರ್ಕಿಯರು, ಜೈನರ ಸಹಾಯದಿಂದ ಅಗ್ನಿಗೆ ಆಹುತಿ ಕೊಡುತ್ತಿದ್ದರು. ಇದಕ್ಕೆ ಕಲಿಕೆಯ ಭವ್ಯ ಕೇಂದ್ರದ ಬಗ್ಗೆ ಅವರು ಹೊಂದಿದ್ದ ಅಸೂಯೆ ಕಾರಣವಾಗಿತ್ತು ಎನ್ನಲಾಗಿದೆ.

೧೧೩೫ರಲ್ಲಿ ನಳಂದ ವಿಶ್ವವಿದ್ಯಾಲಯವನ್ನು ಟರ್ಕಿ ದೇಶದ ಭಕ್ತಿಯಾರ್ ಖಿಲ್ಜಿ ಕೊಳ್ಳೆ ಹೊಡೆದ. ಇದನ್ನು ಚರಿತ್ರೆಕಾರರು ಭಾರತದಲ್ಲಿನ ಬೌದ್ಧಮತದ ಅವನತಿಯ ಪ್ರಮುಖ ಹಂತವೆಂದು ಗುರುತಿಸಿದ್ದಾರೆ. ಪರ್ಷಿಯಾದ ಚರಿತ್ರೆಕಾರ ಮಿನಾಜ್–ಐ–ಸಿರಜ್ ಅವನ ಐತಿಹಾಸಿಕ ದಾಖಲೆ ಟಿಬಾಕ್ವತ್–ಐ–ನಸರಿಯಲ್ಲಿ, ಬೌದ್ಧಮತವನ್ನು ಕಿತ್ತುಹಾಕಿ ಇಸ್ಲಾಮ್ ಧರ್ಮವನ್ನು ಸ್ಥಾಪಿಸಲು ಖಿಲ್ಜಿ ಮಾಡಿದ ಪ್ರಯತ್ನದಲ್ಲಿ ಸಾವಿರಾರು ಸನ್ಯಾಸಿಗಳನ್ನು ಜೀವಂತ ಸುಡಲಾಯಿತು ಮತ್ತು ಸಾವಿರಾರು ಸನ್ಯಾಸಿಗಳ ಶಿರಚ್ಛೇದನ ಮಾಡಲಾಯಿತು ಎಂಬುದಾಗಿ ದಾಖಲಿಸಿದ್ದಾನೆ. ಟರ್ಕಿಯ ಯೋಧರು ನಳಂದದ ಅನೇಕ ಬೌದ್ಧಾಶ್ರಮಗಳನ್ನು ಕೆಡವಿ ಭಂಡಾರಗಳಲ್ಲಿದ್ದ ಪುಸ್ತಕಗಳಿಗೆ ಬೆಂಕಿ ಇಟ್ಟರು. ಒಬ್ಬ ಚೀನಿ ಚರಿತ್ರೆಕಾರನ ಪ್ರಕಾರ ಟರ್ಕಿ ಯೋಧರು ಪುಸ್ತಕಗಳು ಮತ್ತು ಕೈಬರಹಗಳನ್ನು ೬ ತಿಂಗಳ ಕಾಲ ಅಡಿಗೆ ಒಲೆಯಲ್ಲಿಟ್ಟು ಸುಟ್ಟರಂತೆ. ನಿರಂತರವಾಗಿ ಉರಿಯುತ್ತಿದ್ದ ಹೊಗೆ ಗುಡ್ಡದ ಮೇಲೆ ದಟ್ಟ ಮುಸುಕಿನಂತೆ ಆವರಿಸಿತ್ತು ಎಂಬ ದಾಖಲೆಗಳಿವೆ. ಮುಸಲ್ಮಾನರು ದಾಳಿ ಮಾಡಿದ ಕಾಲದಲ್ಲಿ ಅನೇಕ ವಿದ್ಯಾರ್ಥಿಗಳು, ಭಿಕ್ಷುಗಳು ಓಡಿಹೋದರು. ಕೆಲವರನ್ನು ಹಿಡಿದು ಕೊಲ್ಲಲಾಯಿತು.

ಪರ್ಷಿಯನ್ ಚರಿತ್ರೆಕಾರ ಮಿನಾರ್ಖ್ ಕ್ರಿ. ಶ. ೧೨೪೫ರಲ್ಲಿ ಇದೇ ವಿಷಯವನ್ನು ದಾಖಲಿಸಿದ್ದಾನೆ. ಚೀನಿ ಮತ್ತು ಟಿಬೆಟಿಯನ್ ಭಿಕ್ಷುಗಳು ಹೊತ್ತೊಯ್ದ ಕೃತಿಗಳು ಮತ್ತು ಕೈಬರಹಗಳು ಇಂಗ್ಲಿಷ್‌ಗೆ ಅನುವಾದ ಗೊಂಡವು. ಹಾಗೆ ಚರಿತ್ರೆಕಾರರ ದಾಖಲೆಗಳಿಂದ ನಳಂದದ ಜ್ಞಾನ ಭಂಡಾರ ಸ್ವಲ್ಪಮಟ್ಟಿಗೆ ಉಳಿದು ಕೊಂಡಿತು. ೧೯೧೫–೩೭ ಮತ್ತು ೧೯೭೪–೮೨ರ ನಡುವೆ ನಡೆದ ಉತ್ಖನನದಿಂದ ಆರು ಬೃಹತ್ ಇಟ್ಟಿಗೆ ಮಂದಿರಗಳು, ಹನ್ನೊಂದು ಬೌದ್ಧಾಶ್ರಮಗಳನ್ನು ಗುರುತಿಸಲಾಯಿತು. ಜೊತೆಗೆ ಬುದ್ಧನ ಹಲವು ರೀತಿಯ ಮೂರ್ತಿಗಳು ದೊರಕಿದವು. ಮುಖ್ಯವಾಗಿ ಆವಲೋಕಿಟೇಶ್ವರ, ಮಂಜುಶ್ರೀ, ತಾರಾ, ಪ್ರಜ್ಞಪರಮಿತ, ಮಾರೀಚೀ, ಜಂಭಾಲಾ ಇತ್ಯಾದಿ. ಬುದ್ಧನ ಮೂರ್ತಿಯ ಜೊತೆಗೆ ವಿಷ್ಣು, ಶಿವ–ಪಾರ್ವತಿ, ಮಹಿಷಾಸುರ–ಮರ್ದಿನಿ, ಗಣೇಶ, ಸೂರ್ಯನ ಮೂರ್ತಿಗಳೂ ಇದ್ದವು. ಭಿತ್ತಿಚಿತ್ರಕಲೆ, ತಾಮ್ರ ಶಾಸನಗಳು, ಕಲ್ಲು–ಇಟ್ಟಿಗೆಗಳ ಮೇಲಿನ ಕೆತ್ತನೆ, ನಾಣ್ಯಗಳು, ಮಡಿಕೆ–ಕುಡಿಕೆ ಮತ್ತು ಮಣ್ಣಿನ ಗೊಂಬೆಗಳು ದೊರಕಿದವು.

ನಳಂದ ಮಾದರಿಯ ಯೋಜನೆಯನ್ನು ಕಟ್ಟಿ ಬೆಳೆಸಲು 'ನಳಂದ ಮಹಾವಿಹಾರ' ಎಂಬ ಹೆಸರಿನಲ್ಲಿ ೧೯೫೧ರಲ್ಲಿ ಡಾ॥ ರಾಜೇಂದ್ರ ಪ್ರಸಾದ್ ಅವರು ಭೋದ್‌ಗಯಾಗೆ (ಅಂದಿನ ಪಾಟಲಿಪುತ್ರ ) ೧೦೦ ಕಿ. ಮೀ. ದೂರದಲ್ಲಿ ಅಡಿಪಾಯ ಕಲ್ಲನ್ನು ಹಾಕಿದ್ದರು. ಏಷ್ಯಾದ ಅತ್ಯಂತ ಜನಪ್ರಿಯ ವಿಶ್ವವಿದ್ಯಾಲಯ ನಳಂದ ಹೊಸ ರೂಪ ಪಡೆದುಕೊಂಡು ಸೆಪ್ಟೆಂಬರ್ ೧, ೨೦೧೪ರಲ್ಲಿ ಪ್ರಾರಂಭಗೊಂಡಿದೆ. ಮೊದಲನೇ ವರ್ಷದಲ್ಲಿ ಕೇವಲ ೧೫ ವಿದ್ಯಾರ್ಥಿಗಳು ಮತ್ತು ೧೧ ಅಧ್ಯಾಪಕರೊಂದಿಗೆ ತರಗತಿಗಳು ಪ್ರಾರಂಭವಾಗಿ ಕೇಂದ್ರ ಸರಕಾರ ಈ ವಿಶ್ವವಿದ್ಯಾಲಯವನ್ನು ಕಟ್ಟಲು ೨,೭೦೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಿದೆ. ಈ ವಿಶ್ವವಿದ್ಯಾಲಯ ಮುಂದಿನ ದಿನಗಳಲ್ಲಿ ಹೇಗೆ ತನ್ನ ಹೆಜ್ಜೆಗಳನ್ನು ಇಡುತ್ತದೋ ಕಾದು ನೋಡಬೇಕಿದೆ.

**ಡಾ॥ ಎಂ. ವೆಂಕಟಸ್ವಾಮಿ**
ನಂ. ೨೦೬, ಜೆ. ಜೆ. ಎಲಿಟಾ ಅಪಾರ್ಟ್‌ಮೆಂಟ್
ನ್ಯಾನಪ್ಪನಹಳ್ಳಿ ಬನ್ನೇರುಘಟ್ಟ ರಸ್ತೆ, ಬೆಂಗಳೂರು–೫೬೦೦೬೮

"ಮೌನ ಅಂದರ ಏನು ? ಅಂತ ಕೇಳಿದರ್‌s ? ಮೌನನ ಅಂತ ಹೇಳಬೇಕಾಗತೈತಿ ಅಜ್ಜಿ. ಹಿಂದs ಒಬ್ಬ ವಿದ್ಯಾರ್ಥಿ ಬುದ್ಧನಿಗೆ, ಒಮ್ಮೆ ಇದs ಪ್ರಶ್ನೆ ಕೇಳಿದನಂತ. ಬುದ್ಧ ಏನೂ ಮಾತಾಡದಹಂಗ ಸುಮ್ಮನs ಇದ್ದನಂತ. ಅಂದರ ಬುದ್ಧ ತನ್ನ ವಿದ್ಯಾರ್ಥಿ ಕೇಳಿದ ಪ್ರಶ್ನೆಗೆ ಮೌನದಿಂದನ ಉತ್ತರ ಹೇಳಿದ್ದ."

"ಹೂಂ ಹಿಂಗನs, ಹಂಗರ ಮೌನಾನೂ ಮಾತಾಡತೈತಿ ಅಂದಹಂಗ ಆತಲ್ಲ ?" ಅಂತ ಅಜ್ಜಿ ಕೇಳಿದ್ದಳು. "ಹೌದು. ಮೌನ ಒಂದು ಭಾಷೆ. ಈ ಭಾಷೆಗೆ ಶಬ್ದಭಂಡಾರ ಇಲ್ಲ. ವ್ಯಾಕರಣ ಇಲ್ಲ. ಛಂದಸ್ಸು ಇಲ್ಲ. ಮೌನ ಯಾವ ಭಾಷೆಯಲ್ಲೂ ಪ್ರಕಟ ಆಗಬಹುದು. ಪ್ರಕಟ ಆಕೈತಿ. ಆಯಾ ಭಾಷೆಯ ಎಲ್ಲ ಪ್ರಕಾರಗಳನ್ನೂ ಅದು ಉಪಯೋಗಿಸತೈತಿ. ಇದು ಒಂದು ಭಾರೀ ಶಕ್ತಿಯುತ ಭಾಷೆ. 'ಮೌನ ಅನಂತದ ಭಾಷೆ' ಅಂತ ರವೀಂದ್ರನಾಥ ಠ್ಯಾಗೋರ ಅವರು ಹೇಳ್ಯಾರ. ಮೌನದ ಭಾಷೆಯೊಳಗ ಶಬ್ದಗಳ ಅಬ್ಬರಕ್ಕಿಂತಲೂ, ವಾಕ್‌ಶಕ್ತಿ ಹೆಚ್ಚ ಐತೆಂತ. ಮೌನದ ಶಕ್ತಿನs ಅನುಭವಿಸಿ ನೋಡಬೇಕು. ಮೌನಕ್ಕ ಅಳತಿ ಇಲ್ಲ. ಉದ್ದ ಇಲ್ಲ. ಅಗಲ ಇಲ್ಲ. ಇದಕ ಎತ್ತರ ಇಲ್ಲ."

# ಮಾತು ಮೌನಕ್ಕೆ ತಿರುಗಿದಾಗ

**ನಾ**ನು ಒಮ್ಮೆ ಹಳ್ಳಿಗೆ ಹೋದಾಗ ನನ್ನ ಅಜ್ಜಿ ಕೇಳಿದ್ದಳು.

"ಅಲ್ಲ ಪುಟ್ಟು, ನೀ ಏನ ಕೆಲಸ ಮಾಡತೀದಿ ?" ಅಂತ. ನನಗ ಏನ್ ಹೇಳಬೇಕು ? ಅನ್ನೋದs ಹೊಳೀಲಿಲ್ಲ.

ಸ್ವಲ್ಪ ಹೊತ್ತ ಬಿಟ್ಟು, "ಅಜ್ಜಿ, ನಾನು ಕಾಲೇಜದಾಗ ಪ್ರೊಫೆಸರ್ ಅದೇನಿ" ಅಂದೆ. ಕಾಲೇಜದಾಗ ಪ್ರೊಫೆಸರ ಇದ್ರೂನು ನಮ್ಮ ಅಜ್ಜಿಗೆ ನಾನು ಪ್ರೀತಿಯ ಪುಟ್ಟು ಆಗಿದ್ದೆ.

"ಹಂಗ ಅಂದರ ಏನಲಾ ಪುಟ್ಟ! ನೀ ಅಲ್ಲೆ ಮಾಡದರ ಏನು ?" ಅಂತ ಅಜ್ಜಿ ಕುತೂಹಲದಿಂದ ಮತ್ತೊಂದು ಪ್ರಶ್ನೆ ಕೇಳಿದ್ದಳು.

"ಏನಿಲ್ಲ ಅಜ್ಜಿ, ಕಾಲೇಜಕ ಹೋಗತೀನಿ. ಒಂದ ನಾsಕ್ ತಾಸ ಮಾತಾಡತೀನಿ. ಆಮೇಲೆ ಮನಿ ಕಡೆ ಹೊರಡತೀನಿ." ಅಂದೆ. ಅಜ್ಜಿ ಹಳ್ಳ್ಯಾಗ ಹುಟ್ಟಿ ಅಲ್ಲೇ ಬೆಳೆದವಳು. ಶಾರಕ ಬಾ ಬಾ ಅಂದರೂನು, ತನ್ನ ಹಳ್ಳಿ ಮನಿ ಬಿಟ್ಟು ಹೊರಗ ಹೆಜ್ಜಿ ಇಟ್ಟಾಕಿ ಅಲ್ಲ. ಅಲ್ಲೇ ಹಳ್ಳ್ಯಾಗ ಕುತಗೋಂಡು ಎಲ್ಲಾರ ಕಾಳಜಿ ಮಾಡಾಕಿ.

"ಹೂಂ, ನೀ ಹೇಳಿದ್ದು ತಿಳಿತು ಬಿಡು. ನಿನಗ ಅಲ್ಲೆ ಮಾತಾಡಾಕ ಇಟಗೊಂಡಾರ ಅಂದಹಂಗ ಆತು ! ನಿನಗ ಮಾತಾಡಾಕ ಪಗಾರ ಕೋಡತಾರೇನ ತಮ್ಮ ?" ಅಂದ್ಲು.

"ಹೌದಬೇ ಅಜ್ಜಿ. ಇತ್ತಿತ್ತಲಾಗಿ ಛಂದಗಿ ಮಾತಾಡೋದು ಕಲತ ಬಿಟ್ರ, ದೊಡ್ಡ ದೊಡ್ಡ ಕಂಪನಿಯೊಳಗ ಕೈತುಂಬ ಪಗಾರ ಕೊಟ್ಟು, ಕೆಲಸಕ ತಗೋತಾರ" ಅಂದೆ.

"ಏನ ಬಿಡಪಾ, ಈಗ ಕಾಲಾನs ಬದ್ಲ ಆಗೇತಿ" ಅಂತ ಸುಮ್ಮನಾದ್ಲು.

ನಮ್ಮ ಅಜ್ಜಿ ಭಾಳ ಮೂಡೀರಿ. ಅಕಿ ಸುಮ್ಮನs ಇದ್ರೂನೂ ಒಳಗೊಳಗ ವಿಚಾರ ಮಾಡಿಕೋತನ ಇರತಾಳ. ಒಮ್ಮೆಲೇ "ಅಲ್ಲ ಪುಟ್ಟ, ನಿನ ತಮ್ಮ, ಅದs ನಿಮ್ಮ ಕಾಕಾನ ಮಗ ಪ್ರಶಾಂತಗೂನೂ ಅಂತಾದೊಂದು ನೌಕರಿ ಕೊಡಿಸಿಬಿಡಪಾ. ಅವನೂ ನಿನ್ನ ಹಂಗ ಪ್ರೊಫೆಸರ ಆಗತಾನಂತ." ಅಂದ್ಲು.

"ಏನಂದಿಬೇ ? ಆ 'ಸುಪರ್ ಫಾಸ್ಟ ಎಕ್ಸಪ್ರೆಸ್ಸ' ಪ್ರಶಾಂತ, ಪ್ರೊಫೆಸರ್ ಆಗತಾನಂತ ?' ಬೇಶಾತ್ ಬಿಡಬೆ, ಅಂವ ಕಲಿಸಿದವರೆಲ್ಲ ಉದ್ಧಾರ ಆದ್ಹಂಗಾತು." ಅಂದೆ.

"ಯಾಕಲಾ ಪುಟ್ಟು, ಯಾಕ ? ಅಂವ ಪ್ರೊಫೆಸರ ಆಗಬಾರದೇನು ?" ಅಂತ ಪ್ರಶ್ನೆ ಹಾಕಿದ್ದಳು.



"ಅಲ್ಲಬೇ ಅಜ್ಜಿ, ಈಗ ಹೇಳಿದೆನಲ್ಲ ನಿನಗ, ಪ್ರೊಫೆಸರ ಅಂದರ ಬರೇ ಮಾತಾಡೋ ಕೆಲಸ ಅಂತ. ಸುಮ್ಮನ ನಮ್ಮ ಪ್ರಶಾಂತನ್ಹಂಗ, ಉದ್ದಕ ಬಿಟ್ಟೂಬಿಡದ ಮಾತಾಡಿದರ ಕೇಳೋರಿಗೆ ತಿಳೆಂಗಿಲ್ಲ. ಮಾತಿನ ಮಧ್ಯ ಮೌನಾನೂ ಇರಬೇಕು" ಅಂದಾಗ ನಮ್ಮ ಅಜ್ಜಿ ಮುಖ ಸಪ್ಪೆ ಆತು.ಮೌನ ಅಂದರ ಏನಲಾ ? ಅಂತ ಕೇಳಿದ್ದಳು.

"ಮೌನ ಅಂದರ ಏನು ? ಅಂತ ಕೇಳಿದರ್s ? ಮೌನನ ಅಂತ ಹೇಳಬೇಕಾಗತೈತಿ ಅಜ್ಜಿ. ಹಿಂದs ಒಬ್ಬ ವಿದ್ಯಾರ್ಥಿ ಬುದ್ಧನಿಗೆ, ಒಮ್ಮೆ ಇದs ಪ್ರಶ್ನೆ ಕೇಳಿದನಂತ. ಬುದ್ಧ ಏನೂ ಮಾತಾಡದಹಂಗ ಸುಮ್ಮನs ಇದ್ದನಂತ. ಅಂದರ ಬುದ್ಧ ತನ್ನ ವಿದ್ಯಾರ್ಥಿ ಕೇಳಿದ ಪ್ರಶ್ನೆಗೆ ಮೌನದಿಂದನ ಉತ್ತರ ಹೇಳಿದ್ದ."

---

**ಪ್ರೊ॥ ಆರ್. ಪಿ. ಪುನಗಿನ**

"ಹೂಂ ಹಿಂಗನs, ಹಂಗರ ಮೌನಾನೂ ಮಾತಾಡತೈತಿ ಅಂದಹಂಗ ಆತಲ್ಲ ?" ಅಂತ ಅಜ್ಜಿ ಕೇಳಿದ್ದಳು. "ಹೌದು. ಮೌನ ಒಂದು ಭಾಷೆ. ಈ ಭಾಷೆಗೆ ಶಬ್ದಭಂಡಾರ ಇಲ್ಲ. ವ್ಯಾಕರಣ ಇಲ್ಲ. ಛಂದಸ್ಸು ಇಲ್ಲ. ಮೌನ ಯಾವ ಭಾಷೆಯಲ್ಲೂ ಪ್ರಕಟ ಆಗಬಹುದು. ಪ್ರಕಟ ಆಕ್ಕೈತಿ. ಆಯಾ ಭಾಷೆಯ ಎಲ್ಲ ಪ್ರಕಾರಗಳನ್ನೂ ಅದು ಉಪಯೋಗಿಸತೈತಿ. ಇದು ಒಂದು ಭಾರೀ ಶಕ್ತಿಯುತ ಭಾಷೆ. 'ಮೌನ ಅನಂತದ ಭಾಷೆ' ಅಂತ ರವೀಂದ್ರನಾಥ ಠ್ಯಾಗೋರ ಅವರು ಹೇಳ್ಯಾರ. ಮೌನದ ಭಾಷೆಯೊಳಗ ಶಬ್ದಗಳ ಅಬ್ಬರಕ್ಕಿಂತಲೂ, ವಾಕ್‌ಶಕ್ತಿ ಹೆಚ್ಚ ಐತೆಂತ. ಮೌನದ ಶಕ್ತಿನs ಅನುಭವಿಸಿ ನೋಡಬೇಕು. ಮೌನಕ್ಕ ಅಳತಿ ಇಲ್ಲ. ಉದ್ದ ಇಲ್ಲ. ಅಗಲ ಇಲ್ಲ. ಇದಕ ಎತ್ತರ ಇಲ್ಲ." ಅಂದಾಗ ಅಜ್ಜಿ, "ಅಂದರ ಇದು ಭೌತಿಕ ವಸ್ತು ಅಲ್ಲ ಅಂದ್ಹಂಗಾತು. ಇದು ಹವಾ ಇದ್ದಹಂಗ ಅಂತೀಯೇನು ? ಯಾವ ಪಾತ್ರೆಯೊಳಗಿದ್ರೂನೂ ಆ ಪಾತ್ರೆ ತುಂಬ ತುಂಬಿರ್‍ತೈತಿ. ಅದು ಹೆಂಗ ಅಂತ ತಿಳ್ಕೋಬೇಕಲ್ಲ ಪುಟ್ಟ" ಅಂದ್ಲು.

"ಅದನ್ನ ತಿಳಕೊಳ್ಳೋದರೊಳಗs ಮಜ ಐತಿ ಅಜ್ಜಿ. ಹೇಳತೀನಿ ಕೇಳು. ಮೌನ ಮನೀ ತುಂಬs ತುಂಬಕೋಬಹುದು. ಹಳ್ಳೀ ತುಂಬs ತುಂಬಕೋ ಬಹುದು. ದೇಶದ ತುಂಬನೂ ಒಂದೊಂದು ಸಲ ಮೌನ ತುಂಬಿರತೈತಿ ಅನ್ನೋದು ನಮಗೆಲ್ಲ ಗೊತ್ತೈತಿ."

## 'ಕಿಡಿ ಚಿಂತನೆ'

'ಧರ್ಮದ ವಿಷಯದಲ್ಲಿ ಜಗತ್ತು ಅಸ್ವಸ್ಥ...!!

ಧರ್ಮಗುರುಗಳು

ಹಗಲಿರುಳೂ ಅರಿಯುತ್ತಿದ್ದಾರೆ ಮದ್ದು...!!!

ಪಾಪ ಅವರಿಗೆ ಗೊತ್ತಿಲ್ಲ...

ಅರಿಯುತ್ತಿರುವುದು ಮದ್ದಲ್ಲ...

ಸಿಡಿಮದ್ದೆಂದು...!!?'

ಮಹಾಲಿಂಗ ಪೋಳ
ಬಾಗಲಕೋಟೆ

"ಹೌದ ಬಿಡ ಪುಟ್ಟ, ಅದು ನನಗ ಗೊತ್ತೈತಿ. ನೆನಪಾತು, ಅವತ್ತ ನೀನು ಲಂಡನ್‌ಗೆ ಹೋಗ್ತೀನಿ ಅಂತ ಹೋದಾಗ, ಆ ವಿಮಾನ ಅಪಘಾತಕ್ಕೀಡಾಗಿ ಎಲ್ಲಾರು ತೀರಿಹೋಗಿದ್ದರು ಅಂತ ಸುದ್ದಿ ತಿಳುದು, ನಮ್ಮ ಮನಿ ಮತ್ತ ಇಡೀ ಹಳ್ಳಿ ತುಂಬs ಮೌನ ತುಂಬಿತ್ತಲ್ಲಪಾ. ಹೋಗೋದ್ರಾಗs ಲೇಟಾಗಿತ್ತು, ವಿಮಾನ ತಪ್ಪಿತು ಅಂತ ನೀ ತಿರುಗಿ ಹಳ್ಳಿಗೆ ಬಂದಾಗ, ನೀನs ನೋಡಿದ್ದೆಲ್ಲ, ಪೂರಾ ಹಳ್ಳಿ ತುಂಬ ಮೌನ ಆವರಿಸಿತ್ತಲ್ಲೋ ಬಾಳಾ. ನೀ ಹೇಳೋದು ಖರೆ ಐತಿ ಬಿಡು."

"ಅಜ್ಜೀ, ಇನ್ನೂ ಹೇಳ್ತೀನಿ ಕೇಳಿಲ್ಲೆ. ಲಕ್ಷ್ಯ ಕೊಟ್ಟು ಕೇಳಾ ಮತ್ತ ! ಮೌನ ಬರಿ ದುಃಖದ ಪ್ರಸಂಗದೊಳಗ ಮಾತ್ರ ಪ್ರತ್ಯಕ್ಷ ಆಕ್ಕೈತಿ ಅಂತ ಅಲ್ಲ. ಇದು ಪರಸ್ಪರ ಸಂಬಂಧ ಗಟ್ಟಿ ಮಾಡೋದ್ರಾಗೂನೂ ಪ್ರಮುಖ ಪಾತ್ರ ವಹಿಸತೈತಿ. ಇಬ್ಬರು ಪ್ರೇಮಿಗಳು ಏಕಾಂತದೊಳಗ, ಸರಸಸಲ್ಲಾಪದೊಳಗ ತೊಡಗಿದರ ಮುಗೀತು. ಅವರ ಕಣ್ಣು ಕುರುಡಾಗತಾವು. ನಾಲ್ಕೂ ಕಣ್ಣು ಸಾವಕಾಶ ಅವರಿಗೆ ಗೊತ್ತಾಗದ್ಹಂಗs ಮುಚಗೋತಾವು. ಎರಡೂ ಮನಸು ಆಕಾಶದಷ್ಟು ವಿಶಾಲ ಆಗತಾವು. ವಿಷಯಗಳ ಕೊಂಡಿ ಮಿತಿ ಇಲ್ಲದ್ಹಾಂಗ ಬೆಳೀತಾವು. ಮಾತು ಬೆಳದ ಬೆಳದ ಮುತ್ತು ಆಗತಾವು. ಜೀವ ಜೀವ ಬೆರೀತಾವು. ಪ್ರೇಮ ಪರಾಕಾಷ್ಠತೆ ಮುಟ್ಟಿತೂ ಅಂದರ... ಮೌನ ಪ್ರಕಟ ಆಗತೈತಿ. ಮತ್ತ, ಅಪ್ಪುಗೆ ಬಿಡಸಲಾರದಷ್ಟು ಬಿಗಿ ಆಗತೈತಿ. ಸಂತೋಷದ ಚಿಲುಮಿ ಪುಟತೈತಿ. ಅಂದಾಗ, "ಎಲಾ ನನ ಮೊಮ್ಮಗನs, ಏನ್ ಬೆರ್‍ಕೆಲಾ ನೀನು !! ಆರ್ ಹಡದಾಕಿ ಮುಂದ ಮೂರ್ ಹಡದಾಕಿ ಮುರಕಾ ಮಾಡಿದ್ಹಂಗ್ ಆತ್ ಬಿಡು ಇದು. ಪುಟ್ಟs, ಹೇಳತಿನಿ ಕೇಳಿಲ್ಲೆ, ಸಕ್ಕರೀ ರುಚಿ, ಹಂಗ ತಿಳೆಂಗಿಲ್ಲ, ತಿಂದ್ರ ಗೊತ್ತಾಗೋದು." ಅಂದು ಮುಗುಳ್ನಕ್ಕು, ನಾನು ಹೊಟ್ಟಿ ಹುಣ್ಣಾಗೋಹಂಗ ನಕ್ಕಿದ್ದೆ. "ಮೌನಕ್ಕ ಈಟೊಂದು ಶಕ್ತಿ ಐತಿ ಅಂತ ಇವತ್ತ ತಿಳೀತು ಬಿಡು ಪುಟ್ಟ" ಅಂದ್ಲು.

"ಶಕ್ತಿ ಅಂದ್ರ ನೆನಪಾತ ನೋಡಜ್ಜಿ, ಸಮಾಜದೊಳಗ ಮೇಲುಕೀಳುಗಳ ತಾಕಲಾಟ ನೂರಾರು ವರ್ಷಗಳಿಂದ

## ಸ್ಥಿತ್ಯಂತರ






ಮೊದಲು...
ಮಾತಿಗೆ ಕೂತರೆ
ಘಳಿಗೆಗಳಿಗೂ ಬೇಸರ
ಎದೆಬಿಚ್ಚಿ ಹಗುರಾಗುವ
ನೂರೆಂಟು ನೋವುಗಳು
ಪುಟ್ಟ ಸಾಧನೆಗೂ
ಬೆನ್ನು ತಟ್ಟುವ ಪ್ರಾಂಜಲತೆ
ಅರೆಕ್ಷಣ ಮರೆಯಾದರೂ
ವಿಲವಿಲಗೊಳ್ಳುವ ಒಲವು

ಮೊದಲು...
ಹೆಜ್ಜೆಯೊಡನೆ ಹೆಜ್ಜೆ ಬೆರೆತು
ತೋಳ್ಬಲ ತುಂಬುವ ಹುರುಪು
ಕನಸಿಗೂ ರೆಕ್ಕೆ ಮೂಡಿಸಿ
ಬಾನೆತ್ತರ ಚಿಮ್ಮುವ ಬಯಕೆ
ಕುಸಿದು ಕೂತ ಕ್ಷಣಗಳಲ್ಲಿ
ಸದಾ ಹೆಗಲಿಗೆ ಹೆಗಲು
ಮಾತು ಮುನಿಸಿಕೊಂಡಾಗಲೆಲ್ಲ
ಕ್ಷಮೆಯ ಸಾಲು ಸಾಲು

ಈಗ...
ಮೌನದ್ದೇ ದರಬಾರು
ಮೇಲೇರುವ ಕಾಲುಗಳ
ಕೆಳಗೆಳೆಯುವ ಕೈಗಳು
ಒಳಗೊಳಗೆ ಹೆಪ್ಪುಗಟ್ಟುವ
ದುಃಖದ ಮಡುವು
ಬೆನ್ನಿಗಿರಿದ ಚೂರಿಯೂ
ಮಮ್ಮಲ ಮರುಗುವಂತೆ
ಜಿನುಗುವ ತಣ್ಣನೆ ಕ್ರೌರ್ಯ

ಈಗ...
ನೆನಪುಗಳ ನಿರಂತರ ಶವಯಾತ್ರೆ
ಜಾಣ ಮರೆವಿನ ನೆಪ
ಕಡಿದು ತುಂಡಾದ ಬಂಧ
ಪರಸ್ಪರ ವಿಮುಖ ದಾರಿಗಳು
ಆರೋಪದ ಸುರಿಮಳೆ
ಹೊತ್ತಿ ಉರಿವ ಹಗೆಯ ಬೆಂಕಿ
ಒಡೆದ ಮನದ ಕನ್ನಡಿಯ ತುಂಬ
ಚೂರು ಚೂರಾದ ಬಿಂಬಗಳು!

ನಾಗೇಶ್ ಜೆ. ನಾಯಕ
ಶಿಕ್ಷಕರು, ಶ್ರೀ ರಾಮಲಿಂಗೇಶ್ವರ ಹೈಸ್ಕೂಲ್ ಉಡಿಕೇರಿ
ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ

ನಡೆದು ಬಂದದ್ದು, ನನಗಿಂತ ನಿನಗ ಹೆಚ್ಚು ಗೊತ್ತೈತಲ್ಲಬೆ. ಮುಂದುವರಿದ ಜನಾಂಗದ ತುಳಿತಕ್ಕ ಸಿಕ್ಕು ತೊಳಲಾಡುವಂಥ ಹೃದಯಗಳ ಮೌನ ಒಳಗ ಕುದೀತಿರತೈತೆಂತ. ಎಲಿವಿಲಿ ಒದ್ದಾಡಿ ಒಮ್ಮೆ ತಾಳ್ಮೆಯ ಕಟ್ಟೆ ಒಡೀತೂ ಅಂದ್ರ, ನೊಂದ ಹೃದಯಗಳ ಮೌನ, ಅವರ ರಟ್ಟೆಗೆ ಶಕ್ತಿ ಕೊಡತೈತೆಂತಬೇ. ಸಂತೋಷ ಪಡುವಂಥ ಹೃದಯಗಳಿಗಿಂತ, ಬಹಳಷ್ಟು ಕಾಲ ಬವಣೆಯಿಂದ ಬಳಲುವ ಹೃದಯಗಳ ಮೌನ, ನೂರಾರು ಪಟ್ಟು ಹೆಚ್ಚು ಶಕ್ತಿಯನ್ನ ಶೇಖರಿಸತೈತಂತ ನೋಡಬೆ. ಇಂಥ ಮೌನ, ಕ್ರಾಂತಿಯ ರೂಪ ಪಡಕೊಂಡಿದ್ದ ಉದಾಹರಣೆಗಳು ಸಾಕಷ್ಟು ಅದಾವಲ್ಲಬೆ. ಅದು ಹೃದಯಗಳ ಮೌನದ ಶಕ್ತಿ."

"ಹೌದ ಪುಟ್ಟು, ಮೌನ ಶರಾವತಿ ಇದ್ದಹಂಗ. ಹರಿವಾಗ ಭಾಳ ಶಾಂತ. ಜೋಗದಾಗ ಭೋರ್ಗರಿವಾಗ ಭಾಳ ಗಂಭೀರ" ಅಂದಾಗ, "ಭಲೇ ಅಜ್ಜಿ, ನಿನ್ನ ಅನುಭವದ ಮುಂದ ನಮ್ಮ ಡಿಗ್ರೀನ ನಿವಾಳಿಸಿ ಒಗಿಬೇಕು ಬಿಡು" ಅಂತ ನಾ ಅಂದಿದ್ದೆ. ನಮ್ಮ ಅಜ್ಜಿ ಜೊತೆಗೆ, ಇಂಥ ಗಹನ ವಿಷಯದ ಚರ್ಚೆ ಮಾಡೋದು, ನನಗ ಭಾಳ ಖುಷಿ ಕೊಡತೈತ್ರಿ. ಯಾಕಂದರ ಅನುಭವದಾಗ ಅಮೃತ ಇರತೈತಿ ನೋಡ್ರಿ.

"ಇಲ್ಲೆ ಹೇಳ್ತಿನಿ ಕೇಳ ಅಜ್ಜಿ, ಪ್ರಕೃತಿಗೂ ಸಹಿತ ಮೌನ ಭಾಳ ಪ್ರೀತಿ ಅಂತ ಹೇಳತಾರ ನೋಡು. ಹೂವು, ಹಸಿರು, ಗಿಡ, ಮರ ಮಾತಾಡದಿದ್ದರೂ ಮೌನವಾಗೇನ ಬೆಳೀತಾವಲ್ಲಬೆ! ಪ್ರಕೃತಿಯೊಳಗ ಗಿಡ, ಮರ, ಹೂವು, ಹುಲ್ಲು ನಮಗರಿವಿಲ್ಲದ್ಹಂಗ ಶಾಂತವಾಗಿ ಬೆಳೆಯೋದನ್ನ, ಮತ್ತ ಭೂಮಿ, ಸೂರ್ಯ, ಚಂದ್ರ, ಚುಕ್ಕೆಗಳು ಮೌನವಾಗಿ ಸರಿಯೋದನ್ನ ಕೆಲವರು ಮಾತ್ರ ಗುರುತಿಸತಾರಲ್ಲ ?" ಅಂದಾಗ, ಅಜ್ಜಿ ಅಂದ್ಲು, "ನೀ ಹೇಳೋದು ಖರೆ ಐತಿ, ಅದಕ ಹೇಳತಾರ ಪುಟ್ಟ, ಈ ಸತ್ಯನ ಮದರ್ ಥೆರೆಸಾ ಚನ್ನಾಗಿ ತಿಳಕೊಂಡಿದ್ದರಂತ. ಅವರಿಗೆ, ನೊಂದ ಹೃದಯಗಳ ಮೌನ ಅರ್ಥವಾಗಿತ್ತು. ಅದಕ ಅವ್ರು ದೀನ ದಲಿತರ ಸೇವಾ ಮಾಡಿ, ಜಗತ್ತಗೇ ತಾಯಿ ಅನಿಸಿಕೊಂಡ್ಲು ನೋಡು" ಅಂದ್ಲು.

"ಇಲ್ಲೆ ಕೇಳ ಅಜ್ಜಿ . ಪ್ರಶಾಂತವಾದ ಪ್ರಕೃತಿಯೊಳಗ ಕುಂತು ಧ್ಯಾನ ಮಾಡುವವರ ಮೌನ ಇನ್ನೊಂದು ತರಹದ್ದು. ಹೊರಜಗತ್ತಿನೊಂದಿಗೆ ಸಂಪರ್ಕ ಕಲ್ಪಿಸುವ ಕಣ್ಣು, ಕಿವಿಗಳನ್ನ ಮೊದಲು ಮುಚ್ಚಿ, ಧ್ಯಾನಕ್ಕೆ ಕುಳಿತವರು, ಹೊರಗಿನ ಸಂಪರ್ಕ ಕಡಕೊಳ್ಳತಾರ. ಮನಸ್ಸಿನ ವಿಚಾರಸರಣಿಗಳಿಗೆ ವಿರಾಮ ಕೊಡತಾರ, ಅವಾಗ ಅಂತರ್ ಮುಖದ ಮೌನ ಎಚ್ಚರಾಗತದ. ದೇಹ, ಮನಸ್ಸು, ಬುದ್ಧಿಗಳ ಪ್ರವಾಸ ಮತ್ತೊಂದು ಜಗತ್ತಿಗೆ ಧ್ಯಾನಿಗಳನ್ನು ಕರೆದೊಯ್ತದ, ಮೌನ ಪರಾಕಾಷ್ಠೆ ಮುಟ್ಟಿತೂ ಅಂದ್ರ ದೇಹವೆಲ್ಲ ಅರಳೆಯಂತಾಗಿ, ಆಕಾಶದೊಳಗ ತೇಲಾಡು ವಂತಾಗ್ತದ. ಇಂತಹ ಮೌನ ಅಂತಃಶಕ್ತಿಯನ್ನು ವೃದ್ಧಿ ಮಾಡ್ತದ. ಮೌನ ಪ್ರಾರ್ಥನೆಯೊಳಗ, ಶಬ್ದಗಳ ಉಚ್ಚಾರಣೆ ಇರೋದಿಲ್ಲ. ವಿಚಾರಗಳ ತಾಕಲಾಟ ಗಳಿರೋದಿಲ್ಲ. ಇಲ್ಲಿ ಹೇಳುವದೆಲ್ಲವೂ ಮೌನಮಯ ವಾಗಿರ್ತದ. ಅದರೊಳಗ, ಪ್ರಾರ್ಥನೆಗಳಿರಬಹುದು, ಭಕ್ತಿಗೀತೆಗಳಿರಬಹುದು, ಮಂತ್ರಗಳಿರಬಹುದು. ಮೌನ ಮೌನದೊಂದಿಗೆ ಮಾತನಾಡುವಾಗ ಮಾತ್ರ ಸಂಪೂರ್ಣ ಪರಿವರ್ತನೆ ಸಾಧ್ಯವಾಗೋದು ಮತ್ತು ಅದನ್ನು ಮುನಿಗಳು ಮಾತ್ರ ಅನುಭವಿಸಲು ಸಾಧ್ಯ." ಅಂದಾಗ ಅಜ್ಜಿ, "ಅದಕ್ಕೇ ಹೇಳೋದು 'ಮುನಿಗಳ ಮೌನ, ಮನ ಸಂತೈಸಲು, ತನು ಸಂತೈಸಲು, ತನ್ನನ್ನು ತಾನರಿಯಲು' ಅಂದ್ಲು. "ಹೌದಜ್ಜಿ, ನೀ ಬಂಗಾರದಂತ ಮಾತು ಹೇಳಿದಿ ನೋಡು" ಅಂದಿದ್ದೆ.

ನಮ್ಮ ಅಜ್ಜಿ ಒಂದೊಂದು ಸಲ, "ನನ್ನ ಒಬ್ಬಾಕಿನs ಇರಾಕ ಬಿಡ್ರಿ" ಅಂತ ಏಕಾಂತ ಬಯಸತಾಳ. ಆದರ ಮನಸ್ಸಿನೊಳಗ ವಿಚಾರ ಮಾಡೋದನ್ನ ನಿಲ್ಲಸೋದಿಲ್ಲ. ಅಕಿ ಮೌನ ಮತ್ತ ಏಕಾಂತ ಎರಡೂ ಒಂದ ಅಂತ ತಿಳಕೊಂಡಾಳ. ಮೌನ ಬೇರೆ. ಏಕಾಂತತೆ ಬೇರೆ ಅನ್ನೋದು ನಮ್ಮ ಅಜ್ಜಿಗೆ ಗೊತ್ತಿಲ್ಲ. ಸಪ್ಪಳ ಇಲ್ಲದೇ ಇದ್ದರ ಶಾಂತಿ ಇರಬಹುದು. ಶಾಂತಿ ಇದ್ದರ ಮೌನ ಇರತೈತಿ ಅಂತ ಅಲ್ಲ. ಮೌನ ಬೇಕು ಅಂತ ಏಕಾಂತತೆಯೊಳಗ ಹುಡಕಿದರ ಅದು ಸಿಗೋ ಮಾತಲ್ಲ. ಮೌನವನ್ನು ಏಕಾಂತತೆಯೊಳಗ, ಹುಡುಕಿ ಹುಡುಕಿ ದಣಿದವರೂ, ಭಾಳ ಜನ ಅದಾರ. ಚಡಪಡಿಸಿದವರೂ ಬೇಕಾದಷ್ಟು ಉಂಟು. ಯಾಕಂದರ ಮೌನ ಮತ್ತು ಏಕಾಂತತೆ ಒಂದೇ ಆಗಲಿ ಅಥವಾ ಎರಡೂ ಆಗಲಿ, ಜೀವನದ ಮಧುರ ಕವನದ ಕಿರಣಗಳಾಗಬಹುದು ಅಥವಾ ಗಾಢಾಂಧಕಾರದ ಕತ್ತಲೆಯೂ ಆಗಬಹುದು. ಒಬ್ಬರಿಗೆ ಏಳ್ಗೆಯ ಮೆಟ್ಟಲುಗಳಾದರೆ, ಮತ್ತೊಬ್ಬರಿಗೆ ವಿನಾಶದ ಜಾರುಬಂಡೆಗಳಾಗಬಹುದು. ಮೌನ ಬಯಸುವವರು ತಮ್ಮಲ್ಲಿಯ ಋಣಾತ್ಮಕ ಗುಣಗಳನ್ನು ತ್ಯಜಿಸಿದರೆ ಮಾತ್ರ ಏಕಾಂತತೆಯಲ್ಲಿ ಮೌನವನ್ನು ಹೆಕ್ಕಿ ತೆಗೆಯಲಿಕ್ಕೆ ಸಾಧ್ಯ. ಜೀವನದ ಕಷ್ಟಕಾರ್ಪಣ್ಯದೊಳಗ, ಸದಾ ಗಜಿಬಿಜಿ, ಗದ್ದಲು ತುಂಬಿದ ಜೀವನದ ಸಂತೆಯೊಳಗ ಮೌನ ಮತ್ತ ಏಕಾಂತತೆಯನ್ನ ಹುಡಕೋದು ಅಂದರ ದೇವರನ್ನು ಹುಡುಕಿದ ಸಾಹಸ ಮಾಡಿದ ಹಂಗ. ಹೀಂಗ ಮೌನ ಮತ್ತ ಏಕಾಂತತೆಯ ಹುಡುಕಾಟದಲ್ಲಿ, ದೇವರ ಅಸ್ತಿತ್ವ ನಮ್ಮೆದುರಿಗೆ ಬಂದು ನಿಲ್ಲತೈತಿ.




ಮೌನವನ್ನಾಗಲಿ, ಏಕಾಂತತೆಯನ್ನಾಗಲಿ ಅಥವಾ ದೇವರನ್ನಾಗಲಿ ಹುಡಕಲಿಕ್ಕೆ ಕೆಲವರು ಪ್ರವಚನಕ್ಕ ಹೋಗತಾರ. ಕೆಲವರು ದೇವರ ಗುಡಿಗೆ ಹೋದರೆ, ಮತ್ತೆ ಕೆಲವರು ದೇವರಿಗೇ ಗುಡಿ ಕಟ್ಟಿಸಿ, ದೇವರನ್ನ ಒಲಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡತಾರ. ಒಂದು ಧರ್ಮ ಬಿಟ್ಟು ಮತ್ತೊಂದು ಧರ್ಮದೊಳಗ ಹುಡಕತಾರ, ಒಬ್ಬ ಗುರುವನ್ನ ಬಿಟ್ಟು ಮತ್ತೊಬ್ಬ ಗುರುವಿನ ಆಶ್ರಯ ಬಯಸತಾರ. ಆದರ, ಮೌನ ಮತ್ತ ಏಕಾಂತತೆ ದೇವರು ಕೊಟ್ಟ ವರ. ಅವೆರಡೂ ತಮ್ಮಲ್ಲಿಯೇ ಅದಾವು ಅಂತ ತಿಳಿಯುವವರೆಗೆ, ಅವರ ಪಯಣ ನಡೆದೇ ಇರತೈತಿ. ಕೆಲವರು ಇಲ್ಲೆಲ್ಲಿಯೂ ಸಿಗೋದಿಲ್ಲ ಅಂತ ಹಿಮಾಲಯ ಸೇರಿದವರೂ ಅದಾರ. ಇದನೆಲ್ಲ ನಮ್ಮ ಅಜ್ಜಿಗೆ ಹೇಳಿದರ, "ಹೊಗ ಪುಟ್ಟು, ನೀ ಏನೇನರ ಹೇಳಬ್ಯಾಡಪಾ. ಏನ ಕಲತಾಂವ ಅಂತ ನಿನ ಕೂಡ ಯಾವಾಗರ ಸ್ವಲ್ಪ ಮಾತಿಗೆ ಹತ್ತಿದರ ಸಾಕು. ನೀ ಪುರಾಣಾನ ಚಾಲು ಮಾಡತೀಪಾ. ಮೌನ ಸಿಗದಿಲ್ಲ. ಶಾಂತಿ ಸಿಗದಿಲ್ಲ ಮತ್ತ ದೇವರು ಸಿಗೋದಿಲ್ಲ ಅಂತ ಸುಮ್ಮನ ಕುಂತರ, ಯಾವುದೂ ಸಿಗೋದಿಲ್ಲ. ನಾವು ಮಾಡೋ ಎಲ್ಲಾ ಕೆಲಸ ಒಳ್ಳೆಯವಾಗಿದ್ರ ಸಾಕಪಾ, ಎಲ್ಲಾ ಸಿಗತಾವು" ಅಂತ ತನ್ನ ತೀರ್ಪನ್ನ ಕೊಟ್ಟು .

"ಅಲ್ಲ ಅಜ್ಜಿ, ನೀ ಹೇಳೋ ಮಾತನ್ನ ನಾ ಒಪಗೋತೀನಿ. ಈಗ ನೀ ಚಮಚೆದಲೆ ಊಟ ಮಾಡಾಕ ಹತ್ತೀದಿ ಅಂತ ತಿಳಕೊಳ್ಳಬೆ. ಅವಾಗ ಚಮಚೆ ಭಾಳ ಸುಂದರ ಐತಿ, ಅದರ ಮಾಟ ಭಾಳ ಭೇಷ್ ಐತಿ, ಭಾರೀ ಛಂದ ಕಾಣಸತೈತಿ... ಅಂತೆಲ್ಲ ಚಮಚೇನ ಹೊಗಳಿಕೋತ ಕೂತರ, ಊಟ ನಿನ್ನ ಬಾಯಾಗ ಬಂದ ಬೀಳತೈತೇನಬೆ. ಇಲ್ಲ ಹೌದಲ್ಲ! ಚಮಚೆ ನೀ ಊಟ ಮಾಡಲಿಕ್ಕೆ ಒಂದು ಸಾಧನ ಮಾತ್ರ. ಸಾಧನ ಆಹಾರ ಅಲ್ಲಬೆ. ಹಂಗನs ನಾವು ಮಾಡೋ ಎಲ್ಲ ಒಳ್ಳೆಯ ಕೆಲಸಗಳೂ ಮೌನದ ಕಡೆಗೆ, ಶಾಂತಿ ಕಡೆಗೆ ಮತ್ತ ದೇವರ ಕಡೆಗೆ ನಮ್ಮನ್ನ ಕರಕೊಂಡು ಹೋಗಲಿಕ್ಕೆ ಸಾಧನಗಳು ಮಾತ್ರ. ಅವು ಮೌನದ ಸಮೀಪ, ದೇವರ ಸಮೀಪ, ನಮ್ಮನ್ನು ಒಯ್ಯಬಹುದು. ಆದರ, ಮೌನನ ಆಗಲಿ, ದೇವರನ್ನಾಗಲಿ ಕಂಡುಕೊಳ್ಳಲಿಕ್ಕೆ ನಮ್ಮಲ್ಲಿ ಅರಿವು ಮೂಡಲೇಬೇಕಜ್ಜಿ" ಅಂದಾಗ, "ಅದೆಲ್ಲ ಸರಿ, ಮೊದಲು ನಾ ಹೇಳಿದ ಒಳ್ಳೆಯ ಕೆಲಸ ನೆನಪಿಟಗೊಂಡು ಮಾಡು. ನಿನಗ ಮೌನ, ಶಾಂತಿ, ದೇವರು ಎಲ್ಲಾ ಸಿಗತಾವು" ಅಂದ್ಲು.

"ಹೂಂ ಅಜ್ಜಿ ನೆನಪಾತು. ನಿನ್ನ ಪ್ರೀತಿಯ ಮೊಮ್ಮಗ ಪ್ರಶಾಂತನ್ನ ಪ್ರೊಫೆಸರ ಮಾಡಬೇಕು, ಅಷ್ಟ ಅಲ್ಲ ? ಆಯಿತು ಅಜ್ಜಿ ಮಾಡತೀನಿ" ಅಂದಾಗ, ಅಜ್ಜಿ ಮುಖ ಅರಳಿ ಹೂವಾಗಿತ್ತು , ಮಾತು ಮೌನವಾಗಿತ್ತು.

**ಪ್ರೊ॥ ಆರ್. ಪಿ. ಪುನಗಿನ**
ನಂ. ೯೮೩, 'ಸರಸ್ವತಿ', ಮಹಾವೀರ ನಗರ, ಉದ್ಯಮಬಾಘ್
ಬೆಳಗಾವಿ – ೫೯೦ ೦೦೮

ನಾನು ಓದಿದ ಪುಸ್ತಕ

ಕೃತಿ : ಇಬ್ಬನಿಯ ಕಾವು
ಲೇಖಕರು : **ಬಾನು ಮುಷ್ತಾಕ್**
**ಲಡಾಯಿ ಪ್ರಕಾಶನ**
ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ–೫೮೨ ೧೦೧
ಪುಟ : ೧೧೮ ಬೆಲೆ : ₹೮೦




# ಕಟು ಅನುಭವದ ದಿಟ್ಟ ಪ್ರಸ್ತಾಪ

**ಬಾ**ನು ಮುಷ್ತಾಕ್ ಅವರು ಮೂವತ್ತು ವರ್ಷಗಳ ಹರಹಿನಲ್ಲಿ ಬರೆದ ಘಟನಾ ಚಿತ್ರಣ, ಚರ್ಚೆ, ಮಾಹಿತಿ, ಸಾಹಿತ್ಯ, ಪತ್ರ... ಹೀಗೆ ವೈವಿಧ್ಯಮಯ ಹದಿನೈದು ಲೇಖನಗಳ ಸಂಗ್ರಹ 'ಇಬ್ಬನಿಯ ಕಾವು'.

'ಸುರಯ್ಯಾ' ಒಂದು ಘಟನಾ ಚಿತ್ರಣ. ಲೇಖಕಿ ತಮ್ಮ ಊರಿನಲ್ಲಿ ನಾಲ್ಕು ವರ್ಷದ ಎಳೆಯ ಬಾಲೆಯ ಮೇಲೆ ನಡೆದ ಅತ್ಯಾಚಾರ ಹಾಗೂ ಅದಕ್ಕೆ ಪ್ರತಿಕ್ರಿಯೆಯಾಗಿ ಅವರ ಸ್ನೇಹಿತರೊಬ್ಬರು, "ಇಸ್ಲಾಮಿನಲ್ಲಿ ಇಂತಹ ಅತ್ಯಾಚಾರಿಗಳಿಗೆ, ಸಾರ್ವಜನಿಕ ಸ್ಥಳಗಳಲ್ಲಿ ಹೂತು, ಕಲ್ಲು ಒಗೆಯುವ ಶಿಕ್ಷೆ ಇದ್ದು, ನಮ್ಮ ಸಂವಿಧಾನದಲ್ಲೂ ಇಂತಹ ಉಗ್ರ ಶಿಕ್ಷೆಗಳನ್ನು ಅಳವಡಿಸಬೇಕು" ಎಂದದ್ದನ್ನು ಪ್ರಸ್ತಾಪಿಸಿ, 'ದಿ ಸ್ಟೋನಿಂಗ್ ಆಫ್ ಸುರಯ್ಯಾ ಎಮ್', ಎಂಬ ಚಲನಚಿತ್ರದ ಡಿವಿಡಿ ವೀಕ್ಷಿಸಿ, ಅದರ ವಿವರವನ್ನು ಹೀಗೆ ನೀಡುತ್ತಾರೆ ;

ಇರಾನ್‌ನ ಒಂದು ಊರಿನಲ್ಲಿ ಅಲಿ ಮತ್ತು ಸುರಯ್ಯಾ, ಅವರ ಎರಡು ಗಂಡುಮಕ್ಕಳು ಹಾಗೂ ಎರಡು ಹೆಣ್ಣುಮಕ್ಕಳ ತುಂಬು ಸಂಸಾರ. ಆದರೆ ಶ್ರೀಮಂತ ಅಲಿಗೆ ಬೆಲೆವೆಣ್ಣುಗಳ ಖಯಾಲಿತನ ! ಇವನ್ನು ಸುರಯ್ಯಾ ಸತತವಾಗಿ ಹಾಗೂ ತೀವ್ರವಾಗಿ ವಿರೋಧಿಸಿದಾಗ ಕ್ಷುದ್ರಗೊಂಡ ಅಲಿ, ಅವಳಿಗೆ ಬೇರೊಬ್ಬನ ಜೊತೆ ಸಂಬಂಧವಿದೆ ಎಂದು ಪುಕಾರು ಎಬ್ಬಿಸಿ, ಮುಲ್ಲಾನ ಮೂಲಕ ಅವಳಿಗೆ ಹೂತು, ಕಲ್ಲು ಒಗೆಯುವ ವ್ಯವಸ್ಥೆ ಮಾಡಿಸುತ್ತಾನೆ ! ಈ ಹೃದಯ ವಿದ್ರಾವಕ ಘಟನೆಯನ್ನು ಬಾನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಪ್ರಪಂಚದಲ್ಲಿ ಹೆಣ್ಣಿನ ಜೀವಕ್ಕೆ, ಮಾನಕ್ಕೆ ರಕ್ಷಣೆ ಏಕಿಲ್ಲ ? ವಿಶ್ವದಲ್ಲಿ ಮಹಿಳಾ ಚಳುವಳಿಗಳು ವಿಸ್ತಾರವಾದಷ್ಟೂ ಪುರುಷ ಪ್ರಧಾನ ನೆಲೆಯ ಕ್ರೌರ್ಯದ ಬಾಹುಗಳು ಯಾಕೆ ವಿಶಾಲವಾಗುತ್ತಿವೆ ? ಮಹಿಳೆಯರ ಪರ ಧ್ವನಿ ಎತ್ತಿದವರು ಬಹಿಷ್ಕಾರಕ್ಕೆ ಏಕೆ ಒಳಗಾಗುತ್ತಾರೆ?

**ಡಾ|| ಶೇಖರ ಲದವಾ**

ಎಂದೆಲ್ಲ ಮಾರ್ಮಿಕವಾಗಿ ಪ್ರಶ್ನಿಸುವ ಬಾನು, ಮೇಲಿನ ಎರಡೂ ಘಟನೆಗಳಿಗೆ ತಮ್ಮ ಸ್ವಂತ ಅಭಿಪ್ರಾಯವನ್ನು ನೇರವಾಗಿ ತಿಳಿಸುವದಿಲ್ಲ ! ಹಾಗೆ, 'ಹಾಸನದಲ್ಲಿ ಇಷಿ ಡೋಲ್‌ಮಾಳನ್ನು ಕೆರಳಿಸಿದ್ದು' ಕೂಡ ಒಂದು ಘಟನಾ ಚಿತ್ರಣ, ಉಣ್ಣೆಬಟ್ಟೆ ವ್ಯಾಪಾರ ಮಾಡುವ ಈ ಟಿಬೆಟಿಯನ್ ತರುಣಿಯನ್ನು ಸ್ಥಳೀಯ ತರುಣರು ಚುಡಾಯಿಸುತ್ತಾರೆ. ಅವಳು ಕೆರಳಿ ಸಿಂಹಿಣಿಯಾದಾಗ ಅವರು ಪಲಾಯನ ಮಾಡುತ್ತಾರೆ ! ಪರದೇಶಿತನದ ಅಸಹಾಯಕತೆ ಸ್ವತಃ ಲೇಖಕಿಯ ಎದುರಿಗೆ ಜರುಗುತ್ತದೆ. ಲೇಖಕಿ ಆ ತರುಣಿಯನ್ನು ಸಂತೈಸುತ್ತಾರೆ, ಅಷ್ಟೆ. ಆದರೆ ತರುಣರ ವಿರುದ್ಧ ಯಾವ ಪ್ರತಿಕ್ರಿಯೆಯನ್ನೂ ಕೈಗೊಳ್ಳುವದಿಲ್ಲ.

ಅಧ್ಯಕ್ಷರ ಭಾಷಣ, ಆವರಣ, ಲಂಕೇಶ್, ನೀಲು ಇವೆಲ್ಲ ಸಾಹಿತ್ಯಿಕ ಲೇಖನಗಳಾಗಿವೆ. ಹಾಸನ ಜಿಲ್ಲಾ ಹತ್ತನೆಯ ಸಾಹಿತ್ಯ ಸಮ್ಮೇಳನಕ್ಕೆ ಬಾನು ಅವರೇ ಅಧ್ಯಕ್ಷತೆ ವಹಿಸುತ್ತಾರೆ. ಕೆಲವರು ಇದನ್ನು ಜಾತ್ರೆ ಎಂದು ಅವಹೇಳನ ಮಾಡುವುದನ್ನು ಪ್ರಶ್ನಿಸುತ್ತ, ಜಾತ್ರೆ ಎಂದರೂ ಸರಿಯೇ... ಅದು ದೇಶೀ ಸಂಸ್ಕೃತಿ ಎಂದು ಸಮರ್ಥಿಸಿಕೊಳ್ಳುತ್ತಾರೆ. ಜಾತ್ರೆ ಸಂಬಂಧಿತ ತಮ್ಮ ಬಾಲ್ಯದ ನೆನಪುಗಳನ್ನು ಬಿಚ್ಚಿಡುತ್ತಾರೆ. ಉರ್ದು ಭಾಷಿಕರಿಗೆ ಅಧ್ಯಕ್ಷ ಸ್ಥಾನ ಕೊಟ್ಟಿದ್ದಕ್ಕೆ ಕಾರ್ಯಕಾರಿ ಸಮಿತಿಗೆ ಪ್ರಣಾಮಗಳನ್ನು ಸಲ್ಲಿಸುತ್ತಾರೆ. ಕನ್ನಡ ಮಾಧ್ಯಮ ಪ್ರಶ್ನೆ, ಆಡಳಿತ ಭಾಷೆ, ಗಡಿ ಸಮಸ್ಯೆ, ಜಲ ಸಮಸ್ಯೆ, ಕನ್ನಡಿಗರ ಉದ್ಯೋಗ, ಹಾಸನದ ಸ್ಥಳೀಯ ಸಮಸ್ಯೆಗಳ... ಹೀಗೆ ಜನಪ್ರಿಯ ಶೈಲಿಯಲ್ಲಿ ಭಾಷಣ ಸಾಗುತ್ತದೆ. 'ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯದ ಬಗ್ಗೆ ಮಾತನಾಡದಿದ್ದರೆ ಹೇಗೆ ?' ಎಂದು ಪ್ರಶ್ನಿಸುತ್ತ, ಸೃಜನಶೀಲತೆಗೆ ಭಯಮುಕ್ತ ಸಮಾಜ ಅವಶ್ಯ ಎಂದು ಒಂದೇ ಮಾತನ್ನು ಹೇಳುತ್ತಾರೆಯೇ ಹೊರತು ಸಾಹಿತ್ಯದ ಬೇರೆಬೇರೆ ಆಯಾಮಗಳ ಕುರಿತು ಚರ್ಚಿಸುವದಿಲ್ಲ. ಎಸ್. ಎಲ್. ಭೈರಪ್ಪನವರು,

ವರ್ತಮಾನದ ಬದುಕಿನಲ್ಲಿ, ಮೌನವೆಂಬುದು ಶರಣಾಗತಿಯ ಇನ್ನೊಂದು ರೂಪವಾಗುತ್ತಿದೆ. ಯಾರ ಪರವೂ ವಹಿಸದೆ ಇರುವುದು ಕೂಡ, ಪರ ವಹಿಸಿದಂತೆ ಎಂಬ ಸತ್ಯವನ್ನು ನಾವು ಬೇಕೆಂತಲೇ ಕಡೆಗಣಿಸಿದ್ದೇವೆ. ಕಂಡೂ ಕಾಣದಂತೆ ಜಾಣ ಕುರುಡು ಮತ್ತು ಜಾಣ ಕಿವುಡನ್ನು ಅಭ್ಯಾಸ ಮಾಡಿಕೊಂಡಿದ್ದೇವೆ ಎಂದು ಲೇಖಕಿಯರು ತಮ್ಮ ಪ್ರಸ್ತಾವನೆಯಲ್ಲಿ ಬರೆದಿರುವುದು ಅವರ ಕಟು ಅನುಭವದ ಫಲವಾಗಿದೆ ಹಾಗೂ ಅದು ಅವರ ಲೇಖನಗಳಲ್ಲಿ ಪ್ರತಿಫಲಿತವಾಗಿದೆ. ಆದರೂ ಬಾನು ಮುಷ್ತಾಕ್ ಅವರು ಪ್ರಮುಖ ವಿವಾದಾತ್ಮಕ ವಿಷಯಗಳನ್ನು ಪ್ರಸ್ತಾಪಿಸಿ ಚರ್ಚಿಸಿರುವುದು ಅವರ ದಿಟ್ಟತನಕ್ಕೆ ಸಾಕ್ಷಿಯಾಗಿದೆ.

**ಸೆರೆ**

ಕ್ಯಾಮೆರ
ಕಣ್ಣು ಹೊಡೆಯಿತು
ಕೂಡಲೇ ನಾನು
ಸೆರೆಯಾದೆ...!

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪

---

ತಮ್ಮ 'ಆವರಣ'ದಲ್ಲಿ ತಾವು ಕಲಾವಿದರೇ ಅಲ್ಲ ಎಂದು ಅಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡಿದ್ದಾರೆ. ಹಿಂದುತ್ವದ ಪ್ರಚಾರಕರಾಗಿ ಗುರುತಿಸಿಕೊಂಡಿದ್ದಾರೆ. ಸಂತೆಯಲ್ಲಿ ಹಲ್ಲುಪುಡಿ ಮಾರುವವನ ಶೈಲಿಯಲ್ಲಿ ಹಿಂದೂ ಸಿದ್ಧಾಂತದ ಪ್ರಚಾರಕರಾಗಿ ತಮ್ಮಷ್ಟಕ್ಕೆ ತಾವೇ ಕೆಳಕ್ಕೆ ಕುಸಿದಿದ್ದಾರೆ. ತಮ್ಮ ತಟ್ಟೆಯಲ್ಲಿ ಬಿದ್ದ ಹೆಗ್ಗಣಗಳನ್ನು ಗಮನಿಸದೆ ಬೇರೆಯವರ ತಟ್ಟೆಯಲ್ಲಿ ಬಿದ್ದ ನೊಣವನ್ನು ಭೂತಗನ್ನಡಿಯಲ್ಲಿ ನೋಡುತ್ತ, ಮನುಷ್ಯ ವಿರೋಧಿಯಾಗಿದ್ದಾರೆ ಎಂದೆಲ್ಲ ಚೆನ್ನಾಗಿ ಝಾಡಿಸಿದ್ದಾರೆ. 'ಲಂಕೇಶ್'ನ ಅರ್ಧ ಲೇಖನ, ತಾವು ಪ್ರಥಮ ಬಾರಿ ಲಂಕೇಶ್ ಪತ್ರಿಕೆಗೆ ಬರೆದ ಲೇಖನ ಕುರಿತು ಇದ್ದರೆ, ಉಳಿದರ್ಧ ಲೇಖನ ಲಂಕೇಶರ ಓದು–ಬರಹ–ದಾಹ ವೃತ್ತಿ ಬದ್ಧತೆ, ಅಸಂಪ್ರದಾಯಕ ಪತ್ರಿಕೋದ್ಯಮಕ್ಕೆ ಪಣ ಒಡ್ಡುವ ಎದೆಗಾರಿಕೆ, ಕುರಿತು ಮೆಚ್ಚುಗೆ ಇದೆ. ಆದರೆ ಲಂಕೇಶರ ಋಣಾತ್ಮಕ ವಿಷಯಗಳ ಕುರಿತು ಪ್ರಸ್ತಾಪವಿಲ್ಲ. 'ನೀಲು' ಲಂಕೇಶ್‌ರ ನೀಲು ಅವತಾರದ ಕುರಿತು ಚರ್ಚೆ ಇದೆ. ನೀಲುವಿನ ಪ್ರೇಮಕವನಗಳಲ್ಲಿ ಸಿಟ್ಟು, ಸೆಡವು, ಸಿನಿಕತನ, ಹಾಸ್ಯ, ತಮಾಷೆ, ಒರಟುತನ, ಪ್ರಯೋಗಶೀಲತೆ, ಎಲ್ಲವೂ ಚರ್ಚೆ ಆಗಿ, ನೀಲುವಿನ ಕವನಗಳಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾದಾಗಲಾದರೂ ನೀಲುವಿನ ಫೋಟೋ ನೋಡಲು ಸಿಗುತ್ತದೆಯೇ? ಎಂದು ಪ್ರಶ್ನಿಸುತ್ತಾರೆ.

ಧನಂಜಯ ಚಟರ್ಜಿಯನ್ನು ಗಲ್ಲಿಗೇರಿಸಿದ (ಪ್ರಕರಣ ವಿವರಿಸದೆ) ಪ್ರಸಂಗ ಉಲ್ಲೇಖಿಸುತ್ತ, 'ಅಪರಾಧ ಮತ್ತು ಶಿಕ್ಷೆ' ಕುರಿತು ನಮ್ಮ ಸಂವಿಧಾನ ಏನು ಹೇಳಿದೆ ಎಂಬುದನ್ನು, ಅದರಲ್ಲೂ ವಿಶೇಷವಾಗಿ ಮರಣದಂಡನೆ ಕುರಿತು ಚರ್ಚಿಸಿದ್ದಾರೆ. ಇಂದಿನ ದಿನಗಳಲ್ಲಿ, ಅತಿರೇಕದ ಕ್ರೌರ್ಯ ಎನಿಸಬಹುದಾದ ಶಿಕ್ಷೆ ಸಮರ್ಥನೀಯವಲ್ಲ, ಅಲ್ಲದೆ ಅತಿ ಔದಾರ್ಯ ತೋರುವ ಶಿಕ್ಷೆ ಕೂಡ ಸಮರ್ಥನೀಯವಲ್ಲ ಎನ್ನುತ್ತ ಸುಧಾರಣಾವಾದಿ ಹಾಗೂ ಅಪರಾಧಿಗಳ ಪುನರ್ವಸತೀಕರಣ ಸಿದ್ಧಾಂತದ ಪ್ರಸ್ತಾಪ ಮಾಡುತ್ತಾರೆ. 'ಪ್ರತ್ಯೇಕಿತ ಮಹಿಳೆಯರ ಹಕ್ಕುಗಳಿಗಾಗಿ ಹೋರಾಟ' ವರ್ಗ, ವರ್ಣ ಹಾಗೂ ಲಿಂಗಾಧಾರಿತವಾಗಿ, ಸಮಾಜವು ಅನೇಕ ಪ್ರತ್ಯೇಕೀಕರಣಗಳಿಗೆ ಒಳಗಾಗಿ ಹೇಗೆ ನರಳುತ್ತಿದೆ ಎಂಬುದನ್ನು ಚರ್ಚಿಸುವ ಲೇಖನ. ವಿಶೇಷವಾಗಿ ಮುಸ್ಲಿಂ ಮಹಿಳೆಯರು, ಇಂತಹ ಪ್ರತ್ಯೇಕೀಕರಣದಿಂದಾಗಿ ಹೇಗೆ ಶೋಷಿಸಲ್ಪಡುತ್ತಿದ್ದಾರೆಂಬುದನ್ನು ಚರ್ಚಿಸಲಾಗಿದೆ. ಪ್ರವಾದಿ ಮಹಮ್ಮದರ ಕ್ರಾಂತಿಕಾರಕ ಸಾಮಾಜಿಕ ಬದಲಾವಣೆಗಳಿಂದಾಗಿ, ಮುಸ್ಲಿಂ ಮಹಿಳೆಯರಿಗೆ ಹುಟ್ಟುವ ಹಕ್ಕು, ಶಿಕ್ಷಣ ಹಕ್ಕು, ಸಂಗಾತಿ ಆಯ್ಕೆ ಹಕ್ಕು, ಸಮಾನವಾಗಿ ಬದುಕುವ ಹಕ್ಕು, ಇತ್ಯಾದಿ ಹಕ್ಕುಗಳನ್ನು ದಯಪಾಲಿಸಿ, ಮಹಿಳೆಯ ಕಾನೂನು ವ್ಯಕ್ತಿತ್ವವನ್ನು ಇಸ್ಲಾಂ ಮಾನ್ಯತೆ ಮಾಡಿದ್ದು ನೆನಪಿಸುತ್ತ, ಪ್ರವಾದಿ ಮಹಮ್ಮದರ ಮರಣದ ನಂತರ ಸಕ್ರಿಯರಾದ ಪುರುಷ ಪ್ರಧಾನ ಮೌಲ್ವಿಗಳು ಮಹಿಳೆಯರ ಬಹುತೇಕ ಹಕ್ಕುಗಳನ್ನು ಅಮಾನ್ಯಗೊಳಿಸಿ, ಶೋಷಣೆಯನ್ನು ಇಂದಿಗೂ ಮುಂದುವರಿಸಿದ್ದಾರೆಂದು ಆಪಾದಿಸುತ್ತ, 'ಇಂದು ಬರಹಗಾರ್ತಿಯಾಗಿ ನಾವೂ ಕೂಡ ಸ್ವನಿಯಂತ್ರಣಕ್ಕೆ ಒಳಗಾಗುವ ಅಸಹಾಯಕ ಸನ್ನಿವೇಶವನ್ನು ಎದುರಿಸುತ್ತಿದ್ದೇವೆ' ಎಂದು ಅಳಲು ವ್ಯಕ್ತಪಡಿಸುತ್ತಾರೆ. ಲೇಖನದ ಶಿರೋನಾಮೆಯಲ್ಲಿರುವ 'ಹೋರಾಟ' ಪ್ರಶ್ನೆಯಾಗಿಯೇ ಉಳಿಯುತ್ತದೆ.

'ಹಜ್ ಕಮಿಟಿ' ಮತ್ತು 'ಮದರಸಾಗಳ ಇತಿಹಾಸ' ಇವೆರಡೂ ಲೇಖನಗಳು ಆಯಾ ಸಂಸ್ಥೆಗಳ ಕಾರ್ಯವೈಖರಿ ಕುರಿತು ಮಾಹಿತಿ ನೀಡುತ್ತವೆ. ಕರ್ನಾಟಕ ಹಜ್ ಕಮಿಟಿಯ ಅಧ್ಯಕ್ಷರಾಗಿ, ೨೦೦೬ರಲ್ಲಿ ಆಯ್ಕೆಯಾದ ಜುಲ್ಫಿಕಾರ್ ಮಹಮ್ಮದ ಅಲಿಯಾಸ್ ಟಿಪ್ಪು, ಇಂಥ ಒಂದು ಧಾರ್ಮಿಕ ಸಂಸ್ಥೆಯಲ್ಲಿ, ಕಾನೂನನ್ನು ಗಾಳಿಗೆ ತೂರಿ, ಮನಸೋ ಇಚ್ಛೆ ಆಡಳಿತ ನಡೆಸಿ, ಭ್ರಷ್ಟಾಚಾರ ಹಾಗೂ ಸ್ವಜನ ಪಕ್ಷಪಾತದಲ್ಲಿ ತೊಡಗುತ್ತಾರೆ. ಅಬ್ದುಲ್ ಅಜೀಮ್ ಎಂಬುವವರು ಅವರ ವಿರುದ್ಧ ಏಕಾಂಗಿಯಾಗಿ ಹೋರಾಡಿ, ಆ ಭ್ರಷ್ಟ ವ್ಯಕ್ತಿ ಅಧ್ಯಕ್ಷ ಸ್ಥಾನ ಹಾಗೂ ಸದಸ್ಯತ್ವದಿಂದ ವಜಾಗೊಳ್ಳುವಂತೆ ಮಾಡುತ್ತಾರೆ. ೧೪೦೦ ವರ್ಷಗಳ ಹಿಂದೆ ಹುಟ್ಟಿರುವ ಇಸ್ಲಾಂ ಧರ್ಮ, ತನ್ನ ಹುಟ್ಟಿನೊಂದಿಗೆ ಜ್ಞಾನಾರ್ಜನೆಗೆ ಮಹತ್ವ ಕೊಟ್ಟಿದ್ದು, ಆ ಮೂಲಕ ಮದರಸಾಗಳು ಹುಟ್ಟಿದ್ದು, ವಿಶ್ವದ ಎಲ್ಲ ಜ್ಞಾನಗಳು ಅರೇಬಿಕ್‌ಗೆ ಭಾಷಾಂತರಗೊಂಡದ್ದು, ಅಲ್ಲದೆ ವಿಶ್ವದ ಇತರ ರಾಷ್ಟ್ರಗಳಲ್ಲಿ ಹಾಗೂ ಭಾರತದಲ್ಲಿ ಮುಸ್ಲಿಂ ದೊರೆಗಳ ಆಗಮನದೊಂದಿಗೆ ಮದರಸಾಗಳು ಜನ್ಮ ತಳೆದದ್ದು ಎಲ್ಲವೂ 'ಮದರಸಾಗಳ ಇತಿಹಾಸ'ದಲ್ಲಿ ವಿವರವಾಗಿ ಮೂಡಿಬಂದಿವೆ. ಆದರೆ, ಇಂದಿನ ಮದರಸಾಗಳ ಅಂಕಿ–ಸಂಖ್ಯೆ ಸ್ಥಿತಿ–ಗತಿ, ಅಲ್ಲಿನ ಪಠ್ಯಕ್ರಮ, ಅಲ್ಲಿ ಕಲಿತ ಮಕ್ಕಳ ಭವಿಷ್ಯ, ಪಾಲಕರ ಒಲವು–ನಿಲುವು ಮುಂತಾದವುಗಳ ಕುರಿತು ಚರ್ಚೆಯೇ ಇಲ್ಲದೆ, ಮದರಸಾಗಳು ಭಯೋತ್ಪಾದಕರ ಕೇಂದ್ರಗಳಲ್ಲ ಎಂಬ ತಮ್ಮ ಮೂಲ ಉದ್ದೇಶವನ್ನು ಸಮರ್ಥಿಸಲು ಲೇಖಕಿಯರು ವಿಫಲರಾಗುತ್ತಾರೆ.

'ಎಂದು ಬರುವೆ ಕಡಲೇ ನನ್ನೂರಿಗೆ' ನಿಸರ್ಗ, ಅದೂ ಕಡಲಿನ ಕುರಿತು ಬರೆದ ಸುಂದರ ಲೇಖನ. ಹಾಗೆಯೇ 'ಜಮೀನನ್ನು ನುಂಗಿದ ಆಲೂಗಡ್ಡೆ'ಯಲ್ಲಿ ರೈತರು ಹಾಗೂ ಜಮಾಲ್‌ನಂಥ ದಲ್ಲಾಳಿಗಳು ಪದೇ ಪದೇ ಹೇಗೆ ನಷ್ಟ ಅನುಭವಿಸುತ್ತಾರೆ ಹಾಗೂ ಕೊಳ್ಳುಗರಾದ ಮುಂಬೈ ಶೇರ್‌ಗಳು ಹೇಗೆಯೇ ಸದಾ ಲಾಭದಲ್ಲಿ ಇರುತ್ತಾರೆ ಎಂಬುದನ್ನು ಸ್ಪಷ್ಟಪಡಿಸುವ ಲೇಖನ.

'ಸಾರಾ ಅವರಿಗೊಂದು ಪತ್ರ' ಒಬ್ಬ ಲೇಖಕಿ ಇನ್ನೊಬ್ಬ ಲೇಖಕಿಗೆ ಬಹಿರಂಗವಾಗಿ ಬರೆದ ಒಂದು ಅಪರೂಪದ ಸುಂದರ ಪತ್ರ. ಲಂಕೇಶ್ ಪತ್ರಿಕೆಯಲ್ಲಿ ಇಬ್ಬರ ಲೇಖನಗಳೂ ಒಟ್ಟಿಗೆ ಪ್ರಕಟವಾಗಿ ಪ್ರಾರಂಭವಾಗುವ ಅವರ ಗೆಳೆತನ, ಪ್ರೀತಿ–ಬಾಂಧವ್ಯ, ಸಂಪರ್ಕ–ಸಂಘರ್ಷ, ಚಳುವಳಿಗಳಲ್ಲಿ ಭಾಗಿಯಾದದ್ದು ಎಲ್ಲವನ್ನು ನೆನೆಸುತ್ತ ಬಾನು, ಮುಸ್ಲಿಂ ಪುರುಷರ ಶೋಷಣೆಯನ್ನು ಒರೆಗೆ ಹಚ್ಚುತ್ತಾರೆ. 'ಧರ್ಮ, ರಾಜಕೀಯ ಹಾಗೂ ಲೈಂಗಿಕತೆ ಈ ಮೂರು ವಿಷಯಗಳ ಕುರಿತು, ಲೇಖಕಿಯರು ಬರೆಯಬಾರದು ಎಂಬುದು ಮುಸ್ಲಿಂ ಪುರುಷಪ್ರಧಾನ ಸಮಾಜದ ಅಘೋಷಿತ ನಿಯಮ ಎಂದು ಸಾರುತ್ತಾರೆ. ಈ ಪುರುಷಪ್ರಧಾನ ಕೋಟೆಯನ್ನು ಒಡೆಯಲು 'ಗೆದ್ದಲು ಹುಳುವಾಗುವೆ' ಎಂಬ ಸುಂದರ ಕವನ ಬರೆದಿದ್ದಾರೆ. ಗಡಿಗಳಿಲ್ಲದ, ಬಾವುಟಗಳಿಲ್ಲದ, ಗುರುತುಗಳಿಲ್ಲದ, ಕೇವಲ ಅಂತಃಕರಣ ಇರುವ ಮನುಷ್ಯರಿಗಾಗಿ ಲೇಖನಿಯನ್ನು ಮುಡುಪಾಗಿಡೋಣ, ಹೃದಯ ಸಂವಾದ ಆರಂಭಿಸೋಣ ಎಂದು ಕರೆ ನೀಡುತ್ತಾರೆ. ಸಾರಾ ಅವರ ಉತ್ತರ ನಿರೀಕ್ಷಿಸುವುದು ಕುತೂಹಲಕಾರಿ.

ಸೂಫಿ ಸಂತ ದಾರಾಶಿರೋ ಮೊಘಲ್ ಚಕ್ರವರ್ತಿ ಶಾಜಹಾನ್‌ನ ಹಿರಿಯ ಪುತ್ರ. ಅವನು ಪಂಡಿತನಾಗಿ, ಸರ್ವಧರ್ಮ ಸಮನ್ವಯಿಯಾಗಿ, ಏಕಪತ್ನಿ ವ್ರತಸ್ಥನಾಗಿ, ಸಂತನಾಗಿ, ಕಲಾವಿದನಾಗಿ ಹೀಗೆ ಬಹುಮುಖ ಪ್ರತಿಭಾಸಂಪನ್ನನಾಗಿ ಜನಾನುರಾಗಿಯಾಗಿರುತ್ತಾನೆ. ಆದರೆ ಅವನ ತಮ್ಮ ಔರಂಗಜೇಬ ತನ್ನ ಕುರ್ಚಿಗಾಗಿ ದಾರಾಶಿರೋ ಧರ್ಮವಿರೋಧಿ ಎಂದು ಸಾರಿ, ಅವನನ್ನು ಕೊಲ್ಲಿಸಿ ಬಿಡುತ್ತಾನೆ. ಇತಿಹಾಸದ ಈ ಕ್ರೌರ್ಯ ವ್ಯಂಗ್ಯವನ್ನು ಲೇಖಕಿ ಆತ್ಮ ವಿಮರ್ಶೆ ಮಾಡಿಕೊಳ್ಳಲು ಪ್ರೇರಣೆ ನೀಡುತ್ತಾರೆ.

ವರ್ತಮಾನದ ಬದುಕಿನಲ್ಲಿ, ಮೌನವೆಂಬುದು ಶರಣಾಗತಿಯ ಇನ್ನೊಂದು ರೂಪವಾಗುತ್ತಿದೆ. ಯಾರ ಪರವೂ ವಹಿಸದೆ ಇರುವುದು ಕೂಡ, ಪರ ವಹಿಸಿದಂತೆ ಎಂಬ ಸತ್ಯವನ್ನು ನಾವು ಬೇಕೆಂತಲೇ ಕಡೆಗಣಿಸಿದ್ದೇವೆ. ಕಂಡೂ ಕಾಣದಂತೆ ಜಾಣ ಕುರುಡು ಮತ್ತು ಜಾಣ ಕಿವುಡನ್ನು ಅಭ್ಯಾಸ ಮಾಡಿಕೊಂಡಿದ್ದೇವೆ ಎಂದು ಲೇಖಕಿಯರು ತಮ್ಮ ಪ್ರಸ್ತಾವನೆಯಲ್ಲಿ ಬರೆದಿರುವುದು ಅವರ ಕಟು ಅನುಭವದ ಫಲವಾಗಿದೆ ಹಾಗೂ ಅದು ಅವರ ಲೇಖನಗಳಲ್ಲಿ ಪ್ರತಿಫಲಿತವಾಗಿದೆ. ಆದರೂ ಬಾನು ಮುಷ್ತಾಕ್ ಅವರು ಪ್ರಮುಖ ವಿವಾದಾತ್ಮಕ ವಿಷಯಗಳನ್ನು ಪ್ರಸ್ತಾಪಿಸಿ ಚರ್ಚಿಸಿರುವುದು ಅವರ ದಿಟ್ಟತನಕ್ಕೆ ಸಾಕ್ಷಿಯಾಗಿದೆ.

ಪುಸ್ತಕದಲ್ಲಿ ಧರ್ಮಗಳ ಸಂಘರ್ಷಗಳ ಕುರಿತು ಒಂದೂ ಲೇಖನವಿಲ್ಲ. ಆದರೆ, ಪ್ರಕಾಶನದ ಪರವಾಗಿ ಬರೆದ ಅನುಪಮಾ, ಮುಸ್ಲಿಂ ಸಮುದಾಯದ ಕುರಿತು ಅಪಾರ ಸಹಾನುಭೂತಿ ಹೊಂದಿದ್ದಾರೆ ಎಂಬುದನ್ನು ತೋರ್ಪಡಿಸಿದ್ದಾರೆಯೇ ಹೊರತು ಲೇಖನಗಳಿಗೆ ಪೂರಕವಾಗಿ ಸ್ಪಂದಿಸಿದ್ದಾರೆ ಎಂದು ಅನ್ನಿಸುವುದಿಲ್ಲ.

**ಡಾ॥ ಶೇಖರ ಲದವಾ**
ಲದವಾ ಚಾಳ, ಗಂಗಾಪೂರ ಪೇಟೆ, ಗದಗ – ೫೮೨೧೦೧

# ನಿರಾಶ್ರಿತರಿಗೆ ಸ್ಪಂದಿಸಲು ಬೇಕು ಆಶ್ರಿತ ಮಾನವತೆ

**ನಾ. ದಿವಾಕರ**

ಇತ್ತೀಚಿನ ಕೆಲವು ಸಾರ್ವತ್ರಿಕ ಘಟನೆಗಳು ಯಾವುದೇ ಸಹೃದಯ ಮಾನವನನ್ನು ವಿಚಲಿತಗೊಳಿಸುವಂತಿವೆ. ಮನುಜ ಜೀವದ ಮೌಲ್ಯ ಗಣನೆಗೇ ಬಾರದಂತಹ ಒಂದು ಮಾರುಕಟ್ಟೆಯ ಸರಕಾಗಿ ಸಮಕಾಲೀನ ಇತಿಹಾಸದ ಗೋದಾಮುಗಳಲ್ಲಿ ಕೊಳೆಯುವಂತಾಗುತ್ತಿರುವುದು ತಂತ್ರಜ್ಞಾನ ಯುಗದ ಒಂದು ದುರಂತ. ಇದಕ್ಕೆ ಕಾರಣವೂ ಈ ಯುಗದ ಮನೋಭಾವ ಮತ್ತು ಯುಗಾಂತರದ ಭಾವಗಳೇ ಎನ್ನುವುದೂ ಅಷ್ಟೇ ಸತ್ಯ. ಮಾನವ ಜೀವಿಯನ್ನು ಒಂದು ನವೀಕರಿಸಬಹುದಾದ ಸಂಪನ್ಮೂಲವನ್ನಾಗಿ ಪರಿಗಣಿಸುವ ಆಧುನಿಕ ಮಾರುಕಟ್ಟೆ ವ್ಯವಸ್ಥೆಯಲ್ಲಿ ಭೌತಿಕ ಸ್ವರೂಪದ ದೇಹ ಮತ್ತು ಬೌದ್ಧಿಕ ಸ್ವರೂಪದ ವ್ಯಕ್ತಿತ್ವ ಎರಡೂ ಸಹ ನೇಪಥ್ಯದಲ್ಲೇ ಬಳಲುತ್ತವೆ. ಈ ಭೌತಿಕ ಸ್ವರೂಪದಿಂದ ಹೊರಸೂಸುವ ಬೌದ್ಧಿಕತೆಗೆ ಜಾಗತಿಕ ಮಾರುಕಟ್ಟೆಯಲ್ಲಿ ಮೌಲ್ಯ ವೃದ್ಧಿಯಾಗುತ್ತದೆ. ಹಾಗಾಗಿಯೇ ಪ್ರತಿಯೊಂದು ಆಡಳಿತ ವ್ಯವಸ್ಥೆಯಲ್ಲೂ ಮಾನವ ಸಂಪನ್ಮೂಲ ನಿರ್ವಹಣೆಗೆ ಹೆಚ್ಚಿನ ಒತ್ತು ನೀಡಲಾಗುತ್ತದೆ. ಇಲ್ಲಿ ಸಂಪತ್ತಿನ ಮೂಲ ಎಂದು ಪರಿಗಣಿಸಲ್ಪಡುವುದು ಮಾರುಕಟ್ಟೆಯಲ್ಲಿ ಬಿಕರಿಯಾಗಬಹುದಾದ ಅಥವಾ ಉಪಯುಕ್ತವಾಗಬಹುದಾದ ಶ್ರಮವೇ ಹೊರತು, ಈ ಶ್ರಮದ ಮೂಲ ಸೆಲೆ ಅಥವಾ ನೆಲೆ ಅಲ್ಲ. ಹಾಗಾಗಿ ತಂತ್ರಜ್ಞಾನ ಯುಗದ ಮಾನವ ಸಮಾಜ ತನ್ನ ಸಂವೇದನಾಶೀಲತೆಯನ್ನು ಕಳೆದುಕೊಂಡು ನಿಷ್ಕ್ರಿಯವಾಗುತ್ತಿದೆ.

ಈ ವಿದ್ಯಮಾನ ಕೆಲವು ಸೂಕ್ಷ್ಮ ತರಂಗಗಳ ಸ್ವರೂಪದಲ್ಲಿ ವ್ಯಕ್ತವಾಗುವುದರಿಂದ ಸಾರ್ವತ್ರಿಕತೆ ಪಡೆಯುವುದಿಲ್ಲ. ಜಾತಿ, ಮತ, ಧರ್ಮ, ಭಾಷೆ, ದೇಶ, ರಾಷ್ಟ್ರೀಯತೆ ಮತ್ತು ಭೌಗೋಳಿಕ ಅಸ್ಮಿತೆಗಳು ಈ ಸೂಕ್ಷ್ಮ ತರಂಗಗಳ ಹಿಂದೆ ಅಡಗಿರುವ ಸಂವೇದನಾತ್ಮಕ ಭಾವಗಳನ್ನು ಮೆಟ್ಟಿ ನಿಲ್ಲುತ್ತವೆ. ನಿಜ, ಮಾನವ ಸಮಾಜವನ್ನು ನಿರ್ದಿಷ್ಟ ಆಯಾಮದಲ್ಲಿ ರೂಪಿಸಿರುವ ಪ್ರತಿಯೊಂದು ಮತಧರ್ಮವೂ ವಿಶ್ವಮಾನವತೆ, ಭ್ರಾತೃತ್ವ ಮತ್ತು ಸೌಹಾರ್ದತೆಯನ್ನು ಬಯಸುತ್ತದೆ. ಇದು ಗ್ರಾಂಥಿಕ ಸತ್ಯ. ಆದರೆ ಭೌತಿಕ ಸತ್ಯವಲ್ಲ. ಮಾನವ ಸಮಾಜವನ್ನು ಅಸ್ಮಿತೆಗಳು ವಿಭಜಿಸಿರುವಂತೆಯೇ ಮಾನವೀಯತೆಯ ನೆಲೆಗಳನ್ನೂ ವಿಭಜಿಸಿವೆ. ಅಸ್ಮಿತೆಗಳೊಳಗಿನ ಉಪ ಅಸ್ಮಿತೆಗಳು ಮಾನವ ಸಮಾಜದ ಬೌದ್ಧಿಕ ನೆಲೆಯನ್ನು ಭ್ರಷ್ಟಗೊಳಿಸಿವೆ. "ನಾವು" ಮತ್ತು "ನಮ್ಮವರು" ಎನ್ನುವ ಪರಿಭಾಷೆ ಯಾವುದೇ ಸಮಾಜದಲ್ಲೂ, ಯಾವುದೇ ಸಂದರ್ಭದಲ್ಲೂ ಸ್ಪಷ್ಟತೆಯನ್ನು ಪಡೆದಿಲ್ಲ. ಆದರೆ "ನಾವು" ಮತ್ತು "ಅವರು" ಅಥವಾ "ನಮ್ಮವರು" ಮತ್ತು "ಅನ್ಯರು" ಎಂಬ ಭಾವ ಸಮಾಜದ ಆಂತರ್ಯದಲ್ಲಿ ಬೇರೂರಿದೆ. ಈ ಬೇರುಗಳನ್ನು ಗಟ್ಟಿಗೊಳಿಸಿ, ಪೋಷಿಸಿ, ಸಲಹಿ, ಹೆಮ್ಮರವಾಗಿ ಬೆಳೆಸುವ ನಿಟ್ಟಿನಲ್ಲಿ ಎಲ್ಲ ಧರ್ಮಗಳೂ ತಮ್ಮದೇ ಆದ ರೀತಿಯಲ್ಲಿ ಶ್ರಮಿಸಿವೆ, ಶ್ರಮಿಸುತ್ತಿವೆ. ಗ್ರಾಂಥಿಕ ಮತಧರ್ಮ ಮೌಲ್ಯಗಳಿಗೂ ವಾಸ್ತವತೆಗೂ ಇರುವ ವ್ಯತ್ಯಾಸವನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು, ಮುಕ್ತ ಮನಸ್ಸಿನಿಂದ ಯೋಚಿಸಿದಲ್ಲಿ.

"ಅನ್ಯ" ಭಾವ ಒಂದು ವಿಭಿನ್ನ ಸಮಾಜವನ್ನು ಸೃಷ್ಟಿಸುತ್ತಿರುವುದನ್ನು ಸಮಕಾಲೀನ ಸಂದರ್ಭದಲ್ಲಿ ಗಂಭೀರವಾಗಿ ಪರಿಗಣಿಸಬೇಕಿದೆ. ಮಾನವ ಸಂವೇದನೆಗೆ ಮೂಲ ಧಾತು ಎಂದರೆ ಮಾನವೀಯ ಸಂವೇದನೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಸಂವೇದನೆಯೂ ಸಹ ಸಾಪೇಕ್ಷತೆಯನ್ನು ಪಡೆಯುತ್ತಿರುವುದು ದುರಂತ. ಈ ಸಾಪೇಕ್ಷತೆಗೆ ಕಾರಣ ನಮ್ಮೊಳಗಿನ ಶ್ರೇಷ್ಠತೆ ಅಥವಾ ಪಾರಮ್ಯದ ಅಹಮಿಕೆ ಮತ್ತು ಅಸ್ಮಿತೆಗಳ ಚೌಕಟ್ಟು. ಮೃತ ದೇಹಗಳ ರಾಶಿಯಲ್ಲಿಯೂ "ನಮ್ಮವರನ್ನು" ಹೆಕ್ಕಿ ತೆಗೆಯುವ ಒಂದು ಪರಂಪರೆಯನ್ನೇ ಭಾರತೀಯ ಸಮಾಜದಲ್ಲಿ ವ್ಯವಸ್ಥಿತವಾಗಿ ಪೋಷಿಸುತ್ತಿರುವುದನ್ನು ಕಳೆದ ಮೂರು ನಾಲ್ಕು ದಶಕಗಳಲ್ಲಿ ಕಂಡಿದ್ದೇವೆ. ಒಬ್ಬ ವ್ಯಕ್ತಿಯ ಅಸಹಜ ಸಾವಿಗೆ ನಾನಾ ಕಾರಣಗಳಿರಬಹುದು. ನೈಸರ್ಗಿಕ ವಿಕೋಪ, ವ್ಯಕ್ತಿಗತ ಕಾರಣಗಳು, ಸಮಾಜಘಾತುಕ ಶಕ್ತಿಗಳ ಕೃತ್ಯ, ಕೋಮುವಾದ, ಭಯೋತ್ಪಾದನೆ, ಜಾತಿ ದ್ವೇಷ, ಭಾಷಾ ದ್ವೇಷ ಇತ್ಯಾದಿ ಇತ್ಯಾದಿ. ಆದರೆ ಬಹುತೇಕ ಸಂದರ್ಭಗಳಲ್ಲಿ ಈ ಎಲ್ಲಾ ವಿಕೃತಗಳಿಗೆ ಬಲಿಯಾಗುವ ವ್ಯಕ್ತಿಗಳು ಈ ವಿಕೃತಿಗಳ ಪ್ರತಿನಿಧಿಗಳೂ ಆಗಿರುವುದಿಲ್ಲ, ಪ್ರತಿರೋಧದ ದನಿಯೂ ಆಗಿರುವುದಿಲ್ಲ. ಆಡಳಿತ ವ್ಯವಸ್ಥೆಗೆ ಈ ಮೃತ ಜೀವಗಳು ಜನಸಂಖ್ಯೆಯ ಏರು ಪೇರು ಪ್ರಕ್ರಿಯೆಯಲ್ಲಿನ ಸರಕುಗಳಂತೆ ಕಾಣುತ್ತಾರೆ. ಹಾಗಾಗಿ ಮೃತ ದೇಹಕ್ಕೊಂದು

ಬೆಲೆ ಕಟ್ಟಿ ಪರಿಹಾರ ನೀಡಿ ಕೈತೊಳೆದುಕೊಳ್ಳಲಾಗುತ್ತದೆ.

ಆದರೆ ಸಾರ್ವಜನಿಕ ವಲಯದಲ್ಲಿ, ಸಾಮಾಜಿಕ ಸ್ತರದಲ್ಲಿ ಇದು ಹೇಗೆ ವ್ಯಕ್ತವಾಗುತ್ತದೆ ? ಈ ಪ್ರಶ್ನೆಯೇ ನಮ್ಮ ಸಂವೇದನಾಶೀಲತೆಯ ಬುನಾದಿಯಾಗುತ್ತದೆ. ಇತ್ತೀಚಿನ ಕೆಲವು ಘಟನೆಗಳನ್ನು ಗಮನಿಸಿದಾಗ ಈ ಪ್ರಶ್ನೆ ಇನ್ನೂ ನಿಗೂಢವಾಗುತ್ತದೆ. ನೇಪಾಳದ ಭೂಕಂಪದ ಸಂದರ್ಭದಲ್ಲಿ, ಬದರಿ ಕೇದಾರನಾಥದಲ್ಲಿ ಸಂಭವಿಸಿದ ಭೂಕಂಪನ ಮತ್ತು ಪ್ರವಾಹದ ಸಂದರ್ಭದಲ್ಲಿ, ಹಜ್ ದುರಂತದಲ್ಲಿ, ಭಾರತದ ಕುಂಭ ಮೇಳದಲ್ಲಿ ಮೃತಪಟ್ಟ ಅಮಾಯಕ ಜನರನ್ನು ದೈವಿಕ ವರ–ಶಾಪಗಳ ನೆಲೆಯಲ್ಲಿ ವ್ಯಾಖ್ಯಾನಿಸುವ ಮೂಲಕ ತಮ್ಮ ಸಂವೇದನೆಯನ್ನು ಮತೀಯ ಭಾವನೆಗಳಿಗೆ ಅಡಮಾನ ಇಟ್ಟಿದ್ದನ್ನು ಕಂಡಿದ್ದೇವೆ. ನೇಪಾಳದ ಭೀಕರ ಭೂಕಂಪದಲ್ಲಿ ಅಳಿದುಹೋದ ಜೀವಗಳು ಸಾವಿರಾರು. ಅಳಿಸಿಹೋದ ಸ್ಥಾವರಗಳು ಸಾವಿರಾರು. ಜಗತ್ತನ್ನೇ ತಲ್ಲಣಗೊಳಿಸಿದ ಈ ನೈಸರ್ಗಿಕ ವಿಕೋಪ ತನ್ನ ಪರಾಕಾಷ್ಠೆ ತಲುಪಿದ ಹಂತದಲ್ಲೂ ಕೆಲವು ವಿಜೃಂಭಣೆಯ ಮಾತುಗಳು ಕೇಳಿಬಂದವು. ನೇಪಾಳದ ಇಡೀ ಭೂ ಪದರವೇ ಕಂಪಿಸಿದರೂ ಪಶುಪತಿನಾಥ ದೇವಾಲಯ ಕಿಂಚಿತ್ತೂ ಹಾನಿಗೊಳಗಾಗಲಿಲ್ಲ, ನಿಜ. ಇದು ಆ ಕಾಲದ ವಾಸ್ತುಶಿಲ್ಪಿಗಳ ಶ್ರಮ, ದಕ್ಷತೆ ಮತ್ತು ಕೌಶಲ್ಯದ ಪ್ರತೀಕ. ಶ್ಲಾಘನೀಯವೂ ಹೌದು. ಆದರೆ ಸಾಂಪ್ರದಾಯಿಕ ಮನಸ್ಸುಗಳಿಗೆ ಇದು ದೈವತ್ವದ ವಿಜಯೋತ್ಸವವಾಗಿತ್ತು. ಮಾನವೀಯ ದೃಷ್ಟಿಯಿಂದ ನೋಡಿದಾಗ ಈ ದೇವಾಲಯ ಧ್ವಂಸವಾಗಿ ಹತ್ತು ಜೀವಗಳು ಉಳಿದಿದ್ದರೂ ಒಳಿತಾಗುತ್ತಿತ್ತು. ಆದರೆ ದೇವಾಲಯದ ಸ್ಥಿತಿಸ್ಥಾಪಕತ್ವಕ್ಕೆ ದೈವಿಕ ಶಕ್ತಿಯನ್ನು ಆರೋಪಿಸುವ ಮೂಲಕ ಕ್ಷುದ್ರ ಮನಸ್ಸುಗಳು ವಿಜೃಂಭಿಸಿದವು. ಇದು ಆಧುನಿಕ ಮನುಕುಲದ ವಿಕೃತ ಆಯಾಮ ಎನ್ನಲು ಅಡ್ಡಿಯಿಲ್ಲ.

ಈಗ ಇದೇ ವಿಕೃತಿಯನ್ನು ಸಿರಿಯಾದ ದುರಂತದಲ್ಲಿ ಕಾಣುತ್ತಿದ್ದೇವೆ. ಸಿರಿಯಾ ಮತ್ತು ಕೆಲವು ಮಧ್ಯಪ್ರಾಚ್ಯ ರಾಷ್ಟ್ರಗಳಿಂದ ವಲಸೆ ಹೋಗುತ್ತಿರುವ ಸಾವಿರಾರು ಜನರು ಜಾಗತಿಕ ಮಟ್ಟದಲ್ಲಿ ಮಾನವ ಸಂವೇದನೆಗೆ ಸವಾಲೊಡ್ಡಿದ್ದಾರೆ. ಪವಿತ್ರ ಧರ್ಮಗ್ರಂಥಗಳ ನೆಲೆಯಲ್ಲಿ ಹಜ್ ಯಾತ್ರೆ ನಡೆಸಿ ಕೋಟ್ಯಂತರ ರೂ.ಗಳನ್ನು ಸಂಪಾದಿಸುವ ಸೌದಿ ಅರೇಬಿಯಾ ಸರ್ಕಾರಕ್ಕೆ ವಲಸೆಗಾರ, ನಿರಾಶ್ರಿತರ, ಮತೀಯ ಅಸ್ಮಿತೆಯೂ ಗಣನೆಗೆ ಬರುವುದಿಲ್ಲ. ಇಲ್ಲಿ ಮಾನವ ಸಂವೇದನೆಗೆ ಅಡ್ಡಿಯಾಗುವುದು ಆಧುನಿಕ ಜಗತ್ತಿನ ನೂತನ ಧರ್ಮ ಎನಿಸಿಕೊಂಡಿರುವ ಬಂಡವಾಳ ಮತ್ತು ಲಾಭಗಳಿಕೆ. ಸಿರಿಯಾದ ದುರಂತಕ್ಕೆ, ನಿರಾಶ್ರಿತರ ಬವಣೆಗೆ ಕಾರಣ ಯಾರು ಎಂಬ ಪ್ರಶ್ನೆ ಚರ್ಚೆಗೇ ಬರುವುದಿಲ್ಲ. ಇಷ್ಟಕ್ಕೂ ಸಿರಿಯಾ ಒಂದು ಪುಟ್ಟ ರಾಷ್ಟ್ರವಾಗಿ ಧೂಳೀಪಟವಾಗಲು ಕಾರಣವಾದರೂ ಏನು ? ಜಾಗತಿಕ ಅಧಿಪತಿಗಳ ಮತ್ತು ಸಾಮ್ರಾಜ್ಯಶಾಹಿಗಳ ಲಾಲಸೆಯೇ ಅಲ್ಲವೇ ? ತೈಲ ಸಂಪತ್ತನ್ನು ತನ್ನ ಆಧಿಪತ್ಯದಲ್ಲಿ ಇರಿಸಿಕೊಳ್ಳಲು ಅಮೆರಿಕ ಮತ್ತು ಮಿತ್ರ ರಾಷ್ಟ್ರಗಳು ಮಧ್ಯಪ್ರಾಚ್ಯದ ಎಲ್ಲ ರಾಷ್ಟ್ರಗಳಲ್ಲೂ ಕ್ಷೋಭೆ ಉಂಟುಮಾಡುವ ಮೂಲಕ ತಮ್ಮ ರಾಜಕೀಯ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುತ್ತಿವೆ. ಈ ಪ್ರಯತ್ನದ ಒಂದು ಆಯಾಮವನ್ನು ಸಿರಿಯಾದ ದುರಂತದಲ್ಲಿ ಕಾಣುತ್ತಿದ್ದೇವೆ.

ಯುದ್ಧದ ಭೀಕರ ಪರಿಣಾಮಗಳನ್ನು ಎದುರಿಸಲಾಗದೆ, ತಮ್ಮ ಮೂಲ ನೆಲೆಯನ್ನೇ ಕಳೆದುಕೊಂಡಿರುವ ಲಕ್ಷಾಂತರ ಜನರು ತಮ್ಮ ಭವಿಷ್ಯದ ಮಾರ್ಗವನ್ನರಸಿ ವಲಸೆ ಹೋಗಲಾರಂಭಿಸಿದ್ದಾರೆ. ಇವರ ಭವಿಷ್ಯವನ್ನು ಕುರಿತು ವಿಶ್ವಸಂಸ್ಥೆಗಾಗಲೀ, ಯಾವುದೇ ರಾಷ್ಟ್ರಗಳಿಗಾಗಲೀ ಕಾಳಜಿ ಕಂಡುಬರಲಿಲ್ಲ. ಮಾನವನ ಜೀವಿಸುವ ಹಕ್ಕು ಅಬಾಧಿತ ಎಂದು ಘಂಟಾಘೋಷವಾಗಿ ಸಾರುವ ಸಾರ್ವತ್ರಿಕ ಸಂಸ್ಥೆಗಳು ಮೌನ ವಹಿಸಿದವು. ಮಾನವತೆಯ ಮೂಲ ಸ್ಥಾನ ಎಂದು ಹೆಮ್ಮೆಯಿಂದ ಘೋಷಿಸುವ ಭಾರತ ಸಿರಿಯಾದ ವಲಸೆಗಾರರ ಬಗ್ಗೆ ಅನುಕಂಪ ಸೂಚಿಸಿತೇ ಹೊರತು, ಅಮಾಯಕ ವಲಸೆಗಾರರಿಗೆ ಆಶ್ರಯ ನೀಡುವತ್ತ ಯೋಚಿಸಲೇ ಇಲ್ಲ. ಬಹುಶಃ ಭಯೋತ್ಪಾದನೆ ಮತ್ತು ನಿರ್ದಿಷ್ಟ ಮತಧರ್ಮಗಳ ನಡುವೆ ಕಲ್ಪಿಸಲಾಗಿರುವ ಸೂಕ್ಷ್ಮ ಸಂಬಂಧಗಳು ಭಾರತೀಯ ಸಂವೇದನೆಯನ್ನು ಬಂಧಿಸಿರಬೇಕು. ಜಾಗತಿಕ ವಲಯದಲ್ಲೂ ಪಶ್ಚಿಮ ರಾಷ್ಟ್ರಗಳಲ್ಲಿ ಸಿರಿಯಾದ ವಲಸೆಗಾರರ ಬಗ್ಗೆ ಮಾನವೀಯ ಅನುಕಂಪ ಮೂಡಲು, ಟರ್ಕಿಯ ಕಡಲ ತೀರದಲ್ಲಿ ಕಂಡುಬಂದ ಹಸುಳೆಯ ಶವ ಕಾರಣವಾಗಿತ್ತು. ಸಾವು ಅನಿವಾರ್ಯ, ಮತ್ತು ಆಕಸ್ಮಿಕ, ಆದರೆ ನಿಶ್ಚಿತ. ಒಂದು ಹಸುಳೆಯ ಸಾವು ಜಗತ್ತಿನ ಪ್ರಜ್ಞೆಯನ್ನು ಬಡಿದೆಬ್ಬಿಸಿದ್ದು ಸೋಜಿಗವೇನಲ್ಲ. ಆದರೆ ಹಸುಳೆಯ ಶವ ಕಾಣಿಸುವವರೆಗೂ ವಲಸೆಗಾರರ ನೋವು, ಆಕ್ರಂದನ ಯಾರಿಗೂ ಕೇಳದೆ ಹೋದದ್ದು ಸೋಜಿಗವೇ !

ಭಾರತದ ಸಂದರ್ಭದಲ್ಲಿ ನೋಡಿದಾಗ ದೇವಾಲಯ ಪ್ರವೇಶಿಸಿದ ವ್ಯಕ್ತಿಯೊಬ್ಬನನ್ನು ಸುಟ್ಟು ಭಸ್ಮ ಮಾಡಲಾಗುತ್ತದೆ. ತಮ್ಮ ಮನೆಯಲ್ಲಿ ಮಾಂಸವನ್ನು ಸಂಗ್ರಹಿಸಿಟ್ಟ ವ್ಯಕ್ತಿಯ ಕೊಲೆಯಾಗುತ್ತದೆ. ಸಮಾಜದ ಉನ್ನತಿಗಾಗಿ ವೈಚಾರಿಕತೆಯನ್ನು ಪೋಷಿಸಲು ಯತ್ನಿಸುವ ಬುದ್ಧಿಜೀವಿಗಳು ಹತ್ಯೆಗೀಡಾಗುತ್ತಾರೆ. ಸ್ಥಾಪಿತ ವ್ಯವಸ್ಥೆಯನ್ನು ಪ್ರಶ್ನಿಸುವ ಸೃಜನಶೀಲ ಮನಸ್ಸುಗಳು ಹಲ್ಲೆಗೊಳಗಾಗುತ್ತವೆ. ಈ ಎಲ್ಲಾ ಸಂದರ್ಭಗಳಲ್ಲೂ ಕಾರ್ಯ ಕಾರಣ ಸಂಬಂಧಗಳು ಮುಂಚೂಣಿಗೆ ಬರುತ್ತವೆಯೇ ಹೊರತು, ಮಾನವ ಸಂವೇದನೆ ವ್ಯಕ್ತವಾಗುವುದೇ ಇಲ್ಲ. ಯಾವುದೇ ಅಪರಾಧವನ್ನೂ ಎಸಗದೆಯೇ ಹಂತಕರ ಕೃತ್ಯಕ್ಕೆ ಬಲಿಯಾಗುವ ವ್ಯಕ್ತಿಯನ್ನು ವೈಚಾರಿಕತೆಯ ನೆಲೆಯಲ್ಲಿ, ಜಾತಿ ಅಸ್ಮಿತೆಯ ನೆಲೆಯಲ್ಲಿ, ಮತೀಯ ಅಸ್ಮಿತೆಯ ನೆಲೆಯಲ್ಲಿ ಕಾಣಲಾಗುತ್ತದೆ. ಹಾಗಾಗಿ ಈ ಅಸ್ಮಿತೆಗಳಿಗೆ ವ್ಯತಿರಿಕ್ತವಾದ ಮತ್ತೊಂದು ಅಸ್ಮಿತೆಯ ಲೋಕದ ಪ್ರತಿಪಾದಕರು ಎಂತಹ ದುಷ್ಕೃತ್ಯಗಳನ್ನೂ ಸಮರ್ಥಿಸಿ ಕೊಳ್ಳುತ್ತಾರೆ. ಗೋಮಾಂಸವನ್ನು ಮನೆಯಲ್ಲಿ ಸಂಗ್ರಹಿಸಿದ್ದು, ಬಹಿಷ್ಕೃತರಾಗಿದ್ದರೂ ದೇವಾಲಯ ಪ್ರವೇಶಿಸಿದ್ದು, ವೈಚಾರಿಕತೆಯನ್ನು ಬೆಳೆಸಲು ಯತ್ನಿಸಿದ್ದು, ಪ್ರತಿರೋಧಿ ಗುಂಪಿಗೆ ಅಹಿತಕರ ಎನಿಸುತ್ತದೆ. ಹಾಗಾಗಿ ಹಿಂಸೆ ಒಂದು ರೀತಿಯ ಸಾಪೇಕ್ಷತೆಯನ್ನು ಪಡೆದುಕೊಳ್ಳುತ್ತದೆ.

ಅಯೋಧ್ಯಾ ಕಾಂಡದ ಅವಧಿಯಲ್ಲಿ ಭಾರತೀಯ ಸಮಾಜದಲ್ಲಿ ಮತೀಯ ಅಸ್ಮಿತೆಗಳು ಮತ್ತು ದ್ವೇಷಭಾವಗಳು ನಂಬಿಕೆಗಳ ನೆಲೆಯಲ್ಲಿ ವ್ಯಕ್ತವಾಗುತ್ತಿದ್ದವು. ಬಾಬ್ರಿಯಿಂದ ದಾದ್ರಿಯವರೆಗಿನ ಪಯಣದಲ್ಲಿ ಹಲವಾರು ನದಿಗಳು ಹರಿದುಹೋಗಿವೆ. ಇಂದು ಆಹಾರ ಪದ್ಧತಿ ಅಸ್ಮಿತೆಗಳ ಮಾಪಕವಾಗಿದೆ. ತಮ್ಮ ಆರಾಧ್ಯ ದೈವವನ್ನು ದೇಶದ ಸಮಸ್ತ ಜನತೆ, ತಮ್ಮ ವ್ಯಕ್ತಿಗತ ತತ್ವಗಳನ್ನು ಬದಿಗಿಟ್ಟು, ಗೌರವಿಸಬೇಕು ಎನ್ನುತ್ತಿದ್ದ ಕ್ಷುದ್ರ ಮನಸ್ಸುಗಳು ಇಂದು ತಮ್ಮ ಆಹಾರ ಪದ್ಧತಿಯೇ ಸಮಸ್ತ ಜನತೆಗೆ ಸ್ವೀಕೃತವಾಗಬೇಕು ಎಂದು ಪ್ರತಿಪಾದಿಸುತ್ತಿವೆ. ದಾದ್ರಿ ಪ್ರಕರಣದಲ್ಲಿ ಹತ್ಯೆಗೊಳಗಾದ ಅಮಾಯಕ ಇಖ್ಲಾಕ್‌ನ ಜೀವ ಚರ್ಚೆಯ ಕೇಂದ್ರಬಿಂದು ಆಗಲೇ ಇಲ್ಲ. ಬದಲಾಗಿ ಇಖ್ಲಾಕ್ ತನ್ನ ಮನೆಯಲ್ಲಿ ಗೋಮಾಂಸ ಸಂಗ್ರಹಿಸಿದ್ದನೋ ಇಲ್ಲವೋ ಎನ್ನುವುದು ಚರ್ಚೆಗೊಳಗಾಗಿದೆ. ಇದು ಬಾಬ್ರಿಯ ಬೀಜಗಳು ಗೋದ್ರಾ ನಂತರದಲ್ಲಿ ಮೊಳೆತು ದಾದ್ರಿಯಲ್ಲಿ ಹೆಮ್ಮರವಾಗಿ ಬೆಳೆದಿರುವ ಸೂಚನೆ ಎನ್ನಲು ಅಡ್ಡಿಯಿಲ್ಲ. ಸ್ಥಾಪಿತ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಆಧಿಪತ್ಯದ ಸಂರಕ್ಷಣೆಗೆ ಟೊಂಕ ಕಟ್ಟಿ ನಿಂತಿರುವ ಭಾರತೀಯ ಸಮಾಜದ ಒಂದು ವರ್ಗ ಇಂದು ಜನಸಾಮಾನ್ಯರ ಅಸ್ಮಿತೆಗಳನ್ನು ನಿರ್ದಿಷ್ಟ ಚೌಕಟ್ಟುಗಳಲ್ಲಿ ಬಂಧಿಸಿ ತನ್ನದೇ ಆದ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದೆ. ದಾದ್ರಿ ಈ ನಿಟ್ಟಿನಲ್ಲಿ ಒಂದು ನಿರ್ದಿಷ್ಟ ಆಯಾಮವನ್ನೂ ಒದಗಿಸಿದೆ.

ಆದರೆ ಈ ಘಟನೆಗಳಲ್ಲಿ ಕಳೆದುಹೋಗುತ್ತಿರುವ ವ್ಯಕ್ತಿಗಳ ಶವಪೆಟ್ಟಿಗೆಯ ಅಡಿಯಲ್ಲಿ ಮಾನವ ಸಂವೇದನೆಯೂ ತನ್ನ ಅಂತ್ಯ ಸಂಸ್ಕಾರವನ್ನು ಕಾಣುತ್ತಿದೆ ಎಂದು ಪ್ರಜ್ಞಾವಂತ ಸಮಾಜಕ್ಕೆ ಹೊಳೆಯುತ್ತಲೇ ಇಲ್ಲ. ಸಿರಿಯಾದ ನಿರಾಶ್ರಿತರಿಗೆ ತೋರುವ ಔದಾರ್ಯ, ಹಂತಕರ ಕೃತ್ಯಕ್ಕೆ ಬಲಿಯಾದವರಿಗೆ ತೋರುವ ಅನುಕಂಪ, ದಮನಿತ ದನಿಗಳಿಗೆ ತೋರುವ ಸಾಂತ್ವನ ಇವೆಲ್ಲವೂ ಬಾಹ್ಯ ಸಮಾಜದ ಸ್ವಾಸ್ಥ್ಯಕ್ಕೆ ಅಗತ್ಯ, ನಿಜ. ಆದರೆ ಈ ಘಟನೆಗಳ ಹಿನ್ನೆಲೆಯಲ್ಲಿ ಕಳೆದುಹೋಗುತ್ತಿರುವ ಮಾನವ ಸಂವೇದನೆ ಮತ್ತು ಯಾವುದೇ ಸ್ಥಾಪಿತ ಅಸ್ಮಿತೆಗಳಿಗೆ ಒಳಗಾಗದ ಮಾನವನ ಅಸ್ಮಿತೆ ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿರುವುದು ವಾಸ್ತವ ಮತ್ತು ದುರಂತ. ನಿರಾಶ್ರಿತ ಎನ್ನುವ ಪದವನ್ನು ಭೌಗೋಳಿಕ ನೆಲೆಯಲ್ಲಿ ಮಾತ್ರವೇ ವ್ಯಾಖ್ಯಾನಿಸಿದಾಗ ಸಿರಿಯಾ ಒಂದು ಸಂಕೇತವಾಗಿ ನಿಲ್ಲುತ್ತದೆ. ಆದರೆ ನೆಲೆ ಇದ್ದರೂ ನಿರಾಶ್ರಿತರಾದ ಜನಸಮುದಾಯಗಳಿಗೆ ಯಾವುದೇ ಸಂಕೇತ ಕಂಡುಬರುತ್ತಿಲ್ಲ. ಇಂದು ಜಾಗತಿಕ ಮಟ್ಟದಲ್ಲಿ ಮತ್ತು ವಿಶೇಷವಾಗಿ ಭಾರತದ ಸಂದರ್ಭದಲ್ಲಿ 'ನಿರಾಶ್ರಿತ' ಎನ್ನುವ ಪದಕ್ಕೆ ನಿಜವಾದ ಅರ್ಥವನ್ನು ಕಂಡುಕೊಳ್ಳುವುದಾದರೆ, ಮಾನವೀಯತೆ, ಮಾನವೀಯ ಮೌಲ್ಯ ಮತ್ತು ಮಾನವೀಯ ಸಂವೇದನೆಗಳೇ ನಿರಾಶ್ರಿತವಾಗಿವೆ. ಈ ಸಂವೇದನೆಯ ಪುನರುತ್ಥಾನಕ್ಕಾಗಿ ಇನ್ನೆಷ್ಟು ಕೂಸುಗಳ ಶವಗಳು ಕಡಲ ತೀರಗಳಲ್ಲಿ ಗೋಚರಿಸಬೇಕೋ ?

**ನಾ. ದಿವಾಕರ**
ನಂ. ೩೮, ಬ್ಲಾಕ್ ೨೨, ಮಧುವನ
ಶ್ರೀರಾಮಪುರ, ೨ನೇ ಹಂತ, ಮೈಸೂರು – ೫೭೦೦೨೩






# ಸ್ತ್ರೀ ಸಂವೇದನೆಯ ವಿಭಿನ್ನ ಕಲಾಭಿವ್ಯಕ್ತಿಯ ಡಾ|| ಚರಿತಾ



ಮೈಸೂರಿನ ಕಾವಾದಲ್ಲಿ ಚಿತ್ರಕಲೆಯಲ್ಲಿ ಪದವಿ. ಪಶ್ಚಿಮ ಬಂಗಾಳದ ಶಾಂತಿನಿಕೇತನದಲ್ಲಿ ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ. ಕರ್ನಾಟಕ ಮುಕ್ತ ವಿ.ವಿ.ಯಿಂದ ಕಲಾ ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ. ಮೈಸೂರು ವಿ.ವಿ.ಯಿಂದ ದೃಶ್ಯಕಲೆಯಲ್ಲಿ ಪಿಎಚ್.ಡಿ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಕೆಲವು ವರ್ಷಗಳ ಅಧ್ಯಾಪನ ವೃತ್ತಿ. ಪ್ರಸ್ತುತ, ಮೈಸೂರು ವಿ.ವಿ.ಯ ಇತಿಹಾಸ ವಿಭಾಗದಲ್ಲಿ ಪೋಸ್ಟ್ ಡಾಕ್ಟರಲ್ ಫೆಲೊ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಹಲವು ಕಾರ್ಯಾಗಾರಗಳು, ಸೆಮಿನಾರ್‌ಗಳು ಮತ್ತು ಕಲಾಪ್ರದರ್ಶನಗಳಲ್ಲಿ ಡಾ|| ಚರಿತಾ ಅವರು ಭಾಗವಹಿಸಿದ್ದಾರೆ.

ಹೆಚ್ಚಾಗಿ ಆಕ್ರಿಲಿಕ್ ಮಾಧ್ಯಮದಲ್ಲಿ ಚಿತ್ರರಚನೆ. ರೇಖಾಚಿತ್ರ ರಚನೆಯಲ್ಲಿ ಹೆಚ್ಚು ಆಸಕ್ತಿ. ಅಲ್ಲದೆ, ಇನ್‌ಸ್ಟಲೇಶನ್ ಮಾಧ್ಯಮದಲ್ಲೂ ಹಲವು ಕಲಾಕೃತಿಗಳ ರಚನೆ. ಹಲವು ವಿಡಿಯೊ ಸಾಕ್ಷ್ಯಚಿತ್ರಗಳನ್ನೂ ಮಾಡಿದ್ದಾರೆ.

'ಉಸಿರಾಡುವ ಬಣ್ಣಗಳು' ಎಂಬ ಪುಸ್ತಕವನ್ನೊಳಗೊಂಡಂತೆ ದೃಶ್ಯಕಲೆ ಕುರಿತ ಹಲವು ಬರಹಗಳು ಪ್ರಕಟಗೊಂಡಿವೆ. ಸಂಗೀತದಲ್ಲಿ ವಿಶೇಷ ಆಸಕ್ತಿ. 'ನನ್ನ ಪಾಡಿಗೆ ನಾನು' ಹಾಗೂ 'ಗೋರಂಟಿ' ಎಂಬ ಬ್ಲಾಗ್‌ಗಳಲ್ಲಿ ಡಾ|| ಚರಿತಾ ಅವರ ಚಿತ್ರ ಮತ್ತು ಚಿಂತನೆಗಳನ್ನು ನೋಡಬಹುದು.

– ಚಿತ್ರಲೇಖ








Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

